


# ಬಸವಣ್ಣನವರ ವಚನ ಸಂಪುಟ



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

ಬಸವಣ್ಣನವರ ವಚನಸಂಪುಟ

ಸಂ : ಡಾ: ಎಂ.ಎಂ. ಕಲಬುರ್ಗಿ

ಅಲ್ಲಮಪ್ರಭುದೇವರ ವಚನಸಂಪುಟ

ಸಂ : ಡಾ: ಬಿ.ವ್ಹಿ. ಮಲ್ಲಾಪುರ

ಚೆನ್ನಬಸವಣ್ಣನವರ ವಚನಸಂಪುಟ

ಸಂ : ಡಾ: ಬಿ.ವ್ಹಿ. ಮಲ್ಲಾಪುರ

ಸಿದ್ಧರಾಮೇಶ್ವರ ವಚನಸಂಪುಟ

ಸಂ : ಡಾ: ಎಸ್. ವಿದ್ಯಾಶಂಕರ

ಶಿವಶರಣೆಯರ ವಚನಸಂಪುಟ

ಸಂ : ಡಾ: ವೀರಣ್ಣ ರಾಜೂರ

ಸಂಕೀರ್ಣ ವಚನಸಂಪುಟ : ಒಂದು

ಸಂ : ಡಾ: ಎಂ.ಎಂ. ಕಲಬುರ್ಗಿ

ಸಂಕೀರ್ಣ ವಚನಸಂಪುಟ : ಎರಡು

ಸಂ : ಡಾ: ಎಸ್. ವಿದ್ಯಾಶಂಕರ.

ಸಂಕೀರ್ಣ ವಚನಸಂಪುಟ : ಮೂರು

ಸಂ : ಡಾ: ಬಿ.ಆರ್. ಹಿರೇಮಠ

ಸಂಕೀರ್ಣ ವಚನಸಂಪುಟ : ನಾಲ್ಕು

ಸಂ : ಡಾ: ಬಿ.ಆರ್. ಹಿರೇಮಠ

ಸಂಕೀರ್ಣ ವಚನಸಂಪುಟ : ಐದು

ಸಂ : ಡಾ: ವೀರಣ್ಣ ರಾಜೂರ

ಸಂಕೀರ್ಣ ವಚನಸಂಪುಟ : ಆರು

ಸಂ : ಎಸ್. ಶಿವಣ್ಣ

ಸಂಕೀರ್ಣ ವಚನಸಂಪುಟ : ಏಳು

ಸಂ : ಡಾ: ವೀರಣ್ಣ ರಾಜೂರ

ಸಂಕೀರ್ಣ ವಚನಸಂಪುಟ : ಎಂಟು

ಸಂ : ಡಾ: ವೀರಣ್ಣ ರಾಜೂರ

ಸಂಕೀರ್ಣ ವಚನಸಂಪುಟ : ಒಂಬತ್ತು

ಸಂ : ಡಾ: ವೀರಣ್ಣ ರಾಜೂರ

ವಚನ ಪರಿಭಾಷಾಕೋಶ

ಸಂ : ಡಾ: ಎಸ್. ವಿದ್ಯಾಶಂಕರ

ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ : ಸಂಪುಟ – ೧

# ಬಸವಣ್ಣನವರ ವಚನಸಂಪುಟ



# ಬಸವಣ್ಣನವರ ವಚನಸಂಪುಟ

ಸಂಪಾದಕ

ಡಾ. ಎಂ. ಎಂ. ಕಲಬುರ್ಗಿ
ಕನ್ನಡ ಪ್ರಾಧ್ಯಾಪಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಬೆಂಗಳೂರು

BASAVANNANAVARA VACHANA SAMPUTA : Complete Vachanas of Shree Basavanna. Ed.by Dr. M.M Kalburgi, Professor, Institute of Kannada Studies, Karnataka University, Dharwar- 580 003 and Published by Sri P.S.V. Rao, Commissioner, Department of Kannada and Culture, No.14/3A, Nrupatunga Road, Bangalore- 560 002.



Pp xxxII+440





ಪ್ರಥಮ ಮುದ್ರಣ : ೧೯೯೩

ಪ್ರತಿ: ಐದು ಸಾವಿರ

ಬೆಲೆ : ರೂ ೪೦೦-೦೦.
(೧೫ ಸಂಪುಟಗಳ ಸೆಟ್)

ಅಕ್ಷರ ಜೋಡಣೆ :
ಫ.ಶಿ ಭಾಂಡಗೆಯವರ ತ್ವರಿತ ಮುದ್ರಣ
ಕುಂಬಾರ ಗರಡಿಮನೆ ಹತ್ತಿರ ಗಂಗಾಪೂರ ಓಣಿ
ಗದಗ - ೫೮೨ ೧೦೧

ಮುದ್ರಣ:
ಗೀತಾಂಜಲಿ ಪ್ರಿಂಟರ್ಸ್
ಎಂ.ಎಸ್. ರಾಮಯ್ಯ ಇಂಡಸ್ಟ್ರಿಯಲ್ ಎಸ್ಟೇಟ್
ಗೋಕುಲ ಬೆಂಗಳೂರು - 560 054.

# ಪರಿವಿಡಿ

ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ

## ಸಂಪಾದಕ ಮಂಡಳಿ


ಸಂಪಾದಕರು

**ಡಾ. ಎಂ. ಎಂ. ಕಲಬುರ್ಗಿ**

ಕನ್ನಡ ಪ್ರಾಧ್ಯಾಪಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಸದಸ್ಯರು

**ಡಾ. ಎಂ. ಚಿದಾನಂದಮೂರ್ತಿ**

ವಿಶ್ರಾಂತ ಕನ್ನಡ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

**ಡಾ. ಸಿ. ಪಿ. ಕೃಷ್ಣಕುಮಾರ**

ಕನ್ನಡ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾಲಯ, ಮೈಸೂರು

**ಡಾ. ಎಸ್. ವಿದ್ಯಾಶಂಕರ**

ಕನ್ನಡ ರೀಡರ್, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

**ಕಮಿಷನರ್**

ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು



# ಮುನ್ನುಡಿ

"ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ"ಯ ಅಂಗವಾಗಿ ಬೆಳಕು ಕಾಣುತ್ತಲಿರುವ ಎಲ್ಲ ಶರಣರ ಎಲ್ಲ ವಚನಗಳ ೧೫ ಸಂಪುಟಗಳನ್ನು ಏಕಕಾಲಕ್ಕೆ ಕರ್ನಾಟಕದ ಜನತೆಯ ಕೈಗೆ ನೀಡಲು ತುಂಬ ಸಂತೋಷವೆನಿಸುತ್ತದೆ.

ಕನ್ನಡ ನಾಡಿನ ಪ್ರಥಮ ಪ್ರಜಾಸಾಹಿತ್ಯವಾದ ವಚನವಾಙ್ಮಯ ನಮ್ಮ ಪರಂಪರೆಯ ಅಪೂರ್ವ ಸಾಂಸ್ಕೃತಿಕ ಆಸ್ತಿಯಾಗಿದೆ. ಅನೇಕ ಜನ ವಿದ್ವಾಂಸರು, ಅನೇಕ ಸಂಸ್ಥೆಗಳು ಈ ಸಾಹಿತ್ಯವನ್ನು ಬೆಳಕಿಗೆ ತರಲು ಕಳೆದ ನೂರು ವರ್ಷಗಳಿಂದ ದುಡಿಯುತ್ತ ಬಂದುದು ಇದರ ವ್ಯಾಪಕತೆಯ ದ್ಯೋತಕವಾಗಿದೆ. ಹೀಗೆ ಪ್ರಕಟವಾಗಿದ್ದ ಮತ್ತು ಅಪ್ರಕಟಿತ ಸ್ಥಿತಿಯಲ್ಲಿದ್ದ ಈ ಸಾಹಿತ್ಯವನ್ನು ಸಮಗ್ರರೂಪದಲ್ಲಿ ವಚನ ಪರಿಭಾಷಾಕೋಶವೂ ಒಳಗೊಂಡಂತೆ ೧೫ ಸಂಪುಟಗಳ ಮೂಲಕ ಕರ್ನಾಟಕ ಸರ್ಕಾರ ಹೊರತರುತ್ತಿರುವುದು, ನಮ್ಮ ಸಾಹಿತ್ಯ ಪ್ರಕಟಣೆಯ ಇತಿಹಾಸದಲ್ಲಿ ಒಂದು ಗಣ್ಯ ಸಾಧನೆಯೆಂದೇ ಹೇಳಬೇಕು. ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ತನ್ನ ಕರ್ತವ್ಯವೆಂದು ಭಾವಿಸಿ, ಕರ್ನಾಟಕದ ಪ್ರಜಾಸರ್ಕಾರ ಈ ಕೆಲಸವನ್ನು ಪೂರೈಸಿದೆ.

ವಚನಸಾಹಿತ್ಯಕ್ಕೆ ನಮ್ಮ ನಾಡಿನಲ್ಲಿ ಸುಮಾರು ೮೦೦ ವರ್ಷಗಳ ಇತಿಹಾಸವಿದೆ. ಈವರೆಗೆ ಬಸವಯುಗದ ಬರವಣಿಗೆಯನ್ನು ಹೊರತರಲು ವಿದ್ವಾಂಸರು ಹೆಚ್ಚು ಗಮನ ಕೊಟ್ಟಿದ್ದಾರೆ. ಈ ಯೋಜನೆ ಅದನ್ನೂ ಒಳಗೊಂಡು ಬಸವೋತ್ತರ ಯುಗದ ಮೇಲೆಯೂ ಒತ್ತುಕೊಟ್ಟುದು ವಿಶೇಷವೆನಿಸಿದೆ. ಇದರಿಂದಾಗಿ ಈ ಯೋಜನೆಗೆ ಒಂದು ಸಾಹಿತ್ಯ ಪ್ರಕಾರದ ಪ್ರಕಟಣೆ ಎಂಬ ಕೀರ್ತಿ ಸಲ್ಲುತ್ತದೆ.

ವಚನವೆಂಬುದು ಚಳುವಳಿ ಸಾಹಿತ್ಯಪ್ರಕಾರವಾಗಿದೆ. ಆತ್ಮಕಲ್ಯಾಣದೊಂದಿಗೆ ಸಮಾಜಕಲ್ಯಾಣವನ್ನೂ ಕಾರ್ಯಗತಗೊಳಿಸಲು ಹೋರಾಡಿ ಮಡಿದ ಹುತಾತ್ಮರ ಸಾಹಿತ್ಯವಿದು. ರಾಜಸತ್ತೆ, ಪುರೋಹಿತಸತ್ತೆ, ಪುರುಷಸತ್ತೆಗಳೆಂಬ ಪ್ರತಿಗಾಮಿ ಸತ್ತೆಗಳ ವಿರುದ್ಧ, ಕರ್ನಾಟಕದ ಎಲ್ಲ ಸಮಾಜದ ಜನರೂ ನಡೆಸಿದ ಹೋರಾಟದ ಉಪನಿಷ್ಪತ್ತಿಯಾದ ಈ ಸಾಹಿತ್ಯದಲ್ಲಿ ಜೀವಪರಧ್ವನಿಗಳು ದಟ್ಟವಾಗಿ ಕೇಳಿಸುತ್ತವೆ. ಪ್ರಾಚೀನ ಕರ್ನಾಟಕದ ಬೌದ್ಧಿಕ ಶ್ರಮದ ವಿದ್ವತ್‌ಜನತಾಪ್ರತಿಭೆಯ ಸಾಹಿತ್ಯಕ್ಕಿಂತ ದೈಹಿಕ ಶ್ರಮದ ಜನತಾ ಪ್ರತಿಭೆಯ ಸಾಹಿತ್ಯ ಹೇಗೆ ಭಿನ್ನವಾಗಿದೆಯೆಂಬುದನ್ನು ಕಾಣಬೇಕಾದರೆ ನಾವು ವಚನಸಾಹಿತ್ಯಕ್ಕೇ ಮೊರೆಹೋಗಬೇಕು. "ವಿಪ್ರ ಮೊದಲು ಅಂತ್ಯಜ ಕಡೆಯಾಗಿ"

ಸಮಾಜದ ಎಲ್ಲ ವರ್ಗದ ಪುರುಷ ಮತ್ತು ಮಹಿಳೆಯರ ಸಂಕೀರ್ಣ ಧ್ವನಿಗಳು ಇದರಲ್ಲಿ ತುಂಬ ಕಲಾತ್ಮಕವಾಗಿ ಎರಕಗೊಂಡಿವೆ. ಹೀಗಾಗಿ ಸಮಗ್ರ ಕರ್ನಾಟಕದ ಪ್ರಾತಿನಿಧಿಕ ಧ್ವನಿಯೆನಿಸಿದ ಈ ಸಾಹಿತ್ಯವನ್ನು ತನ್ನ ಕರ್ತವ್ಯದ ಭಾಗವೆಂದು ಕರ್ನಾಟಕ ಸರ್ಕಾರ ಪ್ರಕಟಿಸಿ, ಸುಲಭ ಬೆಲೆಯಲ್ಲಿ ಜನತೆಗೆ ನೀಡುತ್ತಿದೆ.

ಈ ಯೋಜನೆಯ ನೇತೃತ್ವ ವಹಿಸಿ ದುಡಿದ ಡಾ. ಎಂ. ಎಂ. ಕಲಬುರ್ಗಿ ಅವರ ಶ್ರದ್ಧೆಯನ್ನು, ಸಂಪಾದಕ ಮಂಡಳಿಯ ಮಾರ್ಗದರ್ಶನವನ್ನು, ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಐತಿಹಾಸಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

ಜನವರಿ ೩೦, ೧೯೯೩<br>ಬೆಂಗಳೂರು

ಎಂ. ವೀರಪ್ಪ ಮೊಯಿಲಿ<br>ಮುಖ್ಯಮಂತ್ರಿಗಳು





# ಪ್ರಕಾಶಕರ ಮಾತು

ವಚನಸಾಹಿತ್ಯ, ಕರ್ನಾಟಕದ ಬಹುದೊಡ್ಡ ಸಾಂಸ್ಕೃತಿಕ ಸಂಪತ್ತು. ಪ್ರಾಚೀನ ಕರ್ನಾಟಕದ ಜನಸಾಮಾನ್ಯರ ಧ್ವನಿಯಾಗಿರುವ ಇದನ್ನು ಪ್ರಕಟಿಸುವುದು, ಪ್ರಸಾರ ಮಾಡುವುದು ಜನತಂತ್ರ ಸರಕಾರದ ಮುಖ್ಯಕರ್ತವ್ಯವಾಗಿದೆ.

ಭಾರತದಲ್ಲಿ ಆತ್ಮೋದ್ಧಾರದ ಬಗ್ಗೆ ಉದಾತ್ತ ತತ್ವಗಳನ್ನು ಪ್ರತಿಪಾದಿಸುತ್ತ ಬಂದಿದ್ದರೂ ಸಮಾಜೋದ್ಧಾರದ ಬಗ್ಗೆ ಉಪೇಕ್ಷೆ ಬೆಳೆದು, ಅಲ್ಲಿ ಶೋಷಣೆ ವರ್ಧಿಸುತ್ತ ಬಂದುದು ನಮ್ಮ ಇತಿಹಾಸದ ಒಂದು ವಿಪರ್ಯಾಸವೇ ಸರಿ. ೧೨ನೆಯ ಶತಮಾನದಲ್ಲಿ ಉಲ್ಬಣಗೊಂಡಿದ್ದ ಈ ವಿಷಮ ಪರಿಸ್ಥಿತಿಯನ್ನು ನಾಶಗೊಳಿಸಿ, ಸಮಸ್ಥಿತಿಯನ್ನು ಸಮಾಜದಲ್ಲಿ ತರಲು ಹೋರಾಡಿದವರು, ಕಲ್ಯಾಣದ ಶರಣರು. ಈ ಕಾರ್ಯಕ್ಕಾಗಿ ಅವರು ಕೈಕೊಂಡ ಜನಪರ ಆಂದೋಲನ ನಮ್ಮ ದೇಶದ ಇತಿಹಾಸದಲ್ಲಿಯೇ ಒಂದು ವಿಶಿಷ್ಟ ಘಟನೆಯಾಗಿದೆ.

ಭಾರತದಲ್ಲಿ ರಾಜಸತ್ತೆಯ ಸ್ಥಾಪನೆಗಾಗಿ ರಾಜರು, ಮತಸತ್ತೆಯ ಸ್ಥಾಪನೆಗಾಗಿ ಧರ್ಮಗಳು ಪರಸ್ಪರ ಸಂಘರ್ಷಕ್ಕಿಳಿದುದು ಸರ್ವಶ್ರುತ. ಆದರೆ ಸಾಮಾಜಿಕ ನ್ಯಾಯದ ಸ್ಥಾಪನೆಗಾಗಿ ಈ ರಾಜಸತ್ತೆ, ಮತಸತ್ತೆಗಳ ವಿರುದ್ಧ ಸಮಾಜದ ವಿವಿಧ ಸ್ತರಗಳ ಜನತೆ ಆದರಲ್ಲಿಯೂ ದೀನರು–ದಲಿತರು–ಮಹಿಳೆಯರು ಬೀದಿಗಿಳಿದು ನಡೆಸಿದ ಈ ಆಂದೋಲನ, ಇಪ್ಪತ್ತನೆಯ ಶತಮಾನವೂ ಆಶ್ಚರ್ಯಪಡುವ ಸಂಗತಿಯಾಗಿದೆ.

ಅಂದಿನ ಸನ್ನಿವೇಶಕ್ಕೆ ಅನುಗುಣವಾಗಿ ಧಾರ್ಮಿಕ ಕ್ಷೇತ್ರದಲ್ಲಿ ಅಂಕುರಿಸಿದ ಈ ಆಂದೋಲನ ಸಾಮಾಜಿಕ ಕ್ಷೇತ್ರವನ್ನೂ ಆವರಿಸಿದ ಕಾರಣ, ಇದನ್ನು 'ಸಮಾಜೋಧಾರ್ಮಿಕ' ಆಂದೋಲನವೆಂದು ಗುರುತಿಸಲಾಗುತ್ತದೆ. ಸಮಾಜವೆನ್ನುವುದು ಸಂಕೀರ್ಣ ವ್ಯವಸ್ಥೆ. ಆದರ ಎಲ್ಲ ಸ್ತರಗಳನ್ನೂ ಎಲ್ಲ ಮಗ್ಗಲುಗಳನ್ನೂ ಬದಲಿಸಲು ಮಾಡಿದ ಪ್ರಯತ್ನವಾಗಿರುವುದರಿಂದ ಇದು ಒಂದು "ಸಮಗ್ರ ಆಂದೋಲನ"ವಾಗಿದೆ. ಈ ಆಂದೋಲನದ ನೇರ ಧ್ವನಿ, ವಚನಸಾಹಿತ್ಯ.

ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನಿಂದಾಗಿ ವ್ಯಕ್ತಿಸ್ವಾತಂತ್ರ್ಯ ಪಡೆದ ಜನವರ್ಗವು ವ್ಯಕ್ತಪಡಿಸಿದ ಅಭಿಪ್ರಾಯಸ್ವಾತಂತ್ರ್ಯದ ಫಲ, ಈ ಸಾಹಿತ್ಯ. ಹೀಗಾಗಿ ಇಲ್ಲಿ ಆತ್ಮವಿಮರ್ಶೆಯಷ್ಟೇ ವಿಪುಲವಾಗಿ ಸಮಾಜವಿಮರ್ಶೆಯನ್ನೂ ಕಾಣಬಹುದಾಗಿದೆ.

ಅದರಲ್ಲಿಯೂ ವರ್ಣಭೇದ ನಿರಾಕರಣೆ, ವರ್ಗಭೇದ ನಿರಾಕರಣೆ, ಲಿಂಗಭೇದ ನಿರಾಕರಣೆಗಳಂಥ ವಿಚಾರಗಳು ಸ್ಫೋಟಗೊಂಡುದು ಲಕ್ಷಿಸತಕ್ಕ ಸಂಗತಿಯಾಗಿದೆ. ಇಲ್ಲಿ ಪುರುಷರಷ್ಟೇ ಪ್ರಧಾನವಾಗಿ ಮಹಿಳೆಯರೂ ಕುಲಜರಷ್ಟೇ ಪ್ರಧಾನವಾಗಿ ಅಂತ್ಯಜರೂ ಪ್ರಭುಗಳಷ್ಟೇ ಪ್ರಧಾನವಾಗಿ ಪ್ರಜೆಗಳೂ ಬಾಳಿದುದು, ಬರೆದುದು ಬಹುಶಃ ಜಗತ್ತಿನ ಇತಿಹಾಸದಲ್ಲಿಯೇ ಏಕೈಕ ಉದಾಹರಣೆಯಾಗಿದೆ. ಇಂಥ ವಿಚಾರಶೀಲರ, ಇವರ ತತ್ತ್ವ–ಸಾಹಿತ್ಯಗಳ ಉತ್ತರಾಧಿಕಾರಿಗಳಾದುದು ನಮ್ಮ ಭಾಗ್ಯ; ಇವರ ಸಾಹಿತ್ಯಸಂಪತ್ತನ್ನು ರಕ್ಷಿಸುವುದು, ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ಕರ್ತವ್ಯದ ಭಾಗವಾಗಿ "ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ"ಯನ್ನು ಕರ್ನಾಟಕ ಸರಕಾರ ಕೈಗೆತ್ತಿಕೊಂಡಿತು.

ಈ ವರೆಗೆ ವಚನಸಾಹಿತ್ಯ ಬಿಡಿಬಿಡಿಯಾಗಿ ಭಾಗಶಃ ಪ್ರಕಟವಾಗಿದ್ದಿತು, ಕೆಲವು ಭಾಗ ಅಪ್ರಕಟಿತ ಸ್ಥಿತಿಯಲ್ಲಿ ಉಳಿದಿದ್ದಿತು. ಇದೆಲ್ಲವನ್ನು ಕ್ರೋಡೀಕರಿಸಿ, ಪರಿಷ್ಕರಿಸಿ ಪ್ರಕಟಿಸುವುದು ಶ್ರಮದ ಕೆಲಸ. ಡಾ. ಎಂ. ಎಂ. ಕಲಬುರ್ಗಿಯವರ ಸಂಪಾದಕತ್ವದಲ್ಲಿ, ಅನೇಕ ಜನ ವಿದ್ವಾಂಸರ ಮತ್ತು ಸಂಪಾದಕ ಮಂಡಳಿಯ ಸದಸ್ಯರ ಸಂಯುಕ್ತ ಪರಿಶ್ರಮದಿಂದ ಈ ಬೃಹತ್ ಯೋಜನೆ ಪೂರ್ತಿಗೊಂಡುದು ಸಂತೋಷದ ಸಂಗತಿ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಆಶ್ರಯದಲ್ಲಿ ಅಸ್ತಿತ್ವಕ್ಕೆ ಬಂದು, ನಿರ್ದಿಷ್ಟ ಅವಧಿಯಲ್ಲಿ ಪೂರ್ಣಗೊಂಡ ಈ ಐತಿಹಾಸಿಕ ಯೋಜನೆಗಾಗಿ ಸಂಬಂಧಪಟ್ಟ ಎಲ್ಲ ವಿದ್ವಾಂಸರನ್ನು ಅಭಿನಂದಿಸುತ್ತ, ಕನ್ನಡ ಜನತೆಗೆ ಈ ಸಂಪುಟಗಳನ್ನು ಅರ್ಪಿಸುತ್ತೇವೆ.

**ಪಿ. ಎಸ್. ವಿ. ರಾವ್**
ಕಮಿಷನರ್

# ಸಂಪಾದಕೀಯ



ಡಾ. ಎಂ. ಎಂ. ಕಲಬುರ್ಗಿ

ಕರ್ನಾಟಕದ ಇತಿಹಾಸದಲ್ಲಿ ಶಿವಶರಣರ ಚಳುವಳಿ ಒಂದು ಅಪೂರ್ವಘಟನೆ, ವಚನಗಳ ಸೃಷ್ಟಿ ಒಂದು ಅನನ್ಯಪ್ರಯೋಗ. ಸಮಾಜದ ಎಲ್ಲ ವರ್ಗ, ಎಲ್ಲ ವರ್ಣಗಳ ಜನಸಮುದಾಯ ಬಸವಣ್ಣನವರ ನೇತೃತ್ವದಲ್ಲಿ ಕೈಕೊಂಡಿದ್ದ ವ್ಯಕ್ತಿಕಲ್ಯಾಣ ಮತ್ತು ಸಮಾಜಕಲ್ಯಾಣ ಚಳುವಳಿಯ ಸೃಷ್ಟಿಯೆನಿಸಿದ ಈ ವಚನಗಳು, ಜಾಗತಿಕ ಸಾಹಿತ್ಯದ ಮಹತ್ವಪೂರ್ಣ ಭಾಗವೆನಿಸಿವೆ.

'ವಚನ' ಶಬ್ದಕ್ಕೆ ಇಲ್ಲಿ ಗದ್ಯ ಸಾಹಿತ್ಯಪ್ರಕಾರವೆಂದು ಅರ್ಥವಲ್ಲ; ಪ್ರತಿಜ್ಞೆ, ಆತ್ಮಸಾಕ್ಷಿಯ ಮಾತು ಎಂದು ಅರ್ಥ. ನಡೆ ಹೇಗೇ ಇರಲಿ, ನುಡಿ ಮಾತ್ರ ಕಲಾತ್ಮಕವಾಗಿದ್ದುದು 'ರಚನೆ'ಯಾದರೆ, ನಡೆದಂತೆ ನುಡಿದ ಆತ್ಮಸಾಕ್ಷಿಯ ವಾಣಿ 'ವಚನ'ವೆನಿಸುತ್ತದೆ.

ವಚನಗಳು ಆಚಾರ್ಯರ ಸಾಹಿತ್ಯವಲ್ಲ, ಅನುಭಾವಿಗಳ ಸಾಹಿತ್ಯ. ಆಚಾರ್ಯರು ಜೀವಿಸಿರುವಾಗಲೇ ತಮ್ಮ ವಿಚಾರಗಳನ್ನು ಬರೆದು, ಅವುಗಳಿಗೆ ಸಂವಿಧಾನಾತ್ಮಕ ಮುದ್ರೆ ಒತ್ತುತ್ತಾರೆ. ಅನುಭಾವಿಗಳು ಮಾತ್ರ ತಮ್ಮ ಚಿಂತನೆಯನ್ನು ಹೃದಯದಿಂದ ಹೃದಯಕ್ಕೆ ಮುಟ್ಟುವಂತೆ ಬಿಡಿಮಾತುಗಳ ಮೂಲಕ ಹೇಳುತ್ತಾರೆ. ಬಿಡಿಮುತ್ತುಗಳಂತೆ ಸೂರೆಯಾದ ಅವುಗಳನ್ನು ಸಂಗ್ರಹಿಸುವ, ಸಂಕಲಿಸುವ, ಸಂಪಾದಿಸುವ ಕೆಲಸವನ್ನು ಉತ್ತರಕಾಲೀನ ಅನುಯಾಯಿಗಳು ಮಾಡುತ್ತಾರೆ. ಏಸುವಿನ ವಾಣಿಯಾದ ಬೈಬಲ್, ಮಹಮ್ಮದನ ಉಪದೇಶವಾದ ಕುರಾನ್, ಬುದ್ಧನ ಬೋಧೆಯಾದ ತ್ರಿಪಿಟಕ, ಶರಣರ ಸಂದೇಶವಾದ ವಚನಕೃತಿಗಳು ಈ ಬಗೆಯ ಉತ್ತರಕಾಲೀನ ಸಂಕಲನಗಳಾಗಿವೆ.

ಮೂಲತಃ ವಚನನಿಧಿ ಜನರಿಂದ, ಜನರಿಗಾಗಿ ಹುಟ್ಟಿ ಜನರ ಮಧ್ಯದಲ್ಲಿ ಬಾಳಿದ ಸಾಹಿತ್ಯವಾಗಿದೆ. ಹೀಗಾಗಿ ಹನ್ನೆರಡರಿಂದ ಹದಿನೈದನೆಯ ಶತಮಾನಕ್ಕೆ ಬರುವಷ್ಟರಲ್ಲಿ ಅದಕ್ಕೆ ವಿಪುಲ ಭಿನ್ನಪಾಠಗಳು ಹುಟ್ಟಿಕೊಂಡವು. ಆಮೇಲೆ ಸಂಕಲನ–ಸಂಪಾದನ ಕಾರ್ಯದಿಂದಾಗಿ ಕೆಲವೊಮ್ಮೆ ಪ್ರಕ್ಷಿಪ್ತ ವಚನಗಳೂ ತಲೆಯೆತ್ತಿದವು. ಈ ಗೊಂದಲ ಕಾರಣವಾಗಿ ಕವಿಸಾಹಿತ್ಯಕ್ಕಿಂತ ವಚನಸಾಹಿತ್ಯದ ಸಂಪಾದನಕಾರ್ಯ ತುಂಬ ಜಟಿಲಸ್ವರೂಪದ್ದಾಗಿದೆ.

ಪ್ರಾಚೀನ ಕನ್ನಡ ಸಾಹಿತ್ಯದ ಪ್ರಕಟನಕಾರ್ಯವನ್ನು ಮೊದಲು ಕೈಗೆತ್ತಿಕೊಂಡವರು, ಕ್ರೈಸ್ತ ಪಾದ್ರಿಗಳು. ಜೈನ ಪುರಾಣ–ಕಾವ್ಯಗಳನ್ನು, ವೈದಿಕ ಪುರಾಣ–ಕೀರ್ತನೆಗಳನ್ನು, ವೀರಶೈವ ಶಾಸ್ತ್ರ–ಪುರಾಣಗಳನ್ನು ಪ್ರಕಟಿಸಿದ ಇವರು ವಚನಸಾಹಿತ್ಯವನ್ನು ಮಾತ್ರ ತಪ್ಪಿಯೂ ಪ್ರಕಟಿಸಲಿಲ್ಲ. ದೇಶೀ ವಿದ್ವಾಂಸರೇ ಈ ಕೆಲಸವನ್ನು ಪ್ರಾರಂಭ ಮಾಡಬೇಕಾಯಿತು.

ಈ ದಿಸೆಯಲ್ಲಿ ಮೊದಲು ಪ್ರಕಟವಾದ ಕೃತಿ (೧೮೮೩) ‘ಅಪ್ರಮಾಣ ಕೂಡಲ ಸಂಗಮದೇವಾ’ ಮುದ್ರಿಕೆಯ ವಚನಗಳನ್ನೊಳಗೊಂಡ “ಶಿಖಾರತ್ನಪ್ರಕಾಶ”. ಆಮೇಲೆ ಒಂದು ಮೈಲಿಗಲ್ಲಿನಂತೆ ಪ್ರಕಟವಾದ ವಚನಕೃತಿ, ಬಸವಣ್ಣನವರ ಷಟ್‌ಸ್ಥಲವಚನ ಸಂಪುಟ. ಅದು ಬೆಳಕು ಕಂಡುದು ೧೮೮೯ರಲ್ಲಿ. ಅಲ್ಲಿಂದ ಸರಿಯಾಗಿ ಒಂದು ಶತಮಾನ ಮುಗಿಯುವಷ್ಟರಲ್ಲಿ ಅಂದರೆ ೧೯೮೮ರಲ್ಲಿ ‘ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ’ ಅಸ್ತಿತ್ವಕ್ಕೆ ಬಂದುದು ಒಂದು ಯೋಗಾಯೋಗವಾಗಿದೆ; ವಚನಸಾಹಿತ್ಯದ ಪ್ರಕಟನಚರಿತ್ರೆಯ ಶತಮಾನಸ್ಮರಣೆಯಾಗಿದೆ.

ವಚನಸಾಹಿತ್ಯ ಪ್ರಕಟನೆಯ ಪ್ರಥಮ ವ್ಯಾಪಕ ಪ್ರಯತ್ನವೊಂದು ವಿಜಾಪುರದ ಶಿವಾನುಭವ ಗ್ರಂಥಮಾಲೆಯ ಮೂಲಕ ಡಾ. ಫ. ಗು. ಹಳಕಟ್ಟಿ ಅವರಿಂದ ಜರುಗಿತು. ಆಮೇಲೆ ಮತ್ತೊಂದು ಯೋಜನಾಬದ್ಧ ಪ್ರಯತ್ನವು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಆಶ್ರಯದಲ್ಲಿ ಡಾ. ಆರ್. ಸಿ. ಹಿರೇಮಠ ಅವರಿಂದ ನಡೆಯಿತು. ಇತ್ತೀಚೆಗೆ ಗದುಗಿನ ತೋಂಟದಾರ್ಯಮಠದ ವೀರಶೈವ ಅಧ್ಯಯನ ಸಂಸ್ಥೆಯು ಒಂದು ಕ್ರಮಬದ್ಧ ಯೋಜನೆಯ ಮೂಲಕ ಈ ಕೆಲಸವನ್ನು ಮುಂದುವರಿಸಿ, ಮುಗಿಸುವ ಹಂತದಲ್ಲಿದೆ. ವಚನಸಾಹಿತ್ಯದ ಪ್ರಕಟನಕಾರ್ಯ ಹೀಗೆ ವಿಜಾಪುರದಲ್ಲಿ ಪ್ರಾರಂಭವಾಗಿ, ಧಾರವಾಡದಲ್ಲಿ ಬೆಳೆದು, ಗದುಗಿನಲ್ಲಿ ಒಂದು ನಿಲುಗಡೆಗೆ ಬರುತ್ತಿದ್ದಂತೆಯೇ ಈಗ ನಾಲ್ಕನೆಯ ಘಟ್ಟದಲ್ಲಿ ‘ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನ ಯೋಜನೆ’ಯ ಹೆಸರಿನಲ್ಲಿ, ಕರ್ನಾಟಕ ಸರಕಾರದ ಮೂಲಕ ಹದಿನೈದು ಸಂಪುಟಗಳು (ವಚನ ಪರಿಭಾಷಾಕೋಶ ಸೇರಿ) ಪ್ರಕಟವಾಗುತ್ತಲಿವೆ. ಸುಮಾರು ೧೧೦ ಜನ ಪ್ರಕ್ಷಿಪ್ತ ವಚನಕಾರರನ್ನೂ ಪ್ರಕ್ಷಿಪ್ತವಾಗಿರಬಹುದಾದ ಅನೇಕ ವಚನಗಳನ್ನೂ ಕೈಬಿಟ್ಟು ಸಂಯೋಜಿಸಲಾದ ಈ ಹದಿನೈದು ಸಂಪುಟಗಳ ಒಟ್ಟು ಪುಟ ಸುಮಾರು ಹತ್ತು ಸಾವಿರ; ಒಟ್ಟು ವಚನ ಸಂಖ್ಯೆ ಸುಮಾರು ಇಪ್ಪತ್ತು ಸಾವಿರ. ವಚನಸಾಹಿತ್ಯವನ್ನು ಒಮ್ಮೆ ಸಮಗ್ರವಾಗಿ ಹೊರತಂದ ಪ್ರಥಮ ಮಹತ್ವಾಕಾಂಕ್ಷೆಯ ಯೋಜನೆಯಿದು. ಈ ಸಾಹಿತ್ಯದ ಗಡಿಗೆರೆಗಳನ್ನು, ಸಂಖ್ಯಾಬಾಹುಳ್ಯವನ್ನು ವ್ಯವಸ್ಥೆಗೊಳಿಸಿಕೊಟ್ಟು, ವಿದ್ವಾಂಸರ ಅಧ್ಯಯನದ ಮುಂದುವರಿಕೆಗೆ ಒಂದು ನಿರ್ದಿಷ್ಟ ಚೌಕಟ್ಟನ್ನು ಒದಗಿಸಿದ ಹಿರಿಮೆ ಈ ಪ್ರಯತ್ನಕ್ಕೆ ಸಲ್ಲುತ್ತದೆ.

ಈ ಯೋಜನೆಯ ಅಂಗವಾಗಿ ಬಸವಣ್ಣನವರ ವಚನ, ಪ್ರಭುದೇವರ ವಚನ, ಚೆನ್ನಬಸವಣ್ಣನವರ ವಚನ, ಸಿದ್ಧರಾಮೇಶ್ವರ ವಚನ, ಶಿವಶರಣೆಯರ ವಚನ–ಹೀಗೆ ಐದು ಸಂಪುಟಗಳು, ಬಸವ ಸಮಕಾಲೀನ ಮಿಕ್ಕ ಶರಣರ ವಚನಗಳ ನಾಲ್ಕು ಸಂಪುಟಗಳು, ಬಸವೋತ್ತರ ಕಾಲೀನ ಶರಣರ ವಚನಗಳ ಐದು ಸಂಪುಟಗಳು ಮತ್ತು ಒಂದು ವಚನ ಪರಿಭಾಷಾಕೋಶ – ಹೀಗೆ ಹದಿನೈದು ಸಂಪುಟಗಳು ಬೆಳಕು ಕಾಣುತ್ತಲಿವೆ. ಇವುಗಳಲ್ಲಿ ಮೊದಲಿನ ಐದು ಸಂಪುಟಗಳು ಈಗಾಗಲೇ ಕರ್ನಾಟಕ ವಿಶ್ವವಿದ್ಯಾಲಯದ ಮೂಲಕ ಪ್ರಕಟವಾಗಿದ್ದು, ಆ ಬಳಿಕ ಲಭ್ಯವಾದ ಹೊಸ

ವಚನಗಳನ್ನು ಸೇರಿಸಿ, ಅವುಗಳಿಗೆ ಸಮಗ್ರರೂಪ ಕೊಟ್ಟಿದ್ದೇವೆ ಮತ್ತು ಪರಿಷ್ಕರಿಸಿದ್ದೇವೆ. ಬಸವ ಸಮಕಾಲೀನ ಮಿಕ್ಕ ಶರಣರ ನಾಲ್ಕು ಸಂಪುಟಗಳ ಕೆಲಸ ಈವರೆಗೆ ಸಮರ್ಪಕವಾಗಿ ನಡೆದಿರಲಿಲ್ಲ. ಬಸವೋತ್ತರ ಕಾಲೀನ ಶರಣರ ಕೊನೆಯ ಐದು ಸಂಪುಟಗಳ ಕೆಲಸವೂ ಅಲಕ್ಷಿಸಲ್ಪಟ್ಟಿದ್ದಿತು. ಈ ಎಲ್ಲ ಕೊರತೆಗಳನ್ನು ತುಂಬಿಕೊಡುವ ಒಂದು ಪರಿಪೂರ್ಣ ಯೋಜನೆ ಇದಾಗಿದೆ. ಮೊದಲಬಾರಿಗೆ ೧೯ನೆಯ ಶತಮಾನದ ವರೆಗಿನ ಎಲ್ಲ ಶರಣರ ಎಲ್ಲ ವಚನಗಳನ್ನು ಒಂದೆಡೆ ಸಂಗ್ರಹಿಸಿ, ಒಂದು ಕ್ರಮಕ್ಕೆ ಅಳವಡಿಸಿ, ಸಂಪುಟ ಶ್ರೇಣಿಯಲ್ಲಿ ಹೊರತಂದ ದೊಡ್ಡ ಪ್ರಯತ್ನ ಇಲ್ಲಿದೆ.

ವಚನಸಾಹಿತ್ಯದ ಪರಿಷ್ಕರಣಕಾರ್ಯ ತುಂಬ ಜಟಿಲವಾದುದು. ೧. ಎಲ್ಲ ಶರಣರ ವಚನಗಳನ್ನು ಎಲ್ಲ ಪ್ರಾಚೀನ ಆಕರಗಳಿಂದ ಸಂಗ್ರಹಿಸುವುದು, ೨. ಪ್ರಕ್ಷಿಪ್ತವಾಗಿರಬಹುದಾದ ವಚನಕಾರರನ್ನು, ವಚನಗಳನ್ನು ಕೈಬಿಡುವುದು, ೩. ನಿಜವಚನಗಳ ಪಾಠವನ್ನು ಪರಿಷ್ಕರಿಸುವುದು—ಇದು ಈ ಯೋಜನೆಯ ಉದ್ದೇಶವಾಗಿದೆ. ಈ ಉದ್ದೇಶ ಸಾಧನೆಗಾಗಿ ಎಲ್ಲ ಪ್ರಾಚೀನ ಆಕರಗಳಿಂದ ಅಂದರೆ ೧೦೮ ಆಕರಗಳಿಂದ ವಚನಗಳನ್ನು ಸಂಗ್ರಹಿಸಿ, ಪ್ರತಿಯೊಂದು ವಚನದ ಕೆಳಗೆ ಅದರ ಎಲ್ಲ ಆಕರಗಳನ್ನು ನಮೂದಿಸಿದ 'ವಚನ ಬ್ಯಾಂಕ'ನ್ನು ಅಸ್ತಿತ್ವಕ್ಕೆ ತರಲಾಯಿತು. ಒಂದು ವಚನಕ್ಕೆ ಇರುವ ವಿವಿಧ ಪಾಠಾಂತರ, ರೂಪಾಂತರಗಳ ಸ್ವರೂಪವನ್ನು ಅರ್ಥಮಾಡಿಕೊಳ್ಳಲು, ಮುದ್ರಿಕೆಯ ವ್ಯತ್ಯಾಸವನ್ನು ಗಮನಿಸಲು, ಒಬ್ಬ ವಚನಕಾರನ ಒಟ್ಟು ವಚನಗಳ ಸಂಖ್ಯೆಯನ್ನು ನಿರ್ಧರಿಸಲು, ಕೊನೆಯದಾಗಿ ವಚನದ ನಿಜಪಾಠವನ್ನು ನಿರ್ಣಯಿಸಲು ಈ ಬ್ಯಾಂಕ್ ತುಂಬ ನೆರವಾಯಿತು.

ಇವು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿ, ಅನ್ಯಪಾಠಗಳನ್ನು ಅಡಿಯಲ್ಲಿ ನಮೂದಿಸದೆ ಕೈಬಿಟ್ಟಿದ್ದೇವೆ. ಜನಸಾಮಾನ್ಯರ ಅನುಕೂಲತೆಗಾಗಿ ಶಕಟರೇಫೆಗೆ ಬದಲು ರೇಫೆ ಇಟ್ಟುಕೊಂಡಿದ್ದೇವೆ. ಅಭ್ಯಾಸಿಗಳ ಉಪಯೋಗ ದೃಷ್ಟಿಯಿಂದ ಕಠಿಣ ಪದಕೋಶ, ಅಕಾರಾದಿ, ಆಕರಸೂಚಿಗಳನ್ನು ಅನುಬಂಧದಲ್ಲಿ ಕೊಡಲಾಗಿದೆ. ಹೆಚ್ಚಿನದಾಗಿ ಪಾರಿಭಾಷಿಕ ಪದಗಳ ಒಂದು ಸ್ವತಂತ್ರ ಕೋಶವನ್ನೇ ಪ್ರಕಟಿಸಿದ್ದೇವೆ. ಒಟ್ಟಿನಲ್ಲಿ ಇವು ಜನಪ್ರಿಯ ಆವೃತ್ತಿಗಳಾದರೂ ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ಆದರ್ಶದಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆ

ವಿಶ್ವವಿದ್ಯಾಲಯದಂಥ ಶಿಕ್ಷಣ ಸಂಸ್ಥೆಗಳು, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯಂಥ ಸಾರ್ವಜನಿಕ ಸಂಸ್ಥೆಗಳು, ವೀರಶೈವ ಮಠಗಳಂಥ ಧಾರ್ಮಿಕ ಸಂಸ್ಥೆಗಳು, ಡಾ. ಫ.ಗು. ಹಳಕಟ್ಟಿಯವರಂಥ ವಿದ್ವಾಂಸ ವ್ಯಕ್ತಿಗಳು ನಿರಂತರ ದುಡಿದರೂ ವಚನಸಾಹಿತ್ಯ ಪೂರ್ಣ ಪ್ರಮಾಣದಲ್ಲಿ ಪ್ರಕಟವಾಗಲು ಒಂದುನೂರು ವರ್ಷ ಹಿಡಿದುದು ಅದರ ಗಾತ್ರಬಾಹುಳ್ಯಕ್ಕೆ ಸಾಕ್ಷಿಯಾಗಿದೆ. ನೂರುವರ್ಷ ದುಡಿದು, ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ ಈ ಎಲ್ಲ ವ್ಯಕ್ತಿ—ಸಂಸ್ಥೆಗಳಿಗೆ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆಯ ಕಾರ್ಯಾಲಯ ಅಸ್ತಿತ್ವಕ್ಕೆ ಬಂದು ಕೆಲಸ ಪ್ರಾರಂಭವಾದದ್ದು ೧೫ ಅಕ್ಟೋಬರ ೧೯೮೮ರಂದು. ಹಸ್ತಪ್ರತಿಗಳು ಅಚ್ಚಿಗೆ ಹೋದದ್ದು ೧೬ ಮಾರ್ಚ ೧೯೯೦ರಂದು. ಹೀಗೆ ಮೊದಲೇ ಯೋಜಿಸಿದಂತೆ ಎರಡು ವರ್ಷಗಳ ನಿರ್ದಿಷ್ಟ ಅವಧಿಯಲ್ಲಿ ಈ ಕೆಲಸವನ್ನು ಪೂರ್ಣಗೊಳಿಸಿದ್ದೇವೆ. ಪ್ರತಿಯೊಂದು ಹಂತದಲ್ಲಿಯೂ ಈ ಯೋಜನೆ ಸಕ್ರಮವಾಗಿ ಮುನ್ನಡೆಯುವುದಕ್ಕಾಗಿ 'ಸಂಪಾದಕ ಮಂಡಳಿ'ಯ ಸದಸ್ಯರಾದ ಡಾ. ಎಂ. ಚಿದಾನಂದಮೂರ್ತಿ, ಡಾ. ಸಿ. ಪಿ. ಕೃಷ್ಣಕುಮಾರ, ಡಾ. ಎಸ್. ವಿದ್ಯಾಶಂಕರ, ಶ್ರೀ ಎಸ್. ಶಿವಣ್ಣ ಅವರು ಉದ್ದಕ್ಕೂ ಬೆಲೆಯುಳ್ಳ ಸಲಹೆ-ಮಾರ್ಗದರ್ಶನ ನೀಡಿದ್ದಾರೆ. ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರು ಆರಂಭದ ಕೆಲವು ತಿಂಗಳು ಸಂಪಾದಕ ಮಂಡಳಿಯ ಸದಸ್ಯರಾಗಿ, ವಿಶ್ವಾಸದಿಂದ ನೆರವಾಗಿದ್ದಾರೆ. ಸಂಪಾದಕ ಮಿತ್ರರಾದ ಡಾ. ಬಿ. ವ್ಹಿ. ಮಲ್ಲಾಪುರ, ಡಾ. ಎಸ್. ವಿದ್ಯಾಶಂಕರ, ಡಾ. ವ್ಹಿ. ಬಿ. ರಾಜೂರ, ಡಾ. ಬಿ.ಆರ್. ಹಿರೇಮಠ, ಶ್ರೀ ಎಸ್. ಶಿವಣ್ಣ ತುಂಬ ಶ್ರಮ-ಶ್ರದ್ಧೆಗಳಿಂದ ಸಂಪಾದನ ಕೆಲಸ ಪೂರೈಸಿದ್ದಾರೆ. ಸಹಾಯಕ ಸಂಶೋಧಕರಾದ ಶ್ರೀಮತಿ ವಿಜಯಶ್ರೀ ಹಿರೇಮಠ, ಶ್ರೀ ವಾಯ್. ಎಂ. ಯಾಕೊಳ್ಳಿ, ಶ್ರೀ ಬಿ. ವ್ಹಿ. ಕೋರಿ ಅವರು ದಣಿವನ್ನು ಲೆಕ್ಕಿಸದೆ ದುಡಿದಿದ್ದಾರೆ. ಇವರೆಲ್ಲರಿಗೆ ನಾವು ಕೃತಜ್ಞರಾಗಿದ್ದೇವೆ.

ಈ ಯೋಜನೆಯನ್ನು ಅನುದಾನ ಮಾಡಿದ ಕರ್ನಾಟಕ ಸರಕಾರದ ಔದಾರ್ಯಕ್ಕೆ ನಮ್ಮ ಅಭಿನಂದನೆಗಳು ಸಲ್ಲುತ್ತವೆ. ಈ ಅವಧಿಯಲ್ಲಿ ಮುಖ್ಯಮಂತ್ರಿಗಳಾಗಿದ್ದ ಮಾನ್ಯ ಶ್ರೀ ರಾಮಕೃಷ್ಣ ಹೆಗಡೆ, ಶ್ರೀ ಎಸ್. ಆರ್. ಬೊಮ್ಮಾಯಿ, ಶ್ರೀ ವೀರೇಂದ್ರ ಪಾಟೀಲ, ಶ್ರೀ ಎಸ್. ಬಂಗಾರಪ್ಪ ಅವರಿಗೂ ಸಾಹಿತಿಗಳೂ ಸಾಹಿತ್ಯ-ಸಂಸ್ಕೃತಿಗಳ ಗಾಢ ಆಸಕ್ತರೂ ಆಗಿರುವ ಮುಖ್ಯಮಂತ್ರಿಗಳಾದ ಮಾನ್ಯ ಶ್ರೀ ಎಂ. ವೀರಪ್ಪ ಮೊಯಿಲಿ ಅವರಿಗೂ ಋಣಿಯಾಗಿದ್ದೇವೆ.

ಈ ಯೋಜನೆ ಅಸ್ತಿತ್ವಕ್ಕೆ ಬರುವಲ್ಲಿ ವಿಶೇಷ ಆಸಕ್ತಿ ವಹಿಸಿದವರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಂದಿನ ಸಚಿವರಾಗಿದ್ದ ಶ್ರೀ ಎಂ. ಪಿ. ಪ್ರಕಾಶ ಅವರು. ಸಾಹಿತ್ಯ-ಸಂಸ್ಕೃತಿಗಳ ಬಗ್ಗೆ ಅನನ್ಯ ಪ್ರೀತಿ-ಗೌರವ ಬೆಳೆಸಿಕೊಂಡಿರುವ ಶ್ರೀಯುತರಿಗೆ ನಾವು ಕೃತಜ್ಞರಾಗಿದ್ದೇವೆ. ಆಮೇಲೆ ಈ ಇಲಾಖೆಗೆ ಸಚಿವರಾಗಿ ಬಂದ ಶ್ರೀ ಎಂ. ವೀರಪ್ಪ ಮೊಯಿಲಿ, ಶ್ರೀ ಕೆ. ಎಚ್. ರಂಗನಾಥ, ಶ್ರೀ ಎಸ್. ರಮೇಶ್, ಇಂದಿನ ಸಚಿವರಾದ ಮಾನ್ಯ ಶ್ರೀ ಎಚ್. ವಿಶ್ವನಾಥ್ ಅವರಿಗೆ ನಮ್ಮ ಗೌರವಗಳು ಸಲ್ಲುತ್ತವೆ.

ಈ ಪ್ರಸಂಗದಲ್ಲಿ ಆತ್ಮೀಯ ಆಡಳಿತ ನಿರ್ದೇಶನ ಮಾಡಿದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಅಂದಿನ ನಿರ್ದೇಶಕರಾಗಿದ್ದ ಶ್ರೀ ಐ. ಎಂ. ವಿಠ್ಠಲಮೂರ್ತಿ, ಶ್ರೀ ಬಿ. ಪಾರ್ಥಸಾರಥಿ, ಕಮಿಷನರ್ ಡಾ. ಪಿ. ಎಸ್. ರಾಮಾನುಜಂ, ಇಂದಿನ ಕಮಿಷನರ್‌ರಾದ ಶ್ರೀ ಪಿ. ಎಸ್. ವಿ. ರಾವ್ ಅವರನ್ನೂ ಅಧಿಕ ನಿರ್ದೇಶಕರಾದ ಶ್ರೀ ಕೆ. ದೇವರಸಯ್ಯ, ಉಪನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರನ್ನೂ ನೆನೆಯುವುದು ಪ್ರೀತಿಯ ವಿಷಯವಾಗಿದೆ.

ಇಂಥ ಒಂದು ಬೃಹತ್‌ಯೋಜನೆಗೆ ಕಾರ್ಯಾಲಯವೊಂದು ಅತ್ಯವಶ್ಯ. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಈ ಅವಕಾಶ ಕಲ್ಪಿಸಿಕೊಟ್ಟ ಕರ್ನಾಟಕ ವಿಶ್ವವಿದ್ಯಾಲಯದ ಅಂದಿನ ಕುಲಪತಿ ಡಾ. ಜಿ. ಕೆ. ನಾರಾಯಣರೆಡ್ಡಿ, ಇಂದಿನ ಕುಲಪತಿ ಡಾ. ಎಸ್. ರಾಮೇಗೌಡ ಅವರ ಔದಾರ್ಯವನ್ನು, ಪೀಠದ ಮುಖ್ಯಸ್ಥರ ಸಹಕಾರವನ್ನು ಕೃತಜ್ಞತೆಯಿಂದ ನೆನೆಯುತ್ತೇವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳೂ ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ದಾಳಿಗೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಮುದ್ರಿಕೆ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ವಚನಗಳನ್ನು ಶುದ್ಧೀಕರಿಸುವುದು— ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ವಚನಸಾಹಿತ್ಯದ ಮೇಲಿನ ಗೌರವ, ಕೆಲಸದ ಮೇಲಿನ ಪ್ರೀತಿಗಳು ನಮ್ಮಿಂದ ಈ ಕಾರ್ಯ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತ, ಎರಡು ವರ್ಷ ರಾತ್ರಿಯನ್ನೂ ಹಗಲುಮಾಡಿ ದುಡಿದು ರೂಪಿಸಿದ ಈ ಹದಿನೈದು ಸಂಪುಟಗಳನ್ನು ಸಹೃದಯಲೋಕಕ್ಕೆ ಅರ್ಪಿಸುತ್ತೇವೆ. 'ಶಿವಶರಣರ ಸಮಗ್ರ ವಚನ ಸಾಹಿತ್ಯ' ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳನ್ನು ಬೆಳಗಲೆಂದು ಹಾರೈಸುತ್ತೇವೆ.



★

# ಪ್ರಸ್ತಾವನೆ

ಕಲ್ಯಾಣದ ಶಿವಶರಣರದು ಕನ್ನಡ ನೆಲದ ಮೇಲೆ ನಡೆದ ಪ್ರಥಮ ಸಮಾಜೋಧಾರ್ಮಿಕ ಆಂದೋಲನವಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಜರುಗಿದ ಈ ಆಂದೋಲನದ ನಾಯಕ ವ್ಯಕ್ತಿ ಬಸವಣ್ಣ.

ಬಸವಣ್ಣ ಬಾಳಿದ್ದು ಕನ್ನಡ ನಾಡಿನಲ್ಲಿ, ಬರೆದದ್ದು ಕನ್ನಡ ಭಾಷೆಯಲ್ಲಿ. ಈ ಪರಿಮಿತಿ ಕಾರಣವಾಗಿ ಇವನಿಗೆ ನ್ಯಾಯವಾಗಿ ಸಿಗಬೇಕಾದ ಜಾಗತಿಕ ಪ್ರಸಿದ್ಧಿ ಇನ್ನೂ ಸಿಕ್ಕಿಲ್ಲವಾದರೂ ಇವನನ್ನು ಕುರಿತಷ್ಟು ಸಾಹಿತ್ಯ ಕನ್ನಡದಲ್ಲಿ ಯಾರನ್ನೂ ಕುರಿತು ಹುಟ್ಟಿಲ್ಲ; ಇವನಷ್ಟು ಅಖಂಡ ಪ್ರಭಾವ ಕರ್ನಾಟಕದ ಮೇಲೆ ಯಾವ ಧಾರ್ಮಿಕ ಮಹಾಪುರುಷನೂ ಬೀರಿಲ್ಲ.

ಜಾಗತಿಕ ಸಂಸ್ಕೃತಿಗೆ ಘನತೆಯನ್ನು ತಂದುಕೊಡುವವರೆಂದರೆ ತಮ್ಮ ವ್ಯಕ್ತಿತ್ವವನ್ನು ಉದಾತ್ತೀಕರಿಸಿಕೊಂಡ ಮಹಾಪುರುಷರು ಮತ್ತು ತಮ್ಮ ಪರಿಸರವನ್ನು ಉದಾತ್ತೀಕರಿಸುವ ಯುಗಪುರುಷರು. ಈ ಎರಡನ್ನೂ ಸಾಧಿಸುವ ಮೂಲಕ ಬಸವಣ್ಣ ಕೇವಲ ಮಹಾಪುರುಷನಾಗಿ ಉಳಿಯದೆ ಯುಗಪುರುಷನಾಗಿಯೂ ಬೆಳೆದಿದ್ದಾನೆ. ಸಾಮಾನ್ಯವಾಗಿ ಯುಗಪುರುಷರು ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ–ಹೀಗೆ ಜೀವನದ ಯಾವುದೋ ಒಂದು ಕ್ಷೇತ್ರಕ್ಕೆ ಹೊಸ ತಿರುವು ತಂದುಕೊಡುತ್ತಾರೆ. ಬಸವಣ್ಣ ಇಂಥ ಎಲ್ಲ ಕ್ಷೇತ್ರಗಳಿಗೂ ಹೊಸ ತಿರುವು ಕೊಟ್ಟ ಕಾರಣ 'ಸಮಗ್ರಯುಗಪುರುಷ'ನೆನಿಸಿದ್ದಾನೆ. ಹೀಗಾಗಿ ಅವನನ್ನು ಜಗತ್ತು ಕಂಡ ಒಬ್ಬ ಅಪರೂಪದ ವ್ಯಕ್ತಿಯೆಂದು ಗುರುತಿಸಲಾಗುತ್ತಿದೆ.

ಬಸವಪೂರ್ವಯುಗವೆಂಬುದು ಕರ್ನಾಟಕದ ಇತಿಹಾಸದಲ್ಲಿ ಪತನಸ್ಪೃಹಿನವ ಕಾಲವಾಗಿದ್ದಿತು. ಅಂದು ರಾಜಸತ್ತೆ, ಮತಸತ್ತೆಗಳು ಸಮಾಜವನ್ನು ನಿಯಂತ್ರಿಸುವ ಶಕ್ತಿಯಾಗಿದ್ದವು. ರಾಜಸತ್ತೆಯ ಪೋಷಣೆಗಾಗಿ ಯುದ್ಧದಲ್ಲಿ ತೊಡಗುವುದು, ಸುಂಕ ತೆರುವುದಕ್ಕಾಗಿ ದುಡಿಯುವುದು ಅಂದಿನ ಪ್ರಜೆಗಳ ಸ್ಥಿತಿಯಾಗಿದ್ದಿತು. ಈ ರಾಜಸತ್ತೆಗೆ ಪೂರಕವೆನಿಸುವ ಮತಸತ್ತೆಯಲ್ಲಿ ಪ್ರತಿಷ್ಠಿತ ಧರ್ಮಗಳ ಆಡಂಬರಗಳೂ, ಜನಪದ ಧರ್ಮಗಳ ಕ್ರೂರ ಆಚರಣೆಗಳೂ ಉಲ್ಬಣಗೊಂಡಿದ್ದವು. ಒಟ್ಟು ಜನವರ್ಗದಲ್ಲಿಯೇ ಪುರುಷವರ್ಗವು ಸ್ತ್ರೀವರ್ಗವನ್ನು ತುಳಿಯುತ್ತಲಿದ್ದಿತು. ಹೀಗಾಗಿ ಸಮಾಜದಲ್ಲಿ ರಾಜವರ್ಗ–ಪ್ರಜಾವರ್ಗ, ಪುರೋಹಿತವರ್ಗ–ಭಕ್ತವರ್ಗ, ಪುರುಷವರ್ಗ–ಸ್ತ್ರೀವರ್ಗಗಳೆಂಬ ಸೀಳು ತಲೆದೋರಿ, ಒಂದು ಇನ್ನೊಂದನ್ನು ಶೋಷಿಸುವಲ್ಲಿ, ಜೀವನವ್ಯವಸ್ಥೆಯ ಸಮತೋಲನ ತಪ್ಪಿ ಹೋಗಿದ್ದಿತು. ಈ ಅನ್ಯಾಯದ ಗರ್ಭಸೀಳಿ ಹುಟ್ಟಿಕೊಂಡು, ಸಾಮಾಜಿಕ ಸಮತೋಲನೆಗಾಗಿ ಹೋರಾಡಿದವ ಬಸವಣ್ಣ.

ಬಾಗೆವಾಡಿ, ಬಸವಣ್ಣನ ಜನ್ಮಗ್ರಾಮ. ತಂದೆ ಮಾದರಸ, ತಾಯಿ ಮಾದಲಾಂಬಿಕೆ. ಬಹುಶಃ ಈ ಕುಟುಂಬ ಮಂಡಗೆ ಗ್ರಾಮದಿಂದ ಬಾಗೆವಾಡಿಗೆ ಬಂದಿದ್ದಿತು. ಅರ್ಜುನವಾಡ ಶಾಸನದ ಪ್ರಕಾರ ತಂದೆ ಮಾದಿರಾಜ 'ತರ್ದವಾಡಿ ಮಧ್ಯಗ್ರಾಮ'ವಾದ ಈ ಬಾಗೆವಾಡಿಯ 'ಪುರವರಾಧೀಶ್ವರ'. ತಾಯಿ ಮಾದಲಾಂಬಿಕೆ ದಂಡನಾಯಕ ಬಲದೇವನ ಸೋದರಿ. ಇಂಥ ಪ್ರತಿಷ್ಠಿತ ಕುಟುಂಬದ ಹಿನ್ನೆಲೆ ಬಸವಣ್ಣನದಾಗಿದ್ದಿತು.

ಬಸವಣ್ಣ ಹುಟ್ಟುವ ಹೊತ್ತಿಗೆ ಕರ್ನಾಟಕದ ಧಾರ್ಮಿಕ ಕ್ಷೇತ್ರವನ್ನು ಅಗ್ರಹಾರ ಸಂಸ್ಕೃತಿ, ದೇವಾಲಯಸಂಸ್ಕೃತಿಗಳು ಆಳುತ್ತಲಿದ್ದವು. ಅಗ್ರಹಾರಸಂಸ್ಕೃತಿಯು ಮೂಲತಃ ಧಾರ್ಮಿಕವಾಗಿ ಕರ್ಮನಿಷ್ಠ, ಸಾಮಾಜಿಕವಾಗಿ ವರ್ಣಭೇದನಿಷ್ಠವಾದುದು. ಈಗ ದೇವಾಲಯಸಂಸ್ಕೃತಿ ದಾರಿಗೆ ಇವೇ ಹೊರಳಿದ್ದರೂ ಮೂಲತಃ ಅದು ಧಾರ್ಮಿಕ ವಾಗಿ ಭಕ್ತಿನಿಷ್ಠ, ಸಾಮಾಜಿಕವಾಗಿ ವರ್ಣಭೇದ ನಿರಾಕರಣನಿಷ್ಠವಾದುದು. ಹೀಗಾಗಿ ಹುಟ್ಟು ಹೋರಾಟಗಾರನಾದ ಬಸವಣ್ಣ ತನ್ನ ಎಳೆಯ ವಯಸ್ಸಿನಲ್ಲಿಯೇ ಸ್ಥಗಿತ ಮೌಲ್ಯದ ಆ ಅಗ್ರಹಾರಸಂಸ್ಕೃತಿಯನ್ನು ತೊರೆದು, ಚಲನಶೀಲಮೌಲ್ಯದ ದೇವಾಲಯ ಸಂಸ್ಕೃತಿಗೆ ನೆಲೆಯಾದ ಕೂಡಲಸಂಗಮಕ್ಕೆ ಬಂದನು. ಇದು ಅವನ ಜೀವನದಲ್ಲಿ "ಕರ್ಮದಿಂದ ಧರ್ಮಕ್ಕೆ" ದಾಟಿಬಂದ ಘಟ್ಟವಾಗಿದೆ.

ಕೂಡಲಸಂಗಮ ಬಸವಣ್ಣನ ಸಾಧನಾರಂಗ. ಅಲ್ಲಿ ಅಧ್ಯಯನ, ಮೂಲಚಿಂತನೆ ಗಳ ಮೂಲಕ ಅವನು ತನ್ನ ವ್ಯಕ್ತಿತ್ವವನ್ನು ವಿಕಾಸಗೊಳಿಸಿಕೊಂಡನು. 'ಸಂಗಮ' ಅನೇಕ ಅರ್ಥಗಳಲ್ಲಿ ಬಸವಣ್ಣನ ಆಂದೋಲನಕ್ಕೆ ಸಂಕೇತವಾಯಿತು. ವೈಯಕ್ತಿಕ ರಂಗ, ಸಾಮಾ ಜಿಕ ರಂಗಗಳಲ್ಲಿ ಪ್ರವಹನಶೀಲತೆಯನ್ನು ಬಯಸುವ ಅವನಿಗೆ ಕೃಷ್ಣೆ ಮಲಪ್ರಭೆಯರ ಪ್ರವಾಹಪ್ರದೇಶವು ಪಾಠವಾಗಿ ಪರಿಣಮಿಸಿತು. ಬಸವಣ್ಣ ತನ್ನ ಅಂಗಗುಣಗಳನ್ನು ನೀಗಿ ಲಿಂಗಗುಣಗಳನ್ನು ಆತ್ಮೀಕರಿಸಿಕೊಂಡು ಹೊಸ ಮನುಷ್ಯನಾಗಿ ಹುಟ್ಟಿದ್ದು, ಬೆಳೆದದ್ದು ಇಲ್ಲಿ. ಹೀಗಾಗಿ ಅವನ ಜೀವನದಲ್ಲಿ ಇದು ವ್ಯಕ್ತಿತ್ವವನ್ನು "ಅಂಗದಿಂದ ಲಿಂಗಕ್ಕೆ" ಪರಿವರ್ತಿಸಿಕೊಂಡ ಕಾಲಘಟ್ಟವಾಗಿದೆ.

ಕೂಡಲಸಂಗಮವನ್ನು ತೊರೆದು ರಾಜಧಾನಿ ಮಂಗಳವೇಡೆಗೆ ಬಂದ ಬಸವಣ್ಣ, ಮಾಂಡಲಿಕನಾದ ಕಲಚುರಿ ಬಿಜ್ಜಳನಲ್ಲಿ ಕರಣಿಕ-ಗಣಕಾಧಿಕಾರಿ ಹುದ್ದೆಗಳನ್ನು ವಹಿಸಿ ಕೊಂಡನು. ಆಮೇಲೆ ಬಿಜ್ಜಳ ಚಕ್ರವರ್ತಿಯಾಗುವಲ್ಲಿ ಅವನೊಂದಿಗೆ ಕಲ್ಯಾಣಕ್ಕೆ ಬಂದು, ಭಂಡಾರಮಂತ್ರಿಯಾದನು. ಈ ಪಟ್ಟಣ ಇವನ ಬದುಕಿನ ಬಹುಮುಖ್ಯ ಕೇಂದ್ರ ವಾಯಿತು. ಈ ಸಂದರ್ಭದಲ್ಲಿ ಶರಣ ಸಮುದಾಯದ ಸಂಘಟನೆ, ಅನುಭವಮಂಟಪದ ಸ್ಥಾಪನೆ, ಸಿದ್ಧಾಂತಗಳ ರಚನೆ-ಪ್ರಸಾರ, ವಚನಸಾಹಿತ್ಯದ ಸೃಷ್ಟಿ ಇತ್ಯಾದಿ ಬಹು ದೊಡ್ಡ ಕಾಣಿಕೆಗಳು ಇವನಿಂದ ಸಂದವು. ಕೂಡಲಸಂಗಮದಲ್ಲಿ ಆತ್ಮಕಲ್ಯಾಣ ಮಾಡಿ ಕೊಂಡಿದ್ದ ಬಸವಣ್ಣ ಈಗ ಸಮಾಜ(ಜಂಗಮ)ಕಲ್ಯಾಣಕಾರ್ಯದಲ್ಲಿ ತನ್ನನ್ನು ತೊಡಗಿಸಿ ಕೊಂಡನು. ಅವನು 'ಲಿಂಗದಿಂದ ಜಂಗಮಕ್ಕೆ' ವಿಸ್ತರಿಸಿಕೊಂಡ ಕಾಲಘಟ್ಟವಿದು.

ಜಂಗಮಸೇವೆಯು ಅಂದರೆ ಸಮಾಜಸೇವೆಯ ಭಾಗವೆಂಬಂತೆ ವರ್ಗಭೇದ, ವರ್ಣ ಭೇದ, ಲಿಂಗಭೇದ ನಿರಾಕರಣೆಯ ತೀವ್ರಕ್ರಮಗಳನ್ನು ಬಸವಣ್ಣ ಇಲ್ಲಿ ಕೈಗೆತ್ತಿಕೊಂಡನು.

ಈ ಪ್ರಗತಿಪರ ಧೋರಣೆಗಳನ್ನು ಪ್ರತಿಭಟಿಸುವ ರೀತಿಯಲ್ಲಿ ಅಗ್ರಹಾರಸಂಸ್ಕೃತಿ, ದೇವಾಲಯಸಂಸ್ಕೃತಿ ಮತ್ತು ರಾಜಸತ್ತಾಸಂಸ್ಕೃತಿಗಳು ಒಟ್ಟಾಗಿ ನಿಂತು, ಅವರ ಈ ಆಂದೋಲನವನ್ನು ಹತ್ತಿಕ್ಕಿದವು. ಸತ್ಯವನ್ನು ಎತ್ತಿ ಹಿಡಿದ ಶರಣರು ದಮನಕ್ಕೆ ಗುರಿಯಾದರು, ಹುತಾತ್ಮರಾದರು. ಬಸವಣ್ಣ ಕಲ್ಯಾಣವನ್ನು ತೊರೆದು ಕೂಡಲಸಂಗಮಕ್ಕೆ ಬಂದು ಐಕ್ಯನಾದ.

ತಾನೊಬ್ಬನೇ ಅಲ್ಲದೆ ಹೆಂಡಿರಾದ ಗಂಗಾಂಬಿಕೆ-ನೀಲಾಂಬಿಕೆ, ತಂಗಿ ನಾಗಲಾಂಬಿಕೆ, ತಂಗಿಯ ಮಗ ಚೆನ್ನಬಸವಣ್ಣ–ಹೀಗೆ ಇಡಿ ಕುಟುಂಬವನ್ನೇ ಆಂದೋಲನದ ಭಾಗವಾಗಿಸಿದ ಬಸವಣ್ಣ, ಸಮಾಜದ ವಿವಿಧ ಸ್ತರಗಳಿಂದ ಬಂದ ಜನಸಮುದಾಯವನ್ನೂ ಭಾಗವಾಗಿಸಿ, ಅದಕ್ಕೆ ಬಹುದೊಡ್ಡ ಸಾಮೂಹಿಕ ಸ್ವರೂಪ ಕೊಟ್ಟನು. ಅದನ್ನು ಪ್ರಾಚೀನ ಭಾರತದ ಒಂದು ಅರ್ಥಪೂರ್ಣ ಜನಪರ ಆಂದೋಲನವಾಗಿಸಿದನು.

ಭಾರತವು ವರ್ಗಭೇದ ವರ್ಣಭೇದ ಲಿಂಗಭೇದ–ಹೀಗೆ 'ಭೇದಸಂಸ್ಕೃತಿ'ಯ ರಾಷ್ಟ್ರವಾಗಿದೆ. ಭೇದಸಂಸ್ಕೃತಿಯು ಸಮಾಜದಲ್ಲಿ ಪರಸ್ಪರ ಘರ್ಷಣೆಗಳು ಜರುಗಬಹುದೇ ಹೊರತು ಸಾಮುದಾಯಿಕ ಆಂದೋಲನ ಜರುಗಲಾರದು. ಹೀಗಾಗಿ ನಮ್ಮ ದೇಶದಲ್ಲಿ ಆತ್ಮಕಲ್ಯಾಣದ ಪ್ರಯೋಗಗಳು ಜರುಗಿದವೇ ಹೊರತು ಸಮಾಜಕಲ್ಯಾಣದ ಆಂದೋಲನಗಳು ಸಂಭವಿಸಲಿಲ್ಲ. ಶರಣರು ಮಾತ್ರ ಈ ಎರಡೂ ಬಗೆಯ ಕಲ್ಯಾಣದ ವಿಷಯವಾಗಿ ವ್ಯಕ್ತಪಡಿಸಿದ ವಿಚಾರಗಳು ಹೀಗಿವೆ:

ವ್ಯಕ್ತಿ 'ಅಂಗ'ಭಾವವನ್ನು ನೀಗಿ 'ಲಿಂಗ'ಭಾವವನ್ನು ಅಳವಡಿಸಿಕೊಳ್ಳಬೇಕೆಂಬುದು ಶರಣಸಿದ್ಧಾಂತದ ಕೇಂದ್ರ ಆಶಯ. ಇದಕ್ಕಾಗಿ ವ್ಯಕ್ತಿ ಅನುಸರಿಸಬೇಕಾದುದು ಷಟ್‌ಸ್ಥಲಮಾರ್ಗವನ್ನು. ಇಲ್ಲಿ ಅಂಗನಾಗಿರುವ ವ್ಯಕ್ತಿ ತನ್ನ ಆತ್ಮಸ್ವರೂಪವಾದ ಇಷ್ಟಲಿಂಗನನ್ನು ಸಾಧನವಾಗಿ ಹಿಡಿದುಕೊಂಡು ಶ್ರದ್ಧಾ, ನಿಷ್ಠಾ, ಅವಧಾನ, ಅನುಭಾವ, ಆನಂದ, ಸಮರಸ 'ಭಾವ'ಗಳನ್ನು ಸಾಧಿಸಿಕೊಳ್ಳುತ್ತ, ಕ್ರಮವಾಗಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ 'ಸ್ಥಿತಿ'ಗಳನ್ನು ಪಡೆದು ಲಿಂಗವಾಗುವುದು ಈ ಷಟ್‌ಸ್ಥಲಮಾರ್ಗದ ಗುರಿ. ಇದನ್ನೇ 'ಲಿಂಗವಿಡಿದು ಲಿಂಗಸಿದ್ಧಿ' ಎನ್ನುತ್ತಾರೆ, ಶರಣರು. ಹೀಗೆ ಲಿಂಗವ್ಯಕ್ತಿತ್ವವನ್ನು ಪಡೆದ ಶರಣನು ತನ್ನ ಜೀವನದ ಸಕಲವ್ಯಾಪಾರವನ್ನು ಲಿಂಗಭಾವದಿಂದ ಅನುಭವಿಸುತ್ತಾನೆ.

ಈ ಬಗೆಯ ಹಸನಾದ "ವ್ಯಕ್ತಿಜೀವನ"ದಷ್ಟೇ ಮುಖ್ಯವಾದುದು ಅವನ ಬೆಳವಣಿಗೆಗೆ ಬೇಕಾಗುವ ಹಸನಾದ 'ಸಮಾಜವ್ಯವಸ್ಥೆ'ಯೆಂಬುದು ಶರಣರ ವಿಚಾರವಾಗಿದೆ. ಇಲ್ಲದಿದ್ದರೆ ಸ್ನಾನಮಾಡಿ ಕೆಸರಿನಲ್ಲಿ ವ್ಯವಹರಿಸಿದಂತಾಗುತ್ತದೆ, ಮಾಡಿದ ಸ್ನಾನ ವ್ಯರ್ಥವಾಗುತ್ತದೆ. ಹೀಗಾಗಿ ವ್ಯಕ್ತಿತ್ವದ ಶುದ್ಧೀಕರಣದಷ್ಟೇ ಸಮಾಜದ ಶುದ್ಧೀಕರಣವೂ ಮುಖ್ಯವೆಂದು ಶರಣರು ಹೇಳುತ್ತಾರೆ.

ವ್ಯಕ್ತಿತ್ವದ ಒಳ ಪದರಿನಲ್ಲಿ ವಿಕಾರಗಳಿರುವಂತೆ ಸಮಾಜದ ಒಳರಚನೆಯಲ್ಲಿಯೂ ನಿಯಮಗಳ ಹೆಸರಿನಲ್ಲಿ ಅನ್ಯಾಯಗಳು ನಿರ್ಮಾಣವಾಗಿರುತ್ತವೆ. ಇದರಿಂದಾಗಿ ಸಮಾಜ

ಜೀವನವೂ ಅಶುದ್ಧವಾಗುತ್ತದೆ. ಭಾರತದಲ್ಲಿ ಇದರ ಶುದ್ಧೀಕರಣದ ಕಡೆಗೆ ಬಹುಶಃ ಬೌದ್ಧಧರ್ಮವನ್ನು ಬಿಟ್ಟರೆ, ವೀರಶೈವೇತರ ಧರ್ಮಗಳು ಮೊದಲಿನಿಂದಲೂ ಗಮನ ಕೊಡಲಿಲ್ಲ. ಏಕೆಂದರೆ ನಮ್ಮ ದೇಶದಲ್ಲಿ ತತ್ವಚಿಂತನೆ ಪ್ರಾರಂಭವಾದುದು ಸಮಾಜದಲ್ಲಲ್ಲ; ಅಡವಿಯಲ್ಲಿ, ಆಶ್ರಮದಲ್ಲಿ. ಅಲ್ಲಿಯ ಮುನಿಗಳಿಗೆ 'ವ್ಯಕ್ತಿಗತ' ಸಮಸ್ಯೆಗಳನ್ನು ಅಂದರೆ ತಮ್ಮೊಳಗಿನ ಮಾನಸಿಕ ವಿಕಾರಗಳನ್ನು ದೂರಗೊಳಿಸಿಕೊಳ್ಳುವುದೇ ಮುಖ್ಯವಾಗಿದ್ದುದು ಸಹಜ. ಕಾಲಕ್ರಮದಲ್ಲಿ ಅರಣ್ಯಜೀವನಕ್ಕೆ ಬದಲು ಗ್ರಾಮಜೀವನ ಅಸ್ತಿತ್ವಕ್ಕೆ ಬಂದು, ವ್ಯಕ್ತಿಗತ ಸಮಸ್ಯೆಗಳೊಂದಿಗೆ ಸಮಾಜಗತ ಸಮಸ್ಯೆಗಳು ಉದ್ಭವಿಸಿದರೂ ಭಾರತದಲ್ಲಿ ಹಳೆಯ 'ವ್ಯಕ್ತಿಪರ ಚಿಂತನ' ಕ್ರಮವೇ ಮುನ್ನಡೆದು 'ಸಮಾಜಪರ ಚಿಂತನ' ಕ್ರಮ ಉಪೇಕ್ಷಿತವಾಯಿತು. ಇಂಥ ಸಮಯದಲ್ಲಿ ಸ್ಮೃತಿಕಾರರು ಹುಟ್ಟಿಬಂದು, ಸಮಾಜದ ಬಗ್ಗೆ ಭೇದತತ್ವಗಳನ್ನು ರೂಪಿಸಿ, ಅದನ್ನು ಹೋಳು ಹೋಳು ಮಾಡಿದರು. ಇದರಿಂದ ಭಾರತೀಯರು 'ವೈಯಕ್ತಿಕವಾಗಿ ಸಬಲರು, ಸಾಮಾಜಿಕವಾಗಿ ದುರ್ಬಲರು' ಎಂಬ ಪರಿಸ್ಥಿತಿ ನಿರ್ಮಾಣವಾಯಿತು. ಇಂಥ ಸಂದರ್ಭದಲ್ಲಿ ಶರಣರು ಸಬಲ ಸಮಾಜಕ್ಕಾಗಿ ಬುದ್ಧನಿಗಿಂತ ಹೆಚ್ಚು ವೈಜ್ಞಾನಿಕವಾಗಿ ವಿಚಾರಿಸಿ, ವ್ಯಕ್ತಿಕಲ್ಯಾಣದೊಂದಿಗೆ ಸಮಾಜ ಕಲ್ಯಾಣಕ್ಕಾಗಿಯೂ ಶ್ರಮಿಸಿದರು. ಈ ಉಭಯ ಕಲ್ಯಾಣಗಳನ್ನು 'ಲಿಂಗವ್ಯಸನ, ಜಂಗಮಪ್ರೇಮ'ವೆಂದು ಬಸವಣ್ಣನವರು ಕರೆದಿದ್ದಾರೆ.

ಹೀಗೆ ಪ್ರಾಚೀನ ಭಾರತೀಯ ತತ್ವಸಿದ್ಧಾಂತ ವ್ಯಕ್ತಿಶುದ್ಧಿಯ ಬಗೆಗೆ ಒತ್ತುಕೊಟ್ಟು ಸಮಾಜಶುದ್ಧಿಯನ್ನು ಉಪೇಕ್ಷಿಸಿದರೆ, ಆಧುನಿಕ ಸಿದ್ಧಾಂತಗಳು ಸಮಾಜಶುದ್ಧಿಯ ಕಡೆಗೆ ಒತ್ತುಕೊಟ್ಟು, ವ್ಯಕ್ತಿಶುದ್ಧಿಯನ್ನು ಉಪೇಕ್ಷಿಸುತ್ತವೆ. ಬಸವಸಿದ್ಧಾಂತ ಮಾತ್ರ ವ್ಯಕ್ತಿ ಶುದ್ಧಿಯಲ್ಲಿ ಚಿಗುರಿಕೊಂಡು ಸಮಾಜಶುದ್ಧಿಯಲ್ಲಿ ವಿಸ್ತಾರಗೊಳ್ಳುತ್ತದೆ. ಸಮಾಜ ಶುದ್ಧ ವಾಗುವುದೆಂದರೆ ಸಮಾಜದಲ್ಲಿ ಸಮಾನತೆಯನ್ನು ತರುವುದು. ಈ 'ಸಾಮಾಜಿಕ ಸಮಾನತೆ'ಗೆ ಮೂಲವಾದುದು 'ಆರ್ಥಿಕ ಸಮಾನತೆ'ಯೆಂಬುವನ್ನು ಅರಿತಿದ್ದ ಬಸವಣ್ಣ, ಅರ್ಥ ಮಂತ್ರಿ (Finance Minister) ಆಗಿದ್ದುದು ಒಂದು ಯೋಗಾಯೋಗ. ಈವರೆಗೆ ರಾಜ್ಯದ ಭಂಡಾರವೆಂದರೆ ರಾಜನ ಭಾಂಡಾರವೆಂದೇ ಭಾವಿಸಲಾಗಿದ್ದಿತು. ಜಂಗಮರಿಗೆ (ಪ್ರಜೆಗಳಿಗೆ) ಭಂಡಾರ ವಿನಿಯೋಗಿಸುತ್ತಿದ್ದುದನ್ನು ಆಕ್ಷೇಪಿಸಿದ ಬಿಜ್ಜಳನಿಗೆ ಉತ್ತರ ಕೊಡುತ್ತ, "ತಮ್ಮೊಡವೆಯಂ ತಾವೆ ಕೊಂಡರ್" ಎಂದು ಬಸವಣ್ಣ ನುಡಿಯುವುದನ್ನು ನೋಡಿದರೆ, ಭಂಡಾರದ ಒಡೆಯ ರಾಜನಲ್ಲ, ಪ್ರಜೆಗಳು–ಎಂದು ಅವನು ನಂಬಿದ್ದನೆಂದು ಸ್ಪಷ್ಟವಾಗುತ್ತದೆ. ಗುರುವಿಗೆ ತನುದಾಸೋಹ, ಲಿಂಗಕ್ಕೆ ಮನದಾಸೋಹಗಳಂತೆ "ಜಂಗಮಕ್ಕೆ ಧನದಾಸೋಹ" ನಡೆಸಬೇಕೆಂಬುದು ಶರಣಸಿದ್ಧಾಂತ. ಇದರಿಂದ ಬಸವಣ್ಣನ ಸಾಮಾಜಿಕ ಸಿದ್ಧಾಂತವೂ ಮಾರ್ಕ್ಸನಂತೆ ಧನದ ಅಂದರೆ ಅರ್ಥದ ನೆಲೆಗಟ್ಟಿನ ಮೇಲೆ ನಿಂತಿದ್ದಿತು; ಅರ್ಥದಲ್ಲಿ ಸಮಾನತೆಯನ್ನು ಸಾಧಿಸಿದರೆ ಸಮಾಜದಲ್ಲಿ ಸಮಾನತೆ ತಾನಾಗಿಯೇ ಸಾಧ್ಯವಾಗುವುದೆಂದು ಅವನು ಕಂಡುಕೊಂಡಿದ್ದನು–ಎನಿಸುತ್ತದೆ.

ಈತನ ಅರ್ಥತತ್ವಕ್ಕೆ ಎರಡು ಮಗ್ಗುಲುಗಳುಂಟು. ಒಂದು ಕಾಯಕ (ಶ್ರಮ), ಇನ್ನೊಂದು ದಾಸೋಹ (ವಿತರಣೆ). ಕಾಯಕ ಮಾಧ್ಯಮದಿಂದ ಗಳಿಸಬೇಕು, ದಾಸೋಹ

ಮಾಧ್ಯಮದಿಂದ ಬಳಸಬೇಕು—ಎಂಬ ಸೂತ್ರದ ಆದರ್ಶದಲ್ಲಿ 'ಕಲ್ಯಾಣರಾಜ್ಯ' ಕಟ್ಟುವುದು ಮಂತ್ರಿ ಬಸವಣ್ಣನ ಧ್ಯೇಯವಾಗಿದ್ದಿತು. ಭಾರತೀಯ ಪರಂಪರೆಯಲ್ಲಿ ಧರ್ಮವೀರನೆನಿಸುವ ಬಸವಣ್ಣ ಅದನ್ನೂ ಮೀರಿದ ಮಹಾಪುರುಷನೆಂದು ಈ ಎಲ್ಲ ಚಿಂತನೆಗಳು ವ್ಯಕ್ತಪಡಿಸುತ್ತವೆ. ಅವನು ಈ ಚಿಂತನೆಗಳಿಗೆ ಸಮರ್ಥ ವಾಹಕವಾಗಿ ಬಳಸಿದ್ದು, ವಚನಗಳನ್ನು.

ಶರಣರು ಭಾವನೆಗಳನ್ನು ಕಲಾತ್ಮಕಗೊಳಿಸಲು ಹೊರಟ ಕವಿಗಳಲ್ಲ; ಬದುಕನ್ನು ಕಲಾತ್ಮಕಗೊಳಿಸಲು ಹೋರಾಡಿದ ಸಂತರು. ಈ ಉತ್ಕಟ ಹೋರಾಟದ ಉಪನಿಷ್ಪತ್ತಿಯಾಗಿ ವಚನಸಾಹಿತ್ಯ ನಿರ್ಮಾಣವಾಯಿತು. ಹೀಗೆ ನಿರ್ಮಾಣ ಮಾಡುವಾಗ 'ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ' ಎಂಬ ಕಾವ್ಯಧೋರಣೆ ಬಸವಣ್ಣನವರ ಕಣ್ಣುಮುಂದಿದೆ. 'ನಿನಗೆ ಕೇಡಿಲ್ಲವಾಗಿ ಹಾಡುವೆ' ಎಂಬಲ್ಲಿ ಸಾಮಾಜಿಕ Responsibility, 'ಆನು ಒಲಿದಂತೆ ಹಾಡುವ' ಎಂಬಲ್ಲಿ ವೈಯಕ್ತಿಕ freedom—ಇವು ಕವಿಗಿರಬೇಕೆಂಬುದನ್ನು ಸ್ಪಷ್ಟಪಡಿಸುತ್ತಾನೆ. ಒಬ್ಬ ಬರಹಗಾರನಾಗಿ ಬಸವಣ್ಣ ಏಕಕಾಲಕ್ಕೆ ಈ ಉಭಯ ಹೊಣೆಗಳನ್ನು ಸರಿಯಾಗಿ ನಿರ್ವಹಿಸಿದ್ದಾನೆ.

ಒಂದು ಸಾಹಿತ್ಯಕೃತಿಯ ಅಧ್ಯಯನವೆಂಬುದು ಅಲ್ಲಿ ಹುದುಗಿರುವ ವ್ಯಕ್ತಿಶೋಧ, ಸಮಾಜಶೋಧ, ಲೋಕಸಂದೇಶಶೋಧ ಮತ್ತು ಸೌಂದರ್ಯಶೋಧವಾಗಿದೆ. ಈ ನಾಲ್ಕು ನೆಲೆಗಳ ಅಧ್ಯಯನಕ್ಕೆ ವಸ್ತುವಾಗುವ ಶಕ್ತಿ ಬಸವಣ್ಣನವರ ವಚನಗಳಿಗಿದೆ.

ಈಗಾಗಲೇ ಎಲ್ಲರೂ ಗುರುತಿಸಿದಂತೆ ಅವನ ವಚನಗಳಲ್ಲಿ 'ವ್ಯಕ್ತಿಶೋಧ'_ಅಂದರೆ ಆತ್ಮವಿಮರ್ಶೆ ಪ್ರಧಾನವಾಗಿದೆ. ನಾಟಕದ ಪಾತ್ರವೊಂದು ತನ್ನ ನೋವು, ವಿಷಾದ, ಪ್ರೀತಿ, ನಿಷ್ಠೆ, ಕರುಣೆ, ಸಿಟ್ಟುಗಳನ್ನು First person narrative ಶೈಲಿಯಲ್ಲಿ ತೋಡಿಕೊಳ್ಳುವಂತೆ, ತನ್ನ ವ್ಯಕ್ತಿತ್ವದ ಒಳಗನ್ನು ತಲಸ್ಪರ್ಶಿಯಾಗಿ ತೋಡಿಕೊಂಡಿದ್ದಾನೆ. ತಿಳಿನೀರಿನಲ್ಲಿಯ ಎಳೆಮೀನಿನ ಚಲನೆಯಂತೆ, ಹರಿದಾಡುವ ಅವನ ಮನಸ್ಸಿನ ಅನೇಕ ಬಸೆಗಳು ಅಲ್ಲಿ ಕಾಣಸುತ್ತವೆ.

'ಸಮಾಜವಿಮರ್ಶೆ' ಬಸವಣ್ಣನವರ ವಚನಗಳ ಇನ್ನೊಂದು ಮುಖವಾಗಿದೆ. ಅನ್ಯಾಯವನ್ನು ಪ್ರತಿಭಟಿಸುವ, ನ್ಯಾಯವನ್ನು ಪ್ರತಿಪಾದಿಸುವ ಅವನದು ರಚನಾತ್ಮಕ ವಿಮರ್ಶೆಯಾಗಿದ್ದು, ಅಲ್ಲಿ ಒಬ್ಬ ಸಮಾಜವಿಜ್ಞಾನಿಯ ವೈಜ್ಞಾನಿಕ ದೃಷ್ಟಿ ಎದ್ದುಕಾಣುತ್ತದೆ. ಕೆಲವೊಮ್ಮೆ ಅನ್ಯಾಯವನ್ನು ಸಾಮಾನ್ಯೀಕರಿಸಿ ಮಾತನಾಡದೆ "ಅನೀ ಬಿಜ್ಜಳಂಗೆ ಅಂಜುವೆನೆ ಅಯ್ಯಾ" ಎಂದು ವ್ಯಕ್ತಿಯನ್ನು ಬೆರಳು ಮಾಡಿ ಆಡುವುದು, "ಬಿಜ್ಜಳನ ಭಂಡಾರವೆನಗೇಕಯ್ಯಾ" ಎಂದು ತನ್ನ ಮೇಲಿನ ವ್ಯಕ್ತಿಗತ ಆರೋಪವನ್ನು ನಿರಾಕರಿಸುವುದು, 'ಚಳುವಳಿ ಭಾಷೆ'ಯಂತೆ ಕೇಳಿಸುತ್ತದೆ. ಇದರ ಜೊತೆ ದಯವೇ ಧರ್ಮದ ಮೂಲ, ಸತ್ಯವ ನುಡಿವುದೇ ಸ್ವರ್ಗ—ಮೊದಲಾದ ಲೋಕಸಂದೇಶಗಳಂತೂ ಹೆಜ್ಜೆಹೆಜ್ಜೆಗೆ ಕೇಳಿಸುತ್ತವೆ.

ಹೀಗೆ ಅವನ ಆತ್ಮವಿಮರ್ಶೆ, ಸಮಾಜವಿಮರ್ಶೆಯ ವಚನಗಳು ಕ್ರಮವಾಗಿ ಆಧುನಿಕ ನವ್ಯಕಾವ್ಯ, ಬಂಡಾಯಕಾವ್ಯಗಳನ್ನು ನೆನಪಿಸುತ್ತವೆ. ಲೋಕಸಂದೇಶದ ವಚನಗಳು ಭಾವಗೀತೆಗಳಂತೆ ಕಾಣುತ್ತವೆ. ಇಂಥ ಅಭಿವ್ಯಕ್ತಿಗಳಿಂದಾಗಿ ಬಸವಣ್ಣ ಲೋಕದ ಮಾನವನಾಗಿ, ಅದೇ ಕಾಲಕ್ಕೆ ಸಮಾಜದ ವ್ಯಕ್ತಿಯಾಗಿ ನಮ್ಮ ಕಣ್ಣಮುಂದ ಬರುತ್ತಾನೆ.

ಈ ಎಲ್ಲ ಚಿಂತನೆಗಳ ಹಿಂದೆ 'ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ' ಎಂಬ ಸಿದ್ಧಾಂತ ಸದಾ ಸ್ಪಂದಿಸುತ್ತದೆ. ಈ ತತ್ವದ ಮೇರೆಗೆ ಬಸವಣ್ಣನವರ ವಚನ, 'ಆಶಯ'ದಲ್ಲಿಯಂತೆ 'ಆಕೃತಿ'ಯಲ್ಲಿಯೂ ಜಂಗಮತ್ವವನ್ನು ಪಡೆಯಿತು. ಹೀಗಾಗಿ ಅವರ ವಚನಗಳದು ತುಂಬ ಸರಳಶಿಲ್ಪ. ಸರಳವೆಂದರೂ ಅಲ್ಲಿ ಸಂಕೀರ್ಣತೆಯಿದೆ, ವಾಚ್ಯವೆಂದರೂ ಅಲ್ಲಿ ಧ್ವನಿಯಿದೆ. ಏನು ಹೇಳಬೇಕೆಂಬ 'ಆಶಯ' ಉತ್ಕಟವಾದಾಗ ಹೀಗೆ ಹೇಳಬೇಕೆಂಬ 'ಆಕೃತಿ' ತಾನಾಗಿಯೇ ಅಚ್ಚುಕಟ್ಟುತನ ಪಡೆಯುತ್ತದೆ. ಈ ಮಾತಿಗೆ ಮಾದರಿಯಾಗಿದೆ, ಬಸವಣ್ಣನವರ ಬರವಣಿಗೆ.

ಸಾಹಿತ್ಯದ ಮಾಧ್ಯಮ ಭಾಷೆ. ಸಾಮಾನ್ಯವಾಗಿ ನಮ್ಮ ಕವಿಗಳು ಕನ್ನಡಭಾಷೆಯನ್ನು ಕುರಿತು ದೇಸಿ, ಮಾರ್ಗ ಇತ್ಯಾದಿಯಾಗಿ ಆಲೋಚಿಸಿದರು. ಆದರೆ ಬಸವಾದಿ ಪ್ರಮಥರು ಕೇವಲ ಕನ್ನಡಭಾಷೆಯನ್ನಲ್ಲ, ಭಾಷೆಯನ್ನೇ ಕುರಿತು ಆಲೋಚಿಸಿದರು. "ಲಿಂಗವಿಲ್ಲದ ಶಬ್ದ ಸೂತಕ: ಕೇಳಲಾಗದು" ಎಂದು ಭವಿಯಾಗಿರುವ ಭಾಷೆಯೂ ಭಕ್ತನಾಗಬೇಕೆನ್ನುತ್ತಾನೆ; ಅಂದರೆ ಮಾತಿಗೆ ಅಂಟಿರುವ ಮಾಲಿನ್ಯ ದೂರವಾಗಬೇಕೆನ್ನುತ್ತಾನೆ, ಬಸವಣ್ಣ. ಇದರಿಂದಾಗಿ ಮೂಲತಃ ಭಾಷೆಯ ದುರ್ಬಳಕೆಯೂ ತಪ್ಪಿತು, ಕನ್ನಡಭಾಷೆಯು ಪರಿಣಾಮರಮ್ಯತೆ–ಉಪಯುಕ್ತತೆಗಳ ದಿಕ್ಕಿನಲ್ಲಿ ತಾನಾಗಿಯೇ ದುಡಿಯತೊಡಗಿತು. ಕನ್ನಡ ಭಾಷೆಗೆ ಒದಗಿಬಂದ ಈ ಸಹಜ ಸಿದ್ಧಿಯಿಂದಾಗಿ "ಕೂಡಲಸಂಗಮದೇವ ಭಕ್ತನ ನುಡಿಯ ನಡುವೆ ರಾಶಿಯಾಗಿಪ್ಪನು" ಎಂಬುದಕ್ಕೆ ವಚನಗಳು ನಿದರ್ಶನವಾಗಿ ನಿಂತವು.

## ಪರಿಷ್ಕರಣ

ಪ್ರಾಚೀನಕಾಲದಲ್ಲಿ ವಚನಸಾಹಿತ್ಯ ಸೃಜನ ಮತ್ತು ಸಂಪಾದನವೆಂಬ ಎರಡು ರೀತಿಗಳಲ್ಲಿ ಪ್ರಕಟವಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಪ್ರಕಟವಾದುದು ಸೃಜನ, ಈ ಸೃಜನವನ್ನು ಬಳಸಿ ಹದಿನೈದನೆಯ ಶತಮಾನದಲ್ಲಿ ಸಂಯೋಜಿಸಲ್ಪಟ್ಟುದು ಸಂಪಾದನ. ಈ ಸೃಜನದ ಪಾಠಾಂತರ, ಸಂಪಾದನೆಯ ಪಾಠಾಂತರ ಮತ್ತು ಸೃಜನವನ್ನು ಸಂಪಾದನೆಗೊಳಿಸುವಲ್ಲಿ ಉದ್ಭವಿಸಿದ ಪಾಠಾಂತರವೆಂಬ ಮೂರು ಬಗೆಯ ಪಾಠಾಂತರ ದಾಳಿಗಳಿಗೆ ತುತ್ತಾಗುತ್ತ ಬಂದ ವಚನಹಸ್ತಪ್ರತಿಗಳು ನಮಗೆ ಸಿಗುತ್ತವೆ. ಪರಿಷ್ಕರಣವೆಂಬುದು ವೈಜ್ಞಾನಿಕ ವಿಧಾನಗಳ ಮೂಲಕ ಇಂಥ 'ಪ್ರತಿ'ಯನ್ನು 'ಕೃತಿ'ಯನ್ನಾಗಿಸುವ ಕ್ರಿಯೆಯಾಗಿದೆ.

ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟನಯೋಜನೆಯ ಸಂಪಾದಕ ಸಮಿತಿಯ ಮಾರ್ಗದರ್ಶನದಲ್ಲಿ, ಗ್ರಂಥಸಂಪಾದನಶಾಸ್ತ್ರದ ಆದರ್ಶದಲ್ಲಿ ಈ ಕೃತಿಯನ್ನು ಪರಿಷ್ಕರಿಸಲಾಗಿದೆ. ಇದು ಜನಪ್ರಿಯ ಆವೃತ್ತಿಯಾದರೂ ವಿದ್ವಜ್ಜನಪ್ರಿಯ ಆವೃತ್ತಿಯೂ ಆಗಬೇಕೆಂಬ ಆದರ್ಶವನ್ನು ಕಣ್ಣಮುಂದೆ ಇಟ್ಟುಕೊಂಡು ೬೫ ಆಕರಗಳಿಂದ ವಚನಗಳನ್ನು ಸಂಗ್ರಹಿಸಿ ಈ ಕೆಲಸ ಮಾಡಿದ್ದೇವೆ. (ಅನುಬಂಧ ನೋಡಿ).

ಇಲ್ಲಿ ಷಟ್‌ಸ್ಥಲದ ವಚನ ಮತ್ತು ಹೆಚ್ಚಿನ ವಚನಗಳನ್ನು ಕ್ರಮವಾಗಿ ಕಾಂಡ: ಒಂದು, ಕಾಂಡ: ಎರಡು ಹೆಸರುಗಳಿಂದ ಪ್ರತ್ಯೇಕವಾಗಿಯೇ ಸಂಪಾದಿಸಿಕೊಡಲಾಗಿದೆ. ಷಟ್‌ಸ್ಥಲ ವಚನಗಳಿಗೆ ಎಲ್ಲ ದೃಷ್ಟಿಯಿಂದಲೂ ಉತ್ತಮವಾಗಿರುವ, ಶಕಟರೇಫೆ ಬಳಸಿರುವ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ತಾಳಗರಿ ಹಸ್ತಪ್ರತಿ (೫೧) ಯನ್ನು ಆಧಾರಪ್ರತಿಯನ್ನಾಗಿ ಇಟ್ಟುಕೊಳ್ಳಲಾಗಿದೆ. ಈ ಷಟ್‌ಸ್ಥಲ ವಚನಗಳು ಡಾ. ಫ. ಗು. ಹಳಕಟ್ಟಿ[೧] ಆವೃತ್ತಿಯಲ್ಲಿ ೯೨೬, ಶ್ರೀ ಎಸ್. ಎಸ್. ಬಸವನಾಳ (ಗ್ರಂಥಾಯ)ಆವೃತ್ತಿಯಲ್ಲಿ ೯೫೮, ಡಾ. ಆರ್. ಸಿ. ಹಿರೇಮಠ ಆವೃತ್ತಿಯಲ್ಲಿ ೯೫೯ ಇದ್ದರೆ ನಮ್ಮ ಈ ಆವೃತ್ತಿಯಲ್ಲಿ ೯೬೦ ಇವೆ.[೨] ಅಂದರೆ ನಾವು ಬಳಸಿದ ಕಟ್ಟಿನಲ್ಲಿ ಒಂದು ಹೊಸ ವಚನ(ನಂ. ೨೬೭)ವಿರುವುದು ವಿಶೇಷ.

'ಷಟ್‌ಸ್ಥಲವಚನ' ಭಾಗಕ್ಕೆ ಸಂಬಂಧಿಸಿದಂತೆ ಕೆಲವು ಪ್ರತಿಗಳಲ್ಲಿ ಮಾತ್ರ ರುದ್ರಾಕ್ಷಿಸ್ಥಲ ಹೆಸರಿನ ಕೆಳಗೆ ೩ ವಚನಗಳು ಹೆಚ್ಚಿಗಿವೆ. ಭಕ್ತನ ಪ್ರಸಾದಿಸ್ಥಲದ ೪ನೆಯ ವಚನವೇ ಪ್ರಸಾದಿಯ ಪ್ರಸಾದಿಸ್ಥಲದ ಮೊದಲನೆಯ ವಚನವಾಗಿ ಬಂದಿದೆ-ಎಂಬುದನ್ನು ಬಿಟ್ಟರೆ ವಚನ ಸಂಖ್ಯೆ ಮತ್ತು ವಚನ ಪುನರುಕ್ತಿಗಳ ವಿಷಯವಾಗಿ ಈ ಭಾಗದಲ್ಲಿ ಸಮಸ್ಯೆ ಇಲ್ಲವೆಂದೇ ಹೇಳಬೇಕು. ಇಲ್ಲಿರುವುದು ವಚನಗಳ ಪಾಠಸಮಸ್ಯೆ. ಹೀಗಾಗಿ ಅನೇಕ ಕಡೆಗಳಲ್ಲಿ ಉತ್ತಮ ಪಾಠಗಳನ್ನು ಶೋಧಿಸಿ, ಯೋಜಿಸಿ ಈ ಆವೃತ್ತಿಯ ಗುಣಮಟ್ಟ ವನ್ನು ಹೆಚ್ಚಿಸಲು ಪ್ರಯತ್ನಿಸಿದ್ದೇವೆ. ಉದಾ:

೧. ಬಲ್ಲಿದರೊಡನೆ ಬವರವಾದಡೆ ಗೆಲಲುಂಟು ಸೋಲಲುಂಟು, ಕಳ್ಳನೊಡನೆ ಭಾಷೆ ಪೂರಾಯವೇ ಅಯ್ಯಾ? > ....ಕ[ಳ]ನೊಳಗೆ ಭಾಷೆ ಪೂರಾಯವಯ್ಯಾ (೧೫೦).

ಪರಾಕ್ರಮಿಗಳೊಡನೆ ಯುದ್ಧ ಜರುಗಿದರೆ ಗೆದೆಯಬಹುದು, ಸೋಲಬಹುದು. ಕಾಳಗದ ಕಣದಲ್ಲಿ ಪ್ರತಿಜ್ಞೆ ಸಾರ್ಥಕ್ಯ ಪಡೆಯುತ್ತದೆ-ಎಂಬುದೇ ಇಲ್ಲಿಯ ಸರಿಯಾದ ಅರ್ಥ.

೨. ದೃಷ್ಟಿಯಾರೆ ಶರಣೆಂದಡೆ > ದೃಷ್ಟಿವಾರಿ ಶರಣೆಂದಡೆ(೧೪೦), ಶಿವಲಿಂಗದೇವನ ದೃಷ್ಟಿ[ಯಾರೆ] ನೋಡದವನ > ....ದೃಷ್ಟಿವಾರಿ ನೋಡದವನ (೧೫೭).

ದೃಷ್ಟಿವಾರಿ = ಎವೆ ಮಿಳುಕಿಸದೆ ಶಿವಲಿಂಗವನ್ನು ನೋಡುತ್ತ ಕುಳಿತುಕೊಳ್ಳುವ ಒಂದು ವ್ರತ. ಈ ವ್ರತವನ್ನು ಹಿನ್ನೆಲೆಯಾಗಿಟ್ಟುಕೊಂಡು ಬಸವಣ್ಣ ಈ ವಚನವನ್ನು ಬರೆದಿರುವುದರಿಂದ 'ದೃಷ್ಟಿವಾರಿ'ಯೆಂಬುದೇ ಇಲ್ಲಿಯ ನಿಜಪಾಠ.

೧. ಶ್ರೀ ಹಳಕಟ್ಟಿ ಆವೃತ್ತಿಯಲ್ಲಿ ಮಧ್ಯ ಮಧ್ಯ ಕೆಲವು ವಚನಗಳಿಲ್ಲ. ಬಹುಶಃ ಸಂಪಾದನ ಪ್ರಸಂಗದಲ್ಲಿ ಕಣ್ತಪ್ಪಿನಿಂದ ಇವು ಹೊರಗೆ ಉಳಿದುಕೊಂಡಿರಬಹುದು ಇಲ್ಲವೆ ಇವರು ಬಳಸಿದ ಪ್ರತಿಯೇ ಹೀಗೆ ಇರಬಹುದು. "ಜಂಗಮವ ನಂಬದೆ ಬೇರೆಯು ನಂಬಿನಃ...." ಎಂಬ ಹೊಸ ವಚನವೊಂದು (ಪು. ೭೦) ಇಲ್ಲಿದೆ. ಕೊನೆಯ ಗಳಿಗೆಯಲ್ಲಿ ನಮ್ಮ ಗಮನಕ್ಕೆ ಬಂದ ಇದನ್ನು ಪರಿಶಿಷ್ಟದಲ್ಲಿಯೂ ಸೇರಿಸಲು ಸಾಧ್ಯವಾಗಲಿಲ್ಲ. ಇದು ಪ್ರಕ್ಷಿಪ್ತವಾಗಿರಲೂಬಹುದು.

೨. ಹಸ್ತಪ್ರತಿ(೫೧)ಯ ಕೊನೆಯಲ್ಲಿ ೯೬೧ ವಚನ ಎಂದು ಹೇಳಲಾಗಿದೆ. ಆದರೆ ಐಕ್ಯಸ್ಥಲದಲ್ಲಿ "ಮಿಥ್ಯವನುಳಿದ ಸತ್ಯಪ್ರಸಾದಿ...." ಎಂಬ ವಚನ ಎರಡು ಸಲ ಬಂದಿದ್ದು, ಒಂದನ್ನು ತೆಗೆದರೆ ಈ ಸಂಖ್ಯೆ ೯೬೦ ಆಗುತ್ತದೆ.

೩. ಆದ್ಯರ ವಚನ ಪರುಷ ಕಂಡಣ್ಣಾ, ಸದಾಶಿವನೆಂಬ ಲಿಂಗವ ನಂಬುವುದು >.... ಸದಾಶಿವನೆಂಬ [ಲಿಂಗವು], ನಂಬುವುದು (೧೭೧).

ಉದ್ದಕ್ಕೂ ಆದ್ಯರ ವಚನದ ಮಹತ್ವವನ್ನು ಹೇಳುವ ಈ ರಚನೆಯ ಮಧ್ಯದಲ್ಲಿ 'ಸದಾಶಿವನೆಂಬ ಲಿಂಗವನ್ನು ನಂಬಬೇಕು' ಎಂಬ ಹೇಳಿಕೆ ಹೊಂದಿಕೊಳ್ಳುವದಿಲ್ಲ. ನಾವು ಮಾಡಿದ ಪರಿಷ್ಕರಣದಿಂದ "ಸದಾಶಿವನೆಂಬ ಲಿಂಗವೇ ಆಗಿರುವ ಆದ್ಯರ ವಚನವನ್ನು ನಂಬಬೇಕು" ಎಂಬ ಅರ್ಥ ಹೊರಟು, ಇಡೀ ರಚನೆಗೆ ಅರ್ಥದೃಷ್ಟಿಯಿಂದ ಏಕಮುಖತೆ ಪ್ರಾಪ್ತವಾಗುತ್ತದೆ.

೪. ನಿಮ್ಮ ಮೈಸಿರಿ ಹಾರಿ ಹೋಹುದೆ? > ನಿ[ಮ್ಮೈ]ಸಿರಿ ಹಾರಿ ಹೋಹುದೆ? (೨೪೧)

ಇಲ್ಲಿ ನಿಮ್ಮ ಐಸಿರಿ ಅಂದರೆ....ಐಶ್ವರ್ಯ ಹಾರಿಹೋಗುವುದೆ? ಎಂಬುದು ಸರಿಯಾದ ಅರ್ಥ ನೀಡುತ್ತದೆ.

೫. ಸೋಂಕಿನಲ್ಲಿ ಸುಖಿ, ಸರ್ವಾಂಗ ಕಲಿಗಳು > ಸೋಂಕಿನಲ್ಲಿ ಶುಚಿ, ಸರ್ವಾಂಗ ಕಲಿಗಳು (೩೨೬)

ಶೌರ್ಯ ಮತ್ತು ಶುಚಿತ್ವಗಳು ವ್ಯಕ್ತಿತ್ವನಾಣ್ಯದ ಎರಡು ಮುಖಗಳೆಂಬುದು ಪ್ರಾಚೀನರು ನಂಬಿದ ಜೀವನಮೌಲ್ಯ-ಎಂಬುದನ್ನು ನೆನೆದರೆ ನಾವು ಯೋಜಿಸ್ತಿರುವ ಪಾಠದ ಔಚಿತ್ಯ ಸ್ಪಷ್ಟವಾಗುತ್ತದೆ.

೬. ಪರಸ್ತ್ರೀ ಪರಧನವೆಂಬೀ ಜೂಜಿಂಗಂಜುವೆ > ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ (೪೪೭)

ಜೂಬ = ಯೂಪ, ಯಜ್ಞದಲ್ಲಿ ವಧೆಗಾಗಿ ಪ್ರಾಣಿಗಳನ್ನು ಕಟ್ಟುತ್ತಿದ್ದ ಕಂಬ.

೭. ಪಿಂಬೇರ ಮೈಲಗೆ ಮೇಳವಾಡುತ್ತಿದ್ದ ಕಾಣಾ > ಪಿಂಬೇರ ಮೈ[ಲುಗ] ಮೇಳವಾಡುತ್ತಿದ್ದ ಕಾಣಾ (೫೫೬)

ಮಹಾರಾಷ್ಟ್ರದ ಪ್ರೇಮಪುರದ ಹಳೆಯ ಹೆಸರು ಪಿಂಬೇರ. ಈ ಗ್ರಾಮದ ದೇವತೆ ಮೈಲುಗ (ಮೈಲಾರ). ಈತನನ್ನು ಈ ವಚನ ಉಲ್ಲೇಖಿಸುತ್ತದೆ.

೮. ಅಲ್ಲಿಯೂ ಮೇಳ, ಇಲ್ಲಿಯೂ ಮೇಳ, ಚೌಡೇಶ್ವರಿಯಲ್ಲಿಯೂ ಮೇಳ! > ಅಲ್ಲಿಯೂ ಮೇಳ ಇಲ್ಲಿಯೂ ಮೇಳ, ಚೌಡೇಶ್ವರಿಯಲ್ಲಿಯೂ ಮೇಳವೆ? (೬೪೦)

ಶರಣರ ಸತಿಗೆ ಆಸೆ ಮಾಡುವುದೆ? ಅವಳಲ್ಲಿಯೂ ಸ್ನೇಹ, ಇವಳಲ್ಲಿಯೂ ಸ್ನೇಹ, ಉಗ್ರದೇವತೆಯಾದ ಚೌಡೇಶ್ವರಿಯಲ್ಲಿಯೂ ಸ್ನೇಹವೆ? ಎಂಬ ಸಮಂಜಸ ಅರ್ಥ ಹೊಸ ಪಾಠದಿಂದ ವ್ಯಕ್ತವಾಗುತ್ತದೆ.

ಇಂಥ ಇನ್ನೂ ಅನೇಕ ಯೋಗ್ಯಪಾಠಗಳನ್ನು ಇಲ್ಲಿ ಕಾಣಬಹುದು. ಹೀಗಿದ್ದೂ ಕೆಲವು ಸಂದೇಹಗಳು ಸಹಜವಾಗಿಯೇ ಅಲ್ಲಲ್ಲಿ ಉಳಿದುಕೊಂಡಿವೆ.

'ಹೆಚ್ಚಿನ ವಚನಗಳು' ಭಾಗದಲ್ಲಿ ವಚನಗಳನ್ನು ಅಕಾರಾದಿಯಾಗಿ ಜೋಡಿಸಲಾಗಿದೆ. ಮೊದಲನೆಯ ಕಾಂಡದಲ್ಲಿಯಂತೆ ಪಾಠಾಂತರದ ಜೊತೆಗೆ ಪ್ರಕ್ಷಿಪ್ತತೆ, ಪುನರುಕ್ತಿ, ಮುದ್ರಿಕೆಯ ಪಲ್ಲಟ, ಎರಡು ವಚನ ಒಂದಾದುದು-ಇತ್ಯಾದಿ ಸಮಸ್ಯೆಗಳು ಇಲ್ಲಿವೆ.

ಎಷ್ಟೇ ಎಚ್ಚರ ವಹಿಸಿದರೂ ಮುದ್ರಿಕೆ ಸಾಮ್ಯ ಕಾರಣದಿಂದಾಗಿ 'ಕೂಡಲಸಂಗಮದೇವರಲ್ಲಿ ಬಸವಣ್ಣ' ಮುದ್ರಿಕೆಯ ಉಗ್ಘಡಿಸುವ ಗಬ್ಬಿದೇವಯ್ಯಗಳ ಮೂರುವಚನಗಳು (೧೧೧೨, ೧೨೦೪, ೧೩೦೪) ನಮ್ಮ ಕಣ್ಣು ತಪ್ಪಿಸಿ ಈ ಎರಡನೆಯ ಕಾಂಡದಲ್ಲಿ ಸೇರಿಕೊಂಡಿವೆ.೧ ಇವುಗಳನ್ನು ಬಿಡಬೇಕು. ಅಚ್ಚಿನ ಕಾರ್ಯದ ಕೊನೆಯ ಹಂತದಲ್ಲಿ ನಮ್ಮ ಗಮನಕ್ಕೆ ಬಂದ ಮೂರು ಹೆಚ್ಚಿನ ವಚನಗಳನ್ನು 'ಪರಿಶಿಷ್ಟ'ದಲ್ಲಿ ಕೊಟ್ಟಿದ್ದೇವೆ. ಇವುಗಳನ್ನು ಸ್ವೀಕರಿಸ ಬೇಕು. ಈ ಆವೃತ್ತಿಯಲ್ಲಿ ಒಟ್ಟು ೧೪೨೬ (೯೬೦ + ೪೬೬) ವಚನಗಳು ದಾಖಲಾಗಿದ್ದು, ಮೇಲೆ ಹೇಳಿದಂತೆ 'ಹೆಚ್ಚಿನ ವಚನ'ಗಳಲ್ಲಿ ಸೇರಿರುವ ಉಗ್ಗಡಿಸುವ ಗಬ್ಬಿದೇವಯ್ಯಗಳ ಮೂರು ವಚನಗಳನ್ನು ತೆಗೆದರೆ ಉಳಿಯುವ ೧೪೨೩ ವಚನಗಳು ಮಾತ್ರ ಈ ಸಂಪುಟದ ವಚನಸಂಖ್ಯೆಯೆಂದು ಇಟ್ಟುಕೊಳ್ಳಬೇಕು.

ಕರ್ನಾಟಕ ವಿಶ್ವವಿದ್ಯಾಲಯದ ಆವೃತ್ತಿಯಲ್ಲಿ ಕಾಂಡ ೧ ಮತ್ತು ಕಾಂಡ ೨ ಸೇರಿ ಒಟ್ಟು ೧೫೯೩ ವಚನಗಳಿವೆ. ಅಲ್ಲಿಯ ಎರಡನೆಯ ಕಾಂಡದಿಂದ ೩೦ ವಚನಗಳನ್ನು ಹೀಗೆ ಕೈಬಿಡಲಾಗಿದೆ:

೧. ಪ್ರಕ್ಷಿಪ್ತವಾಗಿರಬಹುದಾದ ೧೯ ವಚನಗಳನ್ನು (೯೭೩, ೧೦೧೬, ೧೦೧೨, ೧೧೦೫, ೧೧೦೭, ೧೧೦೮, ೧೧೪೩, ೧೧೪೪, ೧೧೫೮, ೧೧೬೩, ೧೧೬೬, ೧೨೧೨, ೧೨೧೩, ೧೨೪೧, ೧೨೫೩, ೧೩೧೭, ೧೩೫೬, ೧೩೫೭, ೧೩೭೭) ಕೈಬಿಡಲಾಗಿವೆ.

೨. ವಿಸ್ತಾರ, ಸಂಕೋಚ, ಲೋಪ, ಆಗಮ, ಆದೇಶ, ಪಲ್ಲಟ ರೂಪದ ಭಿನ್ನಪಾಠಗಳಿಂದಾಗಿ ಕಾಂಡ ಒಂದರ ೮ ವಚನಗಳು ವ್ಯತ್ಯಸ್ತರೂಪದಿಂದ ಕಾಂಡ ೨ರಲ್ಲಿ ಹೀಗೆ ಪುನರುಕ್ತಗೊಂಡಿವೆ:

ಬಿದಿರಲಂದಣವಕ್ಕು (೨೨೧) = ಬೆಟ್ಟದ ಬಿದಿರೇ ನೀನು (೧೭೯೮)
ಮನೆ ನೋಡಾ ಬಡವರು (೩೨೫) = ಮನೆ ನೋಡಾ ಬಡವರು(೧೧೫೭)
ಶ್ರೀ ವಿಭೂತಿ ರುದ್ರಾಕ್ಷಿ (೪೫೧) = ಶ್ರೀ ರುದ್ರಾಕ್ಷಿಯ ಧರಿಸಿ (೧೦೨೭)
ಎಮ್ಮವರು ಅಧಿಕರು (೬೦೨) = ಅಧಿಕರು ಪಾಕವಮಾಡುವ (೧೧೧೧)
ದೇವನೊಬ್ಬ ನಾನು ಹಲವು (೬೧೩) = ಲಿಂಗವೊಂದೇ ನಾಮಂಗಳು (೧೧೭೯)
ಹರಬೀಜವಾದಡೆ (೬೬೮) = ಹೇಡಿ ಬಿರಿದ ಕಟ್ಟಿದಡೆ (೧೧೧೮)
ಉಂಬ ಬಟ್ಟಲು ಬೇರೆ (೮೬೦) = ದರ್ಪಣವು ಬೇರೆ ಕಂಚಲ್ಲ (೧೩೭೯)
ಲಿಂಗಾರ್ಚನೆ ಮಾಡುವ ಮಹಿಮ (೯೩೩) = ಮಜ್ಜನಕ್ಕೆರೆವ ಮಹಿಮ (೧೦೫೫)

ಹೀಗೆ ೮ ವಚನಗಳನ್ನು ಕೈ ಬಿಟ್ಟಿದ್ದೇವೆ.

೩. ಎರಡು ವಚನಗಳು ಹಸ್ತಪ್ರತಿಗಳಲ್ಲಿ 'ಕೂಡಲ ಚನ್ನಸಂಗಮದೇವಾ' ಮುದ್ರಿಕೆಯಿಂದಲೇ ಹೆಚ್ಚುಸಲ ಕಂಡು ಬರುವುದರಿಂದ, ವಿಷಯವೂ ಚೆನ್ನಬಸವಣ್ಣನ ಆಶಯಕ್ಕೆ ಅನುಗುಣವಾಗಿರುವುದರಿಂದ, ಇವೆರಡನ್ನೂ (೧೧೦೨, ೧೨೨೩) ಕೈಬಿಡಲಾಗಿದೆ.

೧. ಶ್ರೀ ಎಸ್. ಎಸ್. ಬಸವನಾಳ ಅವರ ಕಣ್ಣನ್ನೂ ತಪ್ಪಿಸಿ, ಅವರ ಆವೃತ್ತಿಯಲ್ಲಿ ಉಗ್ಘಡಿಸುವ ಗಬ್ಬಿದೇವಯ್ಯಗಳ 'ಜೀವನ ಬಾಗಿಲಲ್ಲಿ....'ಎಂಬ ವಚನ ಸೇರಿಕೊಂಡಿದೆ.

೪. ಅಲ್ಲಮನ ವಚನದ ಪೂರ್ವಾರ್ಧದಲ್ಲಿ ಬಸವಣ್ಣನ ವಚನದ (೧೧೯೮) ಉತ್ತರಾರ್ಧ ಸೇರಿಕೊಂಡು ಸೃಷ್ಟಿಯಾಗಿರುವ ಬಸವಣ್ಣನವರ ೧೨೪೯ನೆಯ ವಚನವನ್ನು ಕೈಬಿಡಲಾಗಿದೆ.

ಹೀಗೆ ಒಟ್ಟು ೩೦ (೧೯+೮+೨+೧) ವಚನಗಳನ್ನು ಕೈಬಿಟ್ಟರೆ ಕರ್ನಾಟಕ ವಿಶ್ವವಿದ್ಯಾಲಯದ ಆವೃತ್ತಿಯಲ್ಲಿ ವಚನಸಂಖ್ಯೆಯು ೧೩೯೩ ರಿಂದ ೧೩೬೩ಕ್ಕೆ ಇಳಿಯುತ್ತದೆ. ಮೇಲೆ ಹೇಳಿದಂತೆ ನಮ್ಮ ಸಂಪುಟದ ಒಟ್ಟು ವಚನ ೧೪೨೩ರಲ್ಲಿ ಈ ೧೩೬೩ ವಚನಗಳನ್ನು ಕಳೆದರೆ ಉಳಿಯುವ ೬೦ ವಚನಗಳು ಪ್ರಥಮ ಬಾರಿಗೆ ನಮ್ಮ ಸಂಪುಟದ ಮೂಲಕ ಬೆಳಕು ಕಾಣುತ್ತಿವೆಯೆಂದು ಹೇಳಬೇಕು.

ಈ ಎರಡನೆಯ ಕಾಂಡದಲ್ಲಿಯೂ ಪಾಠ್ಯಸಮಸ್ಯೆ ತುಂಬ ಜಟಿಲವಾಗಿದೆ. ಉದಾ: ಕರ್ನಾಟಕ ವಿಶ್ವವಿದ್ಯಾಲಯದ ಆವೃತ್ತಿಯಲ್ಲಿ

ಆಕಾಶವ ಮೀರುವ ತರುಗಿರಿಗಳುಂಟೆ?
ಪ್ರತಿದೃಷ್ಟಿಯಾಗಿ ಮಾಡಬಲ್ಲಡೆ, ಅದೇ ಮಾಟ
ಕೂಡಲಸಂಗನ ಕೂಡುವ ಕೂಟ ( ೧೨೪೯)

ಎಂಬ ವಚನವಿದೆ. ಸೂಕ್ಷ್ಮವಾಗಿ ನೋಡಿದರೆ ಒಂದನೆಯ ಚರಣದಲ್ಲಿ ಮತ್ತು ಆ ತರುವಾಯದ ಚರಣಗಳಲ್ಲಿ ಅರ್ಥದ ಹೊಂದಿಕೆಯಿಲ್ಲವೆಂದು ಸ್ಪಷ್ಟವಾಗುತ್ತದೆ. ನಿಜಸ್ಥಿತಿಯೆಂದರೆ ಇಲ್ಲಿಯ ಪೂರ್ವಾರ್ಧ ಅಲ್ಲಮನದು, ಉತ್ತರಾರ್ಧ ಬಸವಣ್ಣನದು. ಅವು ಹೀಗಿವೆ:

೧. ಆಕಾಶವ ಮೀರುವ ತರುಗಿರಿಗಳುಂಟೆ?
ನಿರಾಕಾರವ ಮೀರುವ ಸಾಕಾರವುಂಟೆ?
ಗುಹೇಶ್ವರಲಿಂಗವ ಮೀರುವ ಬಡತನವುಂಟೆ?
ಸಂಗನಬಸವಣ್ಣಾ.

೨. ಸತಿಪುರುಷರಿಬ್ಬರೂ ಪ್ರತಿದೃಷ್ಟಿಯಾಗಿ ಮಾಡಬಲ್ಲಡೆ ಅದೇ ಮಾಟ.
ಕೂಡಲ ಸಂಗಮದೇವನ ಕೂಡುವ ಕೂಟ. (೧೧೯೮)

ಇಂಥ ಅನೇಕ ಸಮಸ್ಯೆಗಳನ್ನು ಪರಿಹರಿಸಿಕೊಂಡು, ಶ್ರಮ–ಶ್ರದ್ಧೆಗಳಿಂದ ಈ ಸಂಪುಟವನ್ನು ಸಂಪಾದಿಸಿದ್ದೇವೆ. ಹೀಗಿದ್ದೂ ಉಳಿದುಕೊಂಡಿರಬಹುದಾದ ಕೊರತೆಗಳನ್ನು ಮಹಾಜನರು ಮನ್ನಿಸುವರೆಂದು ಆಶಿಸುತ್ತೇವೆ.

## ಕೃತಜ್ಞತೆ

ಶಿವಶರಣರು ಎಂದಾಕ್ಷಣ ಬಸವಣ್ಣನವರು ನೆನಪಾಗುತ್ತಾರೆ, ವಚನಸಾಹಿತ್ಯವೆಂದಾಕ್ಷಣ ಬಸವಣ್ಣನವರ ವಚನಗಳು ನೆನಪಾಗುತ್ತವೆ. ಹೀಗೆ ವಚನಸಾಹಿತ್ಯದ ಕೆನೆಯು ಕೆನೆಯಾಗಿರುವ ಬಸವಣ್ಣನವರ ಷಟ್‌ಸ್ಥಲ ವಚನಗಳನ್ನು ಈ ಮೊದಲು ಸಂಪಾದಿಸಿದ ಶ್ರೀ ಬ. ಮರಿಶಂಕರದ್ಯಾವರು (೧೮೮೯), ಡಾ॥ ಫ. ಗು. ಹಳಕಟ್ಟಿ (೧೯೨೬),

ಶ್ರೀ ಎಸ್. ಎಸ್. ಬಸವನಾಳ (೧೯೫೧), ಡಾ|| ಆರ್. ಸಿ. ಹಿರೇಮಠ (೧೯೬೮) ಅವರಿಗೂ, ಬಿಡಿ ಬಿಡಿಯಾಗಿ ಸಂಕಲನಗಳನ್ನೂ, ವಚನಗಳನ್ನೂ ಪ್ರಕಟಿಸಿದ ಅನೇಕ ಜನ ವಿದ್ವಾಂಸರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ಸಂಪಾದನ ಸಮಿತಿಯ ಮೌಲಿಕ ಮಾರ್ಗದರ್ಶನ, ಕರ್ನಾಟಕ ವಿಶ್ವವಿದ್ಯಾಲಯದ ನೆರವು-ಸಹಕಾರಗಳಿಗೆ ಋಣಿ ಯಾಗಿದ್ದೇವೆ.

"ಸಮಗ್ರ ವಚನಸಾಹಿತ್ಯದ ಜನಪ್ರಿಯ ಆವೃತ್ತಿ ಯೋಜನೆ"ಗೆ ಉದಾರ ಅನುದಾನ ನೀಡಿದ ಕರ್ನಾಟಕ ಸರಕಾರಕ್ಕೂ, ಅನೇಕ ಬಗೆಗಳಲ್ಲಿ ಸಹಕರಿಸಿದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಆಡಳಿತ ವರ್ಗಕ್ಕೂ ನಮ್ಮ ಧನ್ಯವಾದಗಳು ಸಲ್ಲುತ್ತವೆ.

ಸಕಾಲದಲ್ಲಿ ಉತ್ಸಾಹದಿಂದ ಮುದ್ರಣಕಾರ್ಯವನ್ನು ಪೂರೈಸಿಕೊಟ್ಟ ಗದುಗಿನ ತ್ವರಿತ ಮುದ್ರಣಾಲಯದ ಒಡೆಯರಾದ ಶ್ರೀ ಫ. ಶಿ. ಭಾಂಡಗೆ ಅವರ ಸಹಕಾರವನ್ನು ಸ್ಮರಿಸುತ್ತೇವೆ.

೨೮ ನವೆಂಬರ್ ೧೯೯೦. —ಎಂ. ಎಂ. ಕಲಬುರ್ಗಿ

## ಪಿಂಡಸ್ಥಲ

೧

ಉದಕದೊಳಗೆ ಬಯ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತ್ತು,
ಸಸಿಯೊಳಗಣ ರಸದ ರುಚಿಯಂತಿದ್ದಿತ್ತು,
ನನೆಯೊಳಗಣ ಪರಿಮಳದಂತಿದ್ದಿತ್ತು,
ಕೂಡಲಸಂಗಮದೇವ ಕನ್ನೆಯ ಸ್ನೇಹದಂತಿದ್ದಿತ್ತು.

## ಪಿಂಡಜ್ಞಾನಸ್ಥಲ

೨

ಕಾಳಿಯ ಕಂಕಾಳದಿಂದ ಮುನ್ನ,
ತ್ರಿಪುರಸಂಹಾರದಿಂದ ಮುನ್ನ,
ಹರಿ ವಿರಿಂಚಿಗಳಿಂದ ಮುನ್ನ,
ಉಮೆಯ ಕಲ್ಯಾಣದಿಂದ ಮುನ್ನ,
ಮುನ್ನ ಮುನ್ನ ಮುನ್ನ–
ಅಂದಿಂಗೆಳೆಯ ನೀನು, ಹಳೆಯ ನಾನು
ಮಹಾದಾನಿ ಕೂಡಲಸಂಗಮದೇವಾ. ॥ ೨ ॥

೩

ಅಯ್ಯಾ, ನೀನು ನಿರಾಕಾರವಾಗಿರ್ದಲ್ಲಿ
ನಾನು ಜ್ಞಾನವೆಂಬ ವಾಹನವಾಗಿರ್ದೆ ಕಾಣಾ.
ಅಯ್ಯಾ, ನೀನು ನಾಟ್ಯಕ್ಕೆ ನಿಂದಲ್ಲಿ
ನಾನು ಚೈತನ್ಯವೆಂಬ ವಾಹನವಾಗಿರ್ದೆ ಕಾಣಾ.
ಅಯ್ಯಾ, ನೀನು ಆಕಾರವಾಗಿರ್ದಲ್ಲಿ
ನಾನು ವೃಷಭನೆಂಬ ವಾಹನವಾಗಿರ್ದೆ ಕಾಣಾ,
ಅಯ್ಯಾ, ನೀನೆನ್ನ ಭವವ ಕೊಂದೆಹೆನೆಂದು
ಜಂಗಮಲಾಂಛನವಾಗಿ ಬಂದಡೆ
ನಾನು ಭಕ್ತನೆಂಬ ವಾಹನವಾಗಿರ್ದೆ ಕಾಣಾ
ಕೂಡಲಸಂಗಮದೇವಾ. ॥ ೩ ॥

೪

ಅಯ್ಯಾ, ಏಳೇಳು ಜನ್ಮದಲ್ಲಿ ಶಿವಭಕ್ತನಾಗಿ ಬಾರದಿರ್ದಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ!
ನಿಮ್ಮ ಪ್ರಸಾದಕ್ಕಲ್ಲದೆ ಬಾಯ್ದೆರೆಯೆನಯ್ಯಾ.
ಪ್ರಥಮಭವಾಂತರದಲ್ಲಿ
ಶಿಲಾದನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು
ನಿಮ್ಮ ಭೃತ್ಯನ ಮಾಡಿ ಎನ್ನ ನಿರಿಸಿಕೊಂಡಿರ್ದಿರಯ್ಯಾ.

ಎರಡನೆಯ ಭವಾಂತರದಲ್ಲಿ
ಸ್ಕಂದನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು
ನಿಮ್ಮ ಕಾರುಣ್ಯವ ಮಾಡಿರಿಸಿಕೊಂಡಿರ್ದಿರಯ್ಯಾ.
ಮೂರನೆಯ ಭವಾಂತರದಲ್ಲಿ
ನೀಲಲೋಹಿತನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು
ನಿಮ್ಮ ಲೀಲಾವಿನೋದದಿಂದಿರಿಸಿಕೊಂಡಿರ್ದಿರಯ್ಯಾ.
ನಾಲ್ಕನೆಯ ಭವಾಂತರದಲ್ಲಿ
ಮನೋಹರನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು
ನಿಮ್ಮ ಮನಃಪ್ರೇರಕನಾಗಲೆಂದಿರಿಸಿಕೊಂಡಿರ್ದಿರಯ್ಯಾ.
ಐದನೆಯ ಭವಾಂತರದಲ್ಲಿ
ಕಾಲಲೋಚನನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು
ಸರ್ವಕಾಲಸಂಹಾರವ ಮಾಡಿಸುತ್ತಿದ್ದಿರಯ್ಯಾ.
ಆರನೆಯ ಭವಾಂತರದಲ್ಲಿ
ವೃಷಭನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು
ನಿಮಗೇರಲು ವಾಹನವಾಗಲೆಂದಿರಿಸಿಕೊಂಡಿರ್ದಿರಯ್ಯಾ.
ಏಳನೆಯ ಭವಾಂತರದಲ್ಲಿ
ಬಸವದಣ್ಣಾಯಕನೆಂಬ ಗಣೇಶ್ವರನ ಮಾಡಿ, ಹೆಸರಿಟ್ಟು ಕರೆದು
ನಿಮ್ಮ ಒಕ್ಕುದ ಮಿಕ್ಕುದಕ್ಕೆ ಯೋಗ್ಯನಾಗಲೆಂದಿರಿಸಿಕೊಂಡಿರ್ದಿರಯ್ಯಾ.
ಇದು ಕಾರಣ ಕೂಡಲಸಂಗಮದೇವಾ,
ನೀವು ಬರಿಸಿದ ಭವಾಂತರದಲ್ಲಿ ನಾನು ಬರುತಿರ್ದೆನಯ್ಯಾ. ॥ ೪ ॥

೫

ಅಯ್ಯಾ, ನಿಮ್ಮ ಶರಣನ ಮರ್ತ್ಯಕ್ಕೆ ತಂದೆಯಾಗಿ
ನೆನೆದು ಸುಖಿಯಾಗಿ ಆನು ಬದುಕಿದೆನಯ್ಯಾ,
ಅದೇನು ಕಾರಣ ತಂದೆಯೆಂದರಿದೆನಯ್ಯಾ,
ಎನ್ನ ಕಾರಣ ತಂದೆಯೆಂದರಿದೆನಯ್ಯಾ.
ಅರಿದರಿದು, ನಿಮ್ಮ ಶರಣನು ಆಚರಿಸುವ ಆಚರಣೆಯ ಕಂಡು
ಕಣ್ದೆರೆದೆನಯ್ಯಾ, ಕೂಡಲಸಂಗಮದೇವಾ. ॥ ೫ ॥

೬

ಕರಿ ಘನ: ಅಂಕುಶ ಕಿರಿದೆನ್ನಬಹುದೆ? ಬಾರದಯ್ಯಾ.
ಗಿರಿ ಘನ: ವಜ್ರ ಕಿರಿದೆನ್ನಬಹುದೆ? ಬಾರದಯ್ಯಾ.

ತಮಂಧ ಘನ: ಜ್ಯೋತಿ ಕಿರಿದೆನ್ನಬಹುದೆ? ಬಾರದಯ್ಯಾ.
ಮರಹು ಘನ: ನಿಮ್ಮ ನೆನೆವ ಮನ ಕಿರಿದೆನ್ನಬಹುದೆ? ಬಾರದಯ್ಯಾ
ಕೂಡಲಸಂಗಮದೇವಾ. ॥ ೬ ॥

## ಸಂಸಾರಹೇಯಸ್ಥಲ

೭

ಭವಬಂಧನ ಭವಪಾಶವಾದ ಕಾರಣವೇನಯ್ಯಾ?
ಹಿಂದಣ ಜನ್ಮದಲ್ಲಿ ಲಿಂಗವ ಮರೆದೆನಾಗಿ,
ಹಿಂದಣ ಸಿರಿಯಲ್ಲಿ ಜಂಗಮವ ಮರೆದೆನಾಗಿ.
ಅರಿದಡೀ ಸಂಸಾರವ ಹೊದ್ದಲೀವೆನೆ,
ಕೂಡಲಸಂಗಮದೇವಾ? ॥ ೭ ॥

೮

ಸಂಸಾರಸಾಗರದ ತೆರೆ ಕೊಬ್ಬಿ
ಮುಖದ ಮೇಲೆ ಅಲೆವುತ್ತಲಿದ್ದುದೆ,
ಸಂಸಾರಸಾಗರ ಉರದುದ್ದವೆ? ಹೇಳಾ!
ಸಂಸಾರಸಾಗರ ಕೊರಳುದ್ದವೆ? ಹೇಳಾ!
ಸಂಸಾರಸಾಗರ ಶಿರದುದ್ದವಾದ ಬಳಿಕ ಏನ ಹೇಳುವೆನಯ್ಯಾ!
ಅಯ್ಯಾ ಅಯ್ಯಾ ಎನ್ನ ಹುಯ್ಯಲ ಕೇಳಯ್ಯಾ
ಕೂಡಲಸಂಗಮದೇವಾ ನಾನೇವನೇವೆನಯ್ಯಾ! ॥ ೮ ॥

೯

ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ,
ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯಾ.
ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು,
ಇನ್ನೆಂದಿಂಗೆ ಮೋಕ್ಷವಹುದೊ ಕೂಡಲಸಂಗಮದೇವಾ? ॥ ೯ ॥

೧೦

ಇಲಿ ಗಡಹನೊಡ್ಡಿದಲ್ಲಿ ಇಪ್ಪಂತೆ ಎನ್ನ ಸಂಸಾರ,
ಕೆಡೆವನ್ನಕ್ಕ ಮಾಣದು,

ಹೆರರ ಬಾಧಿಸುವುದನು ತನು ಕೆಡೆವನ್ನಕ್ಕ ಮಾಣದು,
ಹೆರರ ಛಿದ್ರಿಸುವುದನು ಮನ ಕೆಡೆವನ್ನಕ್ಕ ಮಾಣದು.
ಅಕಟಕಟಾ, ಸಂಸಾರಕ್ಕೆ ಆಸತ್ತೆ
ಕೂಡಲಸಂಗಮದೇವಾ. ॥ ೧೦ ॥

೧೧

ಕಪ್ಪೆ ಸರ್ಪನ ನೆಳಲಲ್ಲಿಪ್ಪಂತೆ ಎನಗಾಯಿತ್ತಯ್ಯಾ,
ಅಕಟಕಟಾ, ಸಂಸಾರ ವೃಥಾಹೋಯಿತ್ತಲ್ಲಾ.
ಕರ್ತುವೆ ಕೂಡಲಸಂಗಮದೇವಾ
ಇವ ತಪ್ಪಿಸಿ ಎನ್ನುವ ರಕ್ಷಿಸಯ್ಯಾ. ॥ ೧೧ ॥

೧೨

ಶೂಲದ ಮೇಲಣ ವಿಭೋಗವೇನಾದಡೇನೊ?
ನಾನಾ ವರ್ಣದ ಸಂಸಾರ ಹಾವು ಹಾವಡಿಗನ ಸ್ನೇಹದಂತೆ!
ತನ್ನಾತ್ಮ ತನಗೆ ಹಗೆಯಾದ ಮತ್ತೆ
ಬಿನ್ನಾಣವುಂಟೆ, ಮಹಾದಾನಿ ಕೂಡಲಸಂಗಮದೇವಾ? ॥ ೧೨ ॥

೧೩

ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ,
ಎನ್ನುವನು ಕಾಯಯ್ಯಾ, ಕಾಯಯ್ಯಾ.
ಹುರುಳಿಲ್ಲ! ಹುರುಳಿಲ್ಲ!
ಕೂಡಲಸಂಗಮದೇವಾ, ಶಿವಧೋ! ಶಿವಧೋ! ॥ ೧೩ ॥

೧೪

ನಾನೊಂದ ನೆನೆದಡೆ ತಾನೊಂದ ನೆನೆವುದು,
ನಾನಿತ್ತಲೆಳೆದಡೆ ತಾನತ್ತಲೆಳೆವುದು.
ತಾ ಬೇರೆ ಎನ್ನನಳಲಿಸಿ ಕಾಡಿತ್ತು,
ತಾ ಬೇರೆ ಎನ್ನ ಬಳಲಿಸಿ ಕಾಡಿತ್ತು.
ಕೂಡಲಸಂಗನ ಕೂಡಿಹೆನೆಂದಡೆ
ತಾನೆನ್ನ ಮುಂದುಗೆಡಿಸಿತ್ತು ಮಾಯೆ. ॥ ೧೪ ॥

೧೫

ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ,
ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ,
ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ,
ಇದಾವಾವ ಪರಿಯಲ್ಲಿ ಕಾಡಿಹಿತು ಮಾಯೆ.
ಈ ಮಾಯೆಯ ಕಳೆವಡೆ ಎನ್ನಳವಲ್ಲ,
ನೀವೆ ಬಲ್ಲಿರಿ ಕೂಡಲಸಂಗಮದೇವಾ! ॥ ೧೫ ॥

೧೬

ಕೊಡೆವಿಡಿಯೆ, ಕುದುರೆಯ ದೃಢವುಳ್ಳ ರಾವುತನೇರೆ,
ಕೊಡೆ ಕೋಟಿ, ಶೂರರು ಹನ್ನಿಬ್ಬರಯ್ಯಾ!
ಚಂದ್ರಕಾಂತದ ಗಿರಿಯು ಬಂದು ಗಜ ಮೂದಲಿಸೆ
ಅರಿದು ಕೊಲುವೊಡೆ ರಿಪುಗಳ ಕಲಿತನವ ನೋಡಾ!
ಆವಿಗೆಯಲೊದಗಿದ ಪ್ರತ್ಥಳಿಯ ರೂಹಿನಂತೆ ಆಯಿತ್ತು
ಕೂಡಲಸಂಗಮದೇವಾ, ನಿನ್ನ ಹೆಸರಿಲ್ಲದ ಹೆಸರು! ॥ ೧೬ ॥

೧೭

ಇಂದಿಂಗೆಂತು ನಾಳಿಂಗೆಂತು ಎಂದು–
ಬೆಂದ ಒಡಲ ಹೊರೆಯ ಹೋಯಿತ್ತೆನ್ನ ಸಂಸಾರ!
ಹಿಂದೆ ನಾನಾ ಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ,
ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿಯಿಲ್ಲ.
ಎಂದೆಂದೂ ಸದಾಶಿವನ ಕುಂದದೆ ನೆನೆಯಲೀಯವೆ,
ಕೊಂದೂದಯ್ಯಾ ಈ ಮಾಯೆ, ಕೂಡಲಸಂಗಮದೇವಾ. ॥ ೧೭ ॥

೧೮

ದಿಟ ಪುಟ ಭಕುತಿಸಂಪುಟ ನೆಲೆಗೊಳ್ಳದಾಗಿ
ಟಿಂಬನನಾಡಿಸುತ್ತಿದ್ದಿತ್ತಯ್ಯಾ ನಿನ್ನ ಮಾಯೆ,
ಟೀವಕ ಟಿಂಬನನಾಡಿಸುತ್ತಿದ್ದಿತ್ತಯ್ಯಾ ನಿನ್ನ ಮಾಯೆ,
ಕೂಡಲಸಂಗಮದೇವಯ್ಯಾ,
ಹೊನ್ನು ಹೆಣ್ಣು ಮಣ್ಣು ತೋರಿ! ॥ ೧೮ ॥

೧೯

ಆಸತ್ತೆ ಅಲಸಿದೆನೆಂದಡೆ ಮಾಣದು,
ಬೇಸತ್ತೆ ಬೆಂಬಿದ್ದೆನೆಂದಡೆ ಮಾಣದು,
ಏವೆನೇವೆನೆಂದಡೆ ಮಾಣದು,
ಕಾಯದ, ಕರ್ಮದ ಫಲಭೋಗವು!
ಕೂಡಲಸಂಗನ ಶರಣರು ಬಂದು
ಹೋ ಹೋ, ಅಂಜದಿರೆಂದಡಾನು ಬದುಕುವೆನು. ॥ ೧೯ ॥

೨೦

ಸಂಸಾರವೆಂಬ ಸರ್ಪ ಮುಟ್ಟಲು
ಪಂಚೇಂದ್ರಿಯ ವಿಷಯವೆಂಬ ವಿಷದಿಂದ
ಆನು ಮುಂದುಗೆಟ್ಟೆನಯ್ಯಾ,
ಆನು ಹೊರಳಿ ಬೀಳುತ್ತಿದ್ದೆನಯ್ಯಾ!
'ಓಂ ನಮಃ ಶಿವಾಯ' ಎಂಬ ಮಂತ್ರವ ಜಪಿಸುತ್ತಿದ್ದೆನಯ್ಯಾ,
ಕೂಡಲಸಂಗಮದೇವಾ. ॥ ೨೦ ॥

೨೧

ಅರಿಯದೆ ಜನನಿಯ ಜಠರದಲ್ಲಿ
ಬಾರದ ಭವಂಗಳ ಬರಿಸಿದೆ ತಂದೆ,
ಹುಟ್ಟಿತ್ತೆ ತಪ್ಪಾಯಿತ್ತೆ, ಎಲೆ ಲಿಂಗವೆ?
ಮುನ್ನ ಹುಟ್ಟಿದುದಕ್ಕೆ ಕೃಪೆಯ ಮಾಡು ಲಿಂಗವೆ!
ಇನ್ನು ಹುಟ್ಟಿದಡೆ ಕೂಡಲಸಂಗಮದೇವಾ, ನಿಮ್ಮಾಣೆ. ॥ ೨೧ ॥

೨೨

ಎಂದೊ, ಸಂಸಾರದ ದಂದುಗ ಹಿಂಗೂದು?
ಎಂದೊ, ಮನದಲ್ಲಿ ಪರಿಣಾಮವಹುದೆನಗೆಂದೋ, ಎಂದೋ?
ಕೂಡಲಸಂಗಮದೇವಾ,
ಇನ್ನೆಂದೋ ಪರಮಸಂತೋಷದಲ್ಲಿಹುದೆನಗೆಂದೋ? ॥ ೨೨ ॥

೨೩

ಲೇಸ ಕಂಡು ಮನ ಬಯಸಿ ಬಯಸಿ
ಆಸೆ ಮಾಡಿದಡಿಲ್ಲ ಕಂಡಯ್ಯಾ.

ತಾಳಮರಕ್ಕೆ ಕೈಯ ನೀಡಿ
ಮೇಲೆ ನೋಡಿ ಗೋಣು ನೊಂದುದಯ್ಯಾ.
ಕೂಡಲಸಂಗಮದೇವಾ ಕೇಳಯ್ಯಾ,
ನೀನೀವ ಕಾಲಕ್ಕಲ್ಲದಿಲ್ಲ ಕಂಡಯ್ಯಾ! ॥ ೨೩ ॥

೨೪

ಮುನ್ನ ಮಾಡಿದ ಪಾಪ ಬೆನ್ನ ಬಿಡದನ್ನಕ್ಕ
ಇನ್ನು ಬಯಸಿದಡುಂಟೆ?
ಭಕ್ತಿಯುಳ್ಳವರ ನೋಡಿ ನೋಡಿ ಬಯಸಿದಡುಂಟೆ,
ಕೂಡಲಸಂಗಮದೇವರಲ್ಲಿ ಮುನ್ನ ವರವ ಪಡೆಯದನ್ನಕ್ಕ? ॥ ೨೪ ॥

೨೫

ಚಂದ್ರೋದಯಕ್ಕೆ ಅಂಬುಧಿ ಹೆಚ್ಚೂದಯ್ಯಾ,
ಚಂದ್ರ ಕುಂದೆ, ಕುಂದೂದಯ್ಯಾ.
ಚಂದ್ರಂಗೆ ರಾಹು ಅಡ್ಡ ಬಂದಲ್ಲಿ
ಅಂಬುಧಿ ಬೊಬ್ಬಿಟ್ಟಿತ್ತೆ ಅಯ್ಯಾ?
ಅಂಬುಧಿಯ ಮುನಿ ಆಪೋಶನವ ಕೊಂಬಲ್ಲಿ
ಚಂದ್ರಮನಡ್ಡ ಬಂದನೆ, ಅಯ್ಯಾ?
ಆರಿಗಾರೂ ಇಲ್ಲ, ಕೆಟ್ಟವಂಗೆ ಕೆಳೆಯಿಲ್ಲ,
ಜಗದ ನಂಟ ನೀನೆ, ಅಯ್ಯಾ,
ಕೂಡಲಸಂಗಮದೇವಯ್ಯಾ! ॥ ೨೫ ॥

೨೬

ಒಲೆ ಹತ್ತಿ ಉರಿದಡೆ ನಿಲಬಹುದಲ್ಲದೆ
ಧರೆ ಹತ್ತಿ ಉರಿದಡೆ ನಿಲಲುಬಾರದು.
ಏರಿ ನೀರುಂಬಡೆ, ಬೇಲಿ ಕೆಯ್ಯ ಮೇವಡೆ,
ನಾರಿ ತನ್ನ ಮನೆಯಲ್ಲಿ ಕಳುವಡೆ,
ತಾಯ ಮೊಲೆವಾಲು ನಂಜಾಗಿ ಕೊಲುವಡೆ,
ಇನ್ನಾರಿಗೆ ದೂರುವೆ ಕೂಡಲಸಂಗಮದೇವಾ! ॥ ೨೬ ॥

೨೭

ಎನ್ನ ಗುಣ ಅವಗುಣವ ಸಂಪಾದಿಸುವೆ ಅಯ್ಯಾ!
ಸರಿಯೆ, ಅಪ್ರತಿಮಮಹಿಮಾ, ನಿಮಗಾನು ಪ್ರತಿಯೆ?
ಕೂಡಲಸಂಗಮದೇವಾ ನೀವು ಮಾಡಲಾನಾದೆನು. ॥ ೨೭ ॥

೨೮

ಬೆದಕದಿರು ಬೆದಕದಿರು, ಬೆದಕಿದಡೆ ಹುರುಳಿಲ್ಲ.
ಚಿತ್ತರಟ್ಟೆಯ ಕಾಯಲ್ಲಿ ಮತ್ತೇನನರಸುವಿರಯ್ಯಾ?
ನಿಮ್ಮ ಉತ್ತಮಿಕೆಯು ಪೂರೈಸೂದು
ಕೂಡಲಸಂಗಮದೇವಾ. ॥ ೨೮ ॥

೨೯

ಎನ್ನ ಚಿತ್ತವು ಅತ್ತಿಯ ಹಣ್ಣು, ನೋಡಯ್ಯಾ,
ವಿಚಾರಿಸಿದಡೆ ಏನೂ ಹುರುಳಿಲ್ಲಯ್ಯಾ.
ಪ್ರಪಂಚಿನ ಡಂಬಿನಲ್ಲಿ ಎನ್ನನೊಂದು ರೂಪುಮಾಡಿ ನೀವಿರಿಸಿದಿರಿ,
ಕೂಡಲಸಂಗಮದೇವಾ. ॥ ೨೯ ॥

೩೦

ಎನ್ನ ನಡೆಯೊಂದು ಪರಿ, ಎನ್ನ ನುಡಿಯೊಂದು ಪರಿ,
ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯಾ.
ನುಡಿಗೆ ತಕ್ಕ ನಡೆಯ ಕಂಡಡೆ
ಕೂಡಲಸಂಗಮದೇವನೊಳಗಿಪ್ಪನಯ್ಯಾ. ॥ ೩೦ ॥

೩೧

ಮುಂಗೈಯ ಕಂಕಣಕ್ಕೆ ಕನ್ನಡಿಯ ತೋರುವಂತೆ
ಎನ್ನ ಮನವು ನಿಧಾನವನೊಲ್ಲದೆ ಜಲಗ ಮಚ್ಚಿತ್ತು ನೋಡಾ.
ನಾಯಿಗೆ ನಾರಿವಾಣವಕ್ಕೂದೆ
ಕೂಡಲಸಂಗಮದೇವಾ. ॥ ೩೧ ॥

೩೨

ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸೂದೆನ್ನ ಮನವು,
ನಿಂದಲ್ಲಿ ನಿಲಲೀಯದೆನ್ನ ಮನವು,

ಹೊಂದಿದಲ್ಲಿ ಹೊಂದಲೀಯದೆನ್ನ ಮನವು.
ಕೂಡಲಸಂಗಮದೇವಾ
ನಿಮ್ಮ ಚರಣಕಮಲದಲ್ಲಿ ಭ್ರಮರನಾಗಿರಿಸು, ನಿಮ್ಮ ಧರ್ಮ. ॥ ೩೨ ॥

೩೩

ಮರನನೇರಿದ ಮರ್ಕಟನಂತೆ
ಹಲವು ಕೊಂಬೆಗೆ ಹಾಯುತ್ತಲಿದ್ದೇನೆ.
ಬೆಂದ ಮನವ ನಾನೆಂತು ನಂಬುವೆನಯ್ಯಾ?
ಎಂತು ನಚ್ಚುವೆನಯ್ಯಾ?
ಎನ್ನ ತಂದೆ ಕೂಡಲಸಂಗಮದೇವನಲ್ಲಿಗೆ
ಹೋಗಲೀಯದಯ್ಯಾ. ॥ ೩೩ ॥

೩೪

ಅಂದಣವನೇರಿದ ಸೊಣಗನಂತೆ
ಕಂಡಡೆ ಬಿಡದು ತನ್ನ ಮುನ್ನಿನ ಸ್ವಭಾವವನು.
ಸುಡು, ಸುಡು, ಮನವಿದು ವಿಷಯಕ್ಕೆ ಹರಿವುದು,
ಮೃಡ ನಿಮ್ಮನನುದಿನ ನೆನೆಯಲೀಯದು.
ಎನ್ನೊಡೆಯ ಕೂಡಲಸಂಗಮದೇವಾ
ನಿಮ್ಮ ಚರಣವ ನೆನೆವಂತೆ ಕರುಣಿಸು–
ಸೆರಗೊಡ್ಡಿ ಬೇಡುವೆ, ನಿಮ್ಮ ಧರ್ಮ. ॥ ೩೪ ॥

೩೫

ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನಂತೆ ಎನ್ನ ಬಾಳುವೆ.
ಸಂಸಾರಸಂಗವ ಬಿಡದು ನೋಡೆನ್ನ ಮನವು.
ಈ ನಾಯಿತನವ ಮಾಣಿಸು–
ಕೂಡಲಸಂಗಮದೇವಯ್ಯಾ, ನಿಮ್ಮ ಧರ್ಮ. ॥ ೩೫ ॥

೩೬

ಒಂದು ಮೊಲಕ್ಕೆ ನಾಯನೊಂಬತ್ತು ಬಿಟ್ಟಂತೆ,
ಎನ್ನ ಬಿಡು, ತನ್ನ ಬಿಡು ಎಂಬುದು ಕಾಯವಿಕಾರ,
ಎನ್ನ ಬಿಡು, ತನ್ನ ಬಿಡು, ಎಂಬುದು ಮನೋವಿಕಾರ.
ಕರಣೇಂದ್ರಿಯಂಗಳೆಂಬ ಸೊಣಗ ಮುಟ್ಟದ ಮುನ್ನ
ಮನ ನಿಮ್ಮನೈದುಗೆ, ಕೂಡಲಸಂಗಮದೇವಾ. ॥ ೩೬ ॥

೩೭

ದಂದುಗ ಬಿಡದು ಮನದ ಸಂದೇಹ ಹಿಂಗದಾಗಿ:
ಮುಂದೆ ಲಿಂಗವ ಕಂಡೇನೆಂಬುದು ಹುಸಿ ನೋಡಾ.
ಬೆಂದ ಕರಣಾದಿಗಳು ಒಂದೆ ಪಥವನರಿಯವು,
ಎಂತು ಶಿವಪಥವೆನಗೆ ಸಾಧ್ಯವಪ್ಪುದಯ್ಯಾ?
ಎನ್ನ ತಂದೆ ಕೂಡಲಸಂಗಮದೇವಾ,
ನಿಮ್ಮ ಶರಣರ ಬಳಿವಿಡಿದಡೆ ಎನ್ನ ದಂದುಗ ಹಿಂಗೂದು. || ೩೭ ||

೩೮

ತನ್ನ ವಿಚಾರಿಸಲೊಲ್ಲದು, ಇದಿರ ವಿಚಾರಿಸಹೋಹುದೀ ಮನವು.
ಏನ ಮಾಡುವೆನೀ ಮನವನು, ಎಂತು ಮಾಡುವೆನೀ ಮನವನು.
ಕೂಡಲಸಂಗಮದೇವನ ಶರಣರ
ನಚ್ಚದ ಮಚ್ಚದ ಬೆಂದ ಮನವನು. || ೩೮ ||

೩೯

ತನ್ನಿಚ್ಛೆಯ ನುಡಿದಡೆ ಮೆಚ್ಚೂದೀ ಮನವು,
ಇದಿರಿಚ್ಛೆಯ ನುಡಿದಡೆ ಮೆಚ್ಚದೀ ಮನವು.
ಕೂಡಲಸಂಗನ ಶರಣರ
ನಚ್ಚದ ಮಚ್ಚದ ಮನವ ಕಿಚ್ಚಿನೊಳಗಿಕ್ಕು. || ೩೯ ||

೪೦

ಸುಡಲೀ ಮನವೆನ್ನನುಡುಹುನ ಮಾಡಿತ್ತು,
ನಡೆವಲ್ಲಿ ನುಡಿವಲ್ಲಿ ಅಧಿಕನೆಂದೆನಿಸಿತ್ತು.
ಬೆಡಗಿನ ಕೀಲು ಕಳೆದು ಕೆಡೆದ ಬಳಿಕ
ಕಡುಗೂರ್ಪ ಮಡದಿ ತಾ ಮುಟ್ಟಲಮ್ಮಳು,
ಒಡಲನುರಿಕೊಂಬುದು, ಒಡವೆಯನರಸ ಕೊಂಬ,
ಕಡುಗೂರ್ಪ ಮಡದಿಯ ಮತ್ತೊಬ್ಬ ಚೆನ್ನಿಗ ಕೊಂಬ.
ಮುನ್ನ ಮಾಡಿದುದು ತನ್ನ ಬೆನ್ನ ಬಿಡದನ್ನಕ್ಕ,
ಇನ್ನು ಮಾಡಿದರಳವೆ ಕೂಡಲಸಂಗಮದೇವಾ? || ೪೦ ||

೪೧

ವಚನದ ಹುಸಿ ನುಸುಳೆಂತು ಮಾಬುದೆನ್ನ?
ಮನದ ಮರ್ಕಟತನವೆಂತು ಮಾಬುದೆನ್ನ?

ಹೃದಯದ ಕಲ್ಮಷವೆಂತು ಮಾಬುದೆನ್ನ?
ಕಾಯವಿಕಾರಕ್ಕೆ ತರಿಸಲುವೋದೆನು,
ಎನಗಿದು ವಿಧಿಯೆ, ಕೂಡಲಸಂಗಮದೇವಾ? ॥ ೪೧ ॥

೪೨

ಅಂಗದ [ಮಾ]ಟವು ಸಿಂಗದ ಗಾತ್ರವು,
ಪಿಂಗದು ಮನದಲ್ಲಿ ನಾನಾ ವಿಕಾರವು.
ಬಂದೆಹೆನೆಂದರಿಯಲಿಲ್ಲಾಗಿ, ಸಂದೇಹ ಬಿಡದಾಗಿ,
ಮುಂದುಗಾಣದು ಲೋಕ.
ಬೆಂದ ಮಾಯಕ್ಕಂಜಿ ನಿಮ್ಮ ಮರೆವೊಕ್ಕೆ,
ಕೂಡಲಸಂಗಮದೇವಾ. ॥ ೪೨ ॥

೪೩

ವಿಕಳನಾದೆನು ಪಂಚೇಂದ್ರಿಯ ಸಪ್ತಧಾತುವಿನಿಂದ,
ಮತಿಗೆಟ್ಟೆನು ಮನದ ವಿಕಾರದಿಂದ,
ಧೃತಿಗೆಟ್ಟೆನು ಕಾಯವಿಕಾರದಿಂದ.
ಶರಣುವೊಕ್ಕೆನು ಕೂಡಲಸಂಗಮದೇವಯ್ಯಾ. ॥ ೪೩ ॥

೪೪

ಮುನಿವೆಯಾದಡೆ ಒಮ್ಮೆ ಜರೆದಡೆ ಸಾಲದೆ?
ಅಕಟಕಟಾ, ಮದನಂಗೆ ಮಾರುಗೊಡುವರೆ?
ಹಗೆಗೆ ಮಾರುಗೊಟ್ಟು ನಿನ್ನವರನೊಪ್ಪಿಸುವರೆ
ಕೂಡಲಸಂಗಮದೇವಾ? ॥ ೪೪ ॥

೪೫

ಆನು ಒಬ್ಬನು, ಸುಡುವರೈವರು,
ಮೇಲೆ ಕಿಚ್ಚು ಘನ, ನಿಲಲುಬಾರದು.
ಕಾಡ ಬಸವನ ಹುಲಿ ಕೊಂಡೊಯ್ದಡೆ
ಅರೈಯಲಾಗದೆ ಕೂಡಲಸಂಗಮದೇವಾ? ॥ ೪೫ ॥

೪೬

ಆಸೆ, ಆಮಿಷ, ತಾಮಸ, ಹುಸಿ, ವಿಷಯ,
ಕುಟಿಲ, ಕುಹಕ, ಕ್ರೋಧ, ಕ್ಷುದ್ರ, ಮಿಥ್ಯೆ–

ಇವನೆನ್ನ ನಾಲಗೆಯ ಮೇಲಿಂದತ್ತ ತೆಗೆದು ಕಳೆಯಯ್ಯಾ.
ಅದೇಕೆಂದಡೆ, ನಿನ್ನತ್ತಲೆನ್ನ ಬರಲೀಯವು.
ಇದು ಕಾರಣ, ಇವೆಲ್ಲವ ಕಳೆದು
ಎನ್ನ ಪಂಚೈವರ, ಭಕ್ತರ ಮಾಡು ಕೂಡಲಸಂಗಮದೇವಾ. || ೪೬ ||

೪೭

ಎಂತು ಶಿವಭಕ್ತಿಯ ನಾನುಪಮಿಸುವೆನಯ್ಯಾ?
ಎಂತು ಶಿವಾಚಾರವೆನಗೆ ವೇದ್ಯವಪ್ಪುದೋ ಅಯ್ಯಾ?
ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರದಿಂದ ಕಟ್ಟುವಡೆದೆನು.
ಹಸಿವು, ತೃಷೆ, ವ್ಯಸನದಿಂದ ಕುದಿಯುತ್ತಿದ್ದೇನೆ.
ಪಂಚೇಂದ್ರಿಯ, ಸಪ್ತಧಾತು
ಹರಿಹಂಚುಮಾಡಿ ಕಾಡಿಹವಯ್ಯಾ.
ಅಯ್ಯಾ, ಅಯ್ಯಾ ಎನ್ನ ಹುಯ್ಯಲ ಕೇಳಯ್ಯಾ
ಕೂಡಲಸಂಗಮದೇವಾ, ನಾನೇವನೇವೆನಯ್ಯಾ. || ೪೭ ||

೪೮

ಕಾಯವಿಕಾರ ಕಾಡಿಹುದಯ್ಯಾ,
ಮನೋವಿಕಾರ ಕೂಡಿಹುದಯ್ಯಾ.
ಇಂದ್ರಿಯ ವಿಕಾರ ಸುಳಿವುದಯ್ಯಾ!
ಸುಳುವಿನೊಳಗೆ ಸುಳಿವುತ್ತಲಿದ್ದೇನೆ, ಸಿಲುಕಿಸದಿರಯ್ಯಾ!
ಅನ್ಯ ಚಿತ್ತದಲ್ಲಿರಿಸದಿರಯ್ಯಾ, ನಿಮ್ಮ ಚಿತ್ತದಲ್ಲಿರಿಸಯ್ಯಾ.
ಅನುಪಮಸುಖಸಾರಾಯ ಶರಣರಲ್ಲಿ—
ಕೂಡಲಸಂಗಮದೇವಯ್ಯಾ, ಇದನೆ ಬೇಡುವೆನಯ್ಯಾ. || ೪೮ ||

೪೯

ಬಂದ ಯೋನಿಯನರಿದು ಸಲಹೆನ್ನ ತಂದೆ.
ಬೆಂದ ಮನವೆನ್ನ ಗತಿಗೆಡಿಸಿ ಕಾಡಿತ್ತು,
ಬೆಂದ ಮನವೆನ್ನ ಮತಿಗೆಡಿಸಿ ಕಾಡಿತ್ತು,
ಎನ್ನ ತಂದೆ ಕೂಡಲಸಂಗಮದೇವಾ, ಮಾಣಿಸು ನಿಮ್ಮ ಧರ್ಮ. || ೪೯ ||

೫೦

ಬೆಳೆಯ ಭೂಮಿಯಲೊಂದು ಪ್ರಳಯದ ಕಸ ಹುಟ್ಟಿ
ತೆಳೆಯಲೀಯದು, ಎಚ್ಚರಲೀಯದು.

ಎನ್ನವಗುಣವೆಂಬ ಕಸವ ಕಿತ್ತು ಸಲಹಯ್ಯಾ, ಲಿಂಗತಂದೆ
ಸುಳಿದೆಗೆದು ಬೆಳೆವೆನು ಕೂಡಲಸಂಗಮದೇವಾ. || ೫೦ ||

೫೧

ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ.
ಪಶುವೇನ ಬಲ್ಲುದು? ಹಸುರೆಂದೆಳೆಸುವುದು.
ವಿಷಯರಹಿತನ ಮಾಡಿ, ಭಕ್ತಿರಸವ ದಣಿಯೆ ಮೇಯಿಸಿ,
ಸುಬುದ್ಧಿಯೆಂಬ ಉದಕವನೆರೆದು,
ನೋಡಿ ಸಲಹಯ್ಯಾ, ಕೂಡಲಸಂಗಮದೇವಾ. || ೫೧ ||

೫೨

ಕೆಸರಲ್ಲಿ ಬಿದ್ದ ಪಶುವಿನಂತೆ
ಆನು ದೆಸೆದೆಸೆಗೆ ಬಾಯ ಬಿಡುತ್ತಿದ್ದೇನೆ, ಅಯ್ಯಾ.
ಆರೈವವರಿಲ್ಲ, ಅಕಟಕಟ!
ಪಶುವೆಂದೆನ್ನ ಕೂಡಲಸಂಗಮದೇವ ಕೊಂಬ ಹಿಡಿದೆತ್ತುವನ್ನಕ್ಕ. || ೫೨ ||

೫೩

ಬಡಪಶು ಪಂಕದಲ್ಲಿ ಬಿದ್ದಡೆ
ಕಾಲ ಬಡಿವುದಲ್ಲದೆ, ಬೇರೆ ಗತಿಯುಂಟೆ?
ಶಿವ ಶಿವ ಹೋದೆಹೆ, ಹೋದೆಹೆನಯ್ಯಾ.
ನಿಮ್ಮ ಮನದತ್ತಲೆನ್ನ ತೆಗೆಯಯ್ಯಾ.
ಪಶುವಾನು, ಪಶುಪತಿ ನೀನು,
ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ
ಒಡೆಯಾ ನಿಮ್ಮ ಬಯ್ಯದಂತೆ ಮಾಡು,
ಕೂಡಲಸಂಗಮದೇವಾ. || ೫೩ ||

೫೪

ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ
'ಅಂಬೆ ಅಂಬೆ' ಎಂದು ಕರೆವುತ್ತಲಿದ್ದೇನೆ,
'ಅಂಬೆ ಅಂಬೆ' ಎಂದು ಒರಲುತ್ತಲಿದ್ದೇನೆ,
ಕೂಡಲಸಂಗಮದೇವ 'ಬಾಳು ಬಾಳೆ'ಂಬನ್ನಕ್ಕ. || ೫೪ ||

೫೫

ಸಮುದ್ರದೊಳಗಣ ಸಿಂಪಿನಂತೆ
ಬಾಯ ಬಿಡುತ್ತಿದ್ದೇನಯ್ಯಾ.
ನೀವಲ್ಲದೆ ಮತ್ತಾರು ಎನ್ನನರಿವರಿಲ್ಲ ನೋಡಯ್ಯಾ.
ಕೂಡಲಸಂಗಮದೇವಾ
ನೀನಲ್ಲದೊಳಕೊಂಬವರಿಲ್ಲಯ್ಯಾ. || ೫೫ ||

೫೬

ಅಯ್ಯಾ, ಅಯ್ಯಾ, ಎಂದು ಕರೆವುತ್ತಲಿದ್ದೇನೆ.
ಅಯ್ಯಾ, ಅಯ್ಯಾ, ಎಂದು ಒರಲುತ್ತಲಿದ್ದೇನೆ.
ಓ ಎನ್ನಲಾಗದೆ ಅಯ್ಯಾ?
ಆಗಳೂ ನಿಮ್ಮ ಕರೆವುತ್ತಲಿದ್ದೇನೆ
ಮೋಸವೇ ಕೂಡಲಸಂಗಮದೇವಾ. || ೫೬ ||

೫೭

ನೀ ಹುಟ್ಟಿಸಿದಲ್ಲಿ ಹುಟ್ಟಿ,
ನೀ ಕೊಂದಲ್ಲಿ ಸಾಯದೆ, ಎನ್ನ ವಶವೆ ಅಯ್ಯಾ?
ನೀವಿರಿಸಿದಲ್ಲಿ ಇರದೆ, ಎನ್ನ ವಶವೆ ಅಯ್ಯಾ?
ಅಕಟಕಟಾ, ಎನ್ನವನೆನ್ನವನೆನ್ನಯ್ಯಾ
ಕೂಡಲಸಂಗಮದೇವಯ್ಯಾ. || ೫೭ ||

೫೮

ನರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ ಸಲಹುತ್ತ,
ಶಿವ ಶಿವಾ ಎಂದೋದಿಸಯ್ಯಾ.
ಭಕ್ತಿಯೆಂಬ ಪಂಜರದೊಳಗಿಕ್ಕಿ ಸಲಹು, || ೫೮ ||
ಕೂಡಲಸಂಗಮದೇವಾ.

೫೯

ಅತ್ತಲಿತ್ತ ಹೋಗದಂತೆ, ಹೆಳವನ ಮಾಡಯ್ಯಾ ತಂದೆ,
ಸುತ್ತಿ ಸುಳಿದು ನೋಡದಂತೆ, ಅಂಧಕನ ಮಾಡಯ್ಯಾ ತಂದೆ,
ಮತ್ತೊಂದ ಕೇಳದಂತೆ, ಕಿವುಡನ ಮಾಡಯ್ಯಾ ತಂದೆ,

ನಿಮ್ಮ ಶರಣರ ಪಾದವಲ್ಲದೆ
ಅನ್ಯ ವಿಷಯಕ್ಕೆಳಸದಂತೆ ಇರಿಸು, ಕೂಡಲಸಂಗಮದೇವಾ. ॥ ೫೯ ॥

೬೦

ಎನ್ನ ವಾಮ–ಕ್ಷೇಮ ನಿಮ್ಮದಯ್ಯಾ,
ಎನ್ನ ಹಾನಿ–ವೃದ್ಧಿ ನಿಮ್ಮದಯ್ಯಾ,
ಎನ್ನ ಮಾನಾಪಮಾನವೂ ನಿಮ್ಮದಯ್ಯಾ,
ಬಳ್ಳಿಗೆ ಕಾಯಿ ದಿಮ್ಮಿತ್ತೆ, ಕೂಡಲಸಂಗಮದೇವಾ. ॥ ೬೦ ॥

೬೧

ಸಟೆಯಿಲ್ಲದಂತೆ, ಪ್ರಪಂಚುವಿಲ್ಲದಂತೆ, ವೈಶಿಕವಿಲ್ಲದಂತೆ,
ನಡೆಸಯ್ಯಾ ಲಿಂಗತಂದೆ.
ಒಂದು ನಿಮಿಷವಾದಡೆಯೂ ನಿಮ್ಮ ಶರಣರ ಸಂಗದಲ್ಲಿರಿಸಯ್ಯಾ.
ಬೇರೆ ಮತ್ತೆ ಅನ್ಯವ ತೋರದಿರಯ್ಯಾ.
ಹೊಲಬುಗೆಟ್ಟೆನಯ್ಯಾ, ಕೂಡಲಸಂಗಮದೇವಾ. ॥ ೬೧ ॥

೬೨

ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ.
ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯಾ.
ಕೂಡಲಸಂಗಮದೇವಾ
ನಿಮ್ಮ ಮನೆಯ ಮಗನೆಂದೆನಿಸಯ್ಯಾ. ॥ ೬೨ ॥

೬೩

ಹುಟ್ಟಿಂದು ಲೋಕದಲ್ಲಿ ಹುಟ್ಟಿಸಿ ಇಳಿಯ ಬಿಟ್ಟಡೆ
ನಿಮ್ಮ ನಗುವರಯ್ಯಾ.
ಶಿವಬಟ್ಟೆಯಲೆನ್ನನು ಇರಿಸಯ್ಯಾ ಹರನೆ,
ಹೊಲಬುಗೆಟ್ಟೆನು ಬಟ್ಟೆಯ ತೋರಯ್ಯಾ.
ಹುಯ್ಯಲಿಟ್ಟೆನು, ಗಣಂಗಳು ಕೇಳಿರಯ್ಯಾ,
ಕೂಡಲಸಂಗಮದೇವಯ್ಯ ಎನ್ನ ಕಾಡಿಹನಯ್ಯಾ. ॥ ೬೩ ॥



೬೪

ಅಕಟಕಟಾ, ಶಿವ ನಿನಗಿನಿತು ಕರುಣವಿಲ್ಲ,
ಅಕಟಕಟಾ ಶಿವ ನಿನಗಿನಿತು ಕೃಪೆಯಿಲ್ಲ.
ಏಕೆ ಹುಟ್ಟಿಸಿದೆ, ಇಹಲೋಕ ದುಃಖಿಯ?
ಪರಲೋಕದೂರನ, ಏಕೆ ಹುಟ್ಟಿಸಿದೆ?
ಕೂಡಲಸಂಗಮದೇವಾ ಕೇಳಯ್ಯಾ,
ಎನಗಾಗಿ ಮತ್ತೊಂದು ತರುಮರನಿಲ್ಲವೆ? || ೬೪ ||

೬೫

ನರ ಕೂರಂಬಿನಲೆಚ್ಚ, ಅವಂಗೊಲಿದೆಯಯ್ಯಾ,
ಅರಳಂಬಿನಲೆಚ್ಚ ಕಾಮನನುರುಹಿದೆ.
ಇರುಳು ಹಗಲೆನ್ನದೆ ಪ್ರಾಣಘಾತಕವ ಮಾಡಿದ
ಬೇಡನ ಕೈಲಾಸಕೊಯ್ದೆಯಯ್ಯಾ,
ಎನ್ನ ನೇತಕೊಲ್ಲೆ ಕೂಡಲಸಂಗಮದೇವಾ? || ೬೫ ||

೬೬

ನೀನೊಲಿದಡೆ ಕೊರಡು ಕೊನರೂದಯ್ಯಾ,
ನೀನೊಲಿದಡೆ ಬರಡು ಹಯನಹುದಯ್ಯಾ,
ನೀನೊಲಿದಡೆ ವಿಷವೆಲ್ಲ ಅಮೃತವಹುದಯ್ಯಾ,
ನೀನೊಲಿದಡೆ ಸಕಲ ಪಡಿಪದಾರ್ಥ
ಇದಿರಲ್ಲಿರ್ಪುವು ಕೂಡಲಸಂಗಮದೇವಾ. || ೬೬ ||

೬೭

ಮೇರು ಗುಣವನರಸೂದೆ ಕಾಗೆಯಲ್ಲಿ?
ಪರುಷ ಗುಣವನರಸೂದೆ ಕಬ್ಬುನದಲ್ಲಿ?
ಸಾಧು ಗುಣವನರಸೂದೆ ಅವಗುಣಿಯಲ್ಲಿ?
ಚಂದನ ಗುಣವನರಸೂದೆ ತರುಗಳಲ್ಲಿ?
ಸರ್ವಗುಣಸಂಪನ್ನ ಲಿಂಗವೆ, ನೀನೆನ್ನಲ್ಲಿ ಅವಗುಣವನರಸುವರೆ
ಕೂಡಲಸಂಗಮದೇವಾ? || ೬೭ ||

೧೮

ಭವಭವದಲ್ಲಿ ಎನ್ನ ಮನವು ಸಿಲುಕದೆ?
ಭವಭವದಲ್ಲಿ ಎನ್ನ ಮನವು ಕಟ್ಟದೆ? ಭವಸಾಗರದಲ್ಲಿ ಮುಳುಗದೆ?
ಭವರಾಟಳದೊಳು ತುಂಬದೆ? ಕೆಡಹದೆ?
ಭವವಿರಹಿತ ನೀನು, ಅವಧಾರು
ಕರುಣಿಸು ಕೂಡಲಸಂಗಮದೇವಾ. ॥ ೧೮ ॥

೧೯

ಆಸೆಯೆಂಬ ಪಾಶದಲ್ಲಿ ಭವಬಂಧನನಾಗಿರ್ದೆನಯ್ಯಾ,
ಸಕೃತು ನಿಮ್ಮ ನೆನೆಯಲು ಎನಗೆ ತೆರಹಿಲ್ಲಯ್ಯಾ!
ಕರುಣಾಕರ, ಅಭಯಕರ, ವರದ ನೀ ಕರುಣಿಸಯ್ಯಾ,
ಸಂಸಾರ ಬಂಧನವನು ಮಾಣಿಸಿ, ಎನಗೆ ಕೃಪೆಯ ಮಾಡಿ
ನಿಮ್ಮ ಶ್ರೀಪಾದಪದ್ಮದಲ್ಲಿ ಭ್ರಮರನಾಗಿರಿಸು,
ಭಕ್ತಜನಮನೋವಲ್ಲಭ ಕೂಡಲಸಂಗಮದೇವಾ. ॥ ೧೯ ॥

## ಗುರುಕರುಣಸ್ಥಲ

೨೦

ಮಡಕೆಯ ಮಾಡುವಡೆ ಮಣ್ಣೆ ಮೊದಲು,
ತೊಡಿಗೆಯ ಮಾಡುವಡೆ ಹೊನ್ನೆ ಮೊದಲು,
ಶಿವಪಥವನರಿವಡೆ ಗುರುಪಥವೆ ಮೊದಲು,
ಕೂಡಲಸಂಗಮದೇವರನರಿವಡೆ
ಶರಣರ ಸಂಗವೆ ಮೊದಲು. ॥ ೨೦ ॥

೨೧

ನೋಡಿ ನೋಡಿ ಮಾಡುವ ನೇಮ ಸಲ್ಲವು, ಸಲ್ಲವು.
ತನುವುದ್ದೇಶ, ಮನವುದ್ದೇಶವಾಗಿ
ಮಾಡುವ ನೇಮ ಸಲ್ಲವು, ಸಲ್ಲವು.
ಗುರುಪಥವ ಮೀರಿ ಮಾಡುವ ನೇಮ ಸಲ್ಲವು, ಸಲ್ಲವು.
ಕೂಡಲಸಂಗಮದೇವಯ್ಯಾ
ಇವು ನಿಮ್ಮ ನಿಜದೊಳಗೆ ನಿಲ್ಲವು, ನಿಲ್ಲವು. ॥ ೨೧ ॥

೭೨

ಗುರುವಚನವಲ್ಲದೆ ಲಿಂಗವೆಂದೆನಿಸದು,
ಗುರುವಚನವಲ್ಲದೆ ಜಂಗಮವೆಂದೆನಿಸದು,
ಗುರುವಚನವಲ್ಲದೆ ನಿತ್ಯವೆಂದೆನಿಸದು,
ಗುರುವಚನವಲ್ಲದೆ ನೇಮವೆಂದೆನಿಸದು.
ತಲೆಯಿಲ್ಲದ ಅಟ್ಟೆಗೆ ಪಟ್ಟವ ಕಟ್ಟುವ
ಉಭಯ ಭ್ರಷ್ಟರ ಮೆಚ್ಚುವನೆ,
ನಮ್ಮ ಕೂಡಲಸಂಗಮದೇವ? ॥ ೭೨ ॥

## ವಿಭೂತಿಸ್ಥಲ

೭೩

ಮುನ್ನ ಮಾಡಿದ ಪಾಪವೆಂತು ಹೋಹುದೆಂದು ಚಿಂತಿಸಬೇಡ.
ಕಹಿ ಸೋರೆಯ ಕಾಯ ತಂದು ವಿಭೂತಿಯ ತುಂಬಿದಡೆ
ಸಿಹಿಯಾಗದೆ ಮೂರು ದಿವಸಕ್ಕಯ್ಯಾ?
ಹಲವು ಕಾಲ ಕೊಂದ ಸೂನೆಗಾರನ ಕತ್ತಿಯಾದಡೇನು
ಪರುಷ ಮುಟ್ಟಲಿಕೆ ಹೊನ್ನಾಗದೆ ಅಯ್ಯಾ?
ಲಲಾಟದಲ್ಲಿ ವಿಭೂತಿ ಬರೆಯಲಿಕೆ ಪಾಪ ಪಲ್ಲಟವಾಗದೆ
ಕೂಡಲಸಂಗಮದೇವಾ? ॥ ೭೩ ॥

೭೪

ನೀರಿಂಗೆ ನೈದಿಲೆಯೆ ಶೃಂಗಾರ,
ಸಮುದ್ರಕ್ಕೆ ತೆರೆಯೆ ಶೃಂಗಾರ,
ನಾರಿಗೆ ಗುಣವೆ ಶೃಂಗಾರ,
ಗಗನಕ್ಕೆ ಚಂದ್ರಮನೆ ಶೃಂಗಾರ,
ನಮ್ಮ ಕೂಡಲಸಂಗನ ಶರಣರಿಗೆ
ನೊಸಲ ವಿಭೂತಿಯೆ ಶೃಂಗಾರ. ॥ ೭೪ ॥

## ಪಂಚಾಕ್ಷರಿಸ್ಥಲ

೭೫

ಕರಿಯಂಜೂದು ಅಂಕುಶಕ್ಕಯ್ಯಾ,
ಗಿರಿಯಂಜೂದು ಕುಲಿಶಕ್ಕಯ್ಯಾ,
ತಮಂಧವಂಜೂದು ಜ್ಯೋತಿಗಯ್ಯಾ,
ಕಾನನವಂಜೂದು ಬೇಗೆಗಯ್ಯಾ,
ಪಂಚಮಹಾಪಾತಕವಂಜೂದು
ಕೂಡಲಸಂಗನ ನಾಮಕ್ಕಯ್ಯಾ. ॥ ೭೫ ॥

೭೬

ಜಪತಪ ನಿತ್ಯನೇಮವೆನಗುಪದೇಶ,
ನಿಮ್ಮ ನಾಮವೆನಗೆ ಮಂತ್ರ,
ಶಿವನಾಮವೆನಗೆ ತಂತ್ರ,
ಕೂಡಲಸಂಗಮದೇವಯ್ಯಾ
ನಿಮ್ಮ ನಾಮವೆನಗೆ ಕಾಮಧೇನು. ॥ ೭೬ ॥

೭೭

ಅಕಟಕಟಾ ಬೆಡಗು ಬಿನ್ನಾಣವೆಂಬುದೇನೊ!
ಓಂ ನಮಃ ಶಿವಾಯ ಎಂಬುದೇ ಮಂತ್ರ,
ಓಂ ನಮಃ ಶಿವಾಯ ಎಂಬುದೇ ತಂತ್ರ,
ನಮ್ಮ ಕೂಡಲಸಂಗಮದೇವರ ನೆನೆವುದೆ ಮಂತ್ರ. ॥ ೭೭ ॥

೭೮

ವಶ್ಯವ ಬಲ್ಲೆವೆಂದೆಂಬಿರಯ್ಯಾ,
ಬುದ್ಧಿಯನರಿಯದ ಮನುಜರು ಕೇಳಿರಯ್ಯಾ.
ವಶ್ಯವಾವುದೆಂದರಿಯದೆ,
ಮರುಳುಗೊಂಬಿರಿ ಎಲೆ ಗಾವಿಲ ಮನುಜರಿರಾ.
ಓಂ ನಮಃ ಶಿವಾಯ ಎಂಬ ಮಂತ್ರ ಸರ್ವಜನವಶ್ಯ
ಕೂಡಲಸಂಗಮದೇವಾ. ॥ ೭೮ ॥

೭೯

ಭವಬಂಧನ ದುರಿತಂಗಳ ಗೆಲುವಡೆ
ಓಂ ನಮಃ ಶಿವಶರಣೆಂದಡೆ ಸಾಲದೆ?
ಹರ ಹರ ಶಂಕರ, ಶಿವ ಶಿವ ಶಂಕರ,
ಜಯ ಜಯ ಶಂಕರ ಶರಣೆನುತ್ತಿದ್ದೇನೆ.
ಎನ್ನ ಪಾತಕ ಪರಿಹರ,
ಕೂಡಲಸಂಗಮದೇವಾ ಶರಣೆನುತ್ತಿದ್ದೇನೆ. ‖ ೭೯ ‖

೮೦

ಎನ್ನ ಮನದಲ್ಲಿ ಮತ್ತೊಂದನರಿಯೆನಯ್ಯಾ,
ಓಂ ನಮಃ ಶಿವಾಯ, ಓಂ ನಮಃ ಶಿವಾಯ
ಎನಗಿದೆ ಮಂತ್ರ, ಇದೇ ಜಪ.
ಕೂಡಲಸಂಗಮದೇವಾ ನೀನೆ ಬಲ್ಲೆ, ಎಲೆ ಲಿಂಗವೆ. ‖ ೮೦ ‖

೮೧

ಓಂ ನಮಃ ಶಿವಾಯ
ಎಂಬ ಮಂತ್ರವ ಮೀರಲಮ್ಮದೆ ನಿಂದವು ವೇದ,
ಓಂ ನಮಃ ಶಿವಾಯ
ಎಂಬ ಮಂತ್ರವ ಮೀರಲಮ್ಮದೆ ನಿಂದವು ಶಾಸ್ತ್ರ,
ಓಂ ನಮಃ ಶಿವಾಯ
ಎಂಬ ಮಂತ್ರವ ಮೀರಲಮ್ಮದೆ ನಿಂದವು ತರ್ಕ.
ಭಯಂಕರ ಭ್ರಮೆಗೊಂಡಿತ್ತು ಮಂತ್ರ-ತಂತ್ರ,
ಶಿವನಂತುವನರಿಯದೆ ಚಿಂತಿಸುತ್ತಿದ್ದಿತ್ತು ಲೋಕ,
ಕೂಡಲಸಂಗಮದೇವ ಶ್ವಪಚನ ಮರೆದಡೆ
ಜಾತಿಭೇದವ ಮಾಡಲಮ್ಮವು. ‖ ೮೧ ‖

೮೨

ಬಿಳಿಯ ಕರಿಕೆ, ಕಣಗಿಲೆಲೆಯ, ತೊರೆಯ ತಡಿಯ ಮಳಲ ತಂದು,
ಗೌರಿಯ ನೋನುವ ಬನ್ನಿರೆ.
ಚಿಕ್ಕ ಚಿಕ್ಕ ಮಕ್ಕಳೆಲ್ಲರು ನೆರೆದು
ಅನುಪಮದಾನಿ ಕೂಡಲಸಂಗಮದೇವ ಗಂಡನಾಗಬೇಕೆಂದು. ‖ ೮೨ ‖

೮೩

ಎಮ್ಮವರು ಬೆಸಗೊಂಡಡೆ ಶುಭಲಗ್ನವೆನ್ನಿರಯ್ಯಾ,
ರಾಶಿಕೂಟ ಋಣಸಂಬಂಧವುಂಟೆಂದು ಹೇಳಿರಯ್ಯಾ,
ಚಂದ್ರಬಲ ತಾರಾಬಲವುಂಟೆಂದು ಹೇಳಿರಯ್ಯಾ,
ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ,
ಕೂಡಲಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯಾ. ॥ ೮೩ ॥

## ಲಿಂಗಧಾರಣಸ್ಥಲ

೮೪

ಪಾತಕ ಶತಕೋಟಿಯನೊರಸಲು
ಸಾಲದೆ ಒಂದು ಶಿವನ ನಾಮ?
ಸಾಲದೆ ಒಂದು ಹರನ ನಾಮ?
ಕೂಡಲಸಂಗಮದೇವಾ
ನಿಮ್ಮ ಉಂಡಿಗೆಯ ಪಶುವ ಮಾಡಿದೆಯಾಗಿ. ॥ ೮೪ ॥

೮೫

ಲಿಂಗದ ಉಂಡಿಗೆಯ ಪಶುವಾನಯ್ಯಾ,
ವೇಷಧಾರಿಯಾನು, ಉದರಪೋಷಕ ನಾನಯ್ಯಾ,
ಕೂಡಲಸಂಗನ ಶರಣರ ಧರ್ಮದ ಕವಿಲೆಯಾನು. ॥ ೮೫ ॥

೮೬

ನಮಃ ಶಿವಾಯ ನಮಃ ಶಿವಾಯ ನಮಃ ಶಿವಾಯ
ಶರಣೆಂದಿತ್ತು ಲಲಾಟಲಿಖಿತ
ಬರೆದ ಬಳಿಕ ಪಲ್ಲಟವ ಮಾಡಬಾರದು.
ಎನ್ನ ಉರದ ಉಂಡಿಗೆ, ಶಿರದ ಅಕ್ಷರ
ಕೂಡಲಸಂಗಯ್ಯಾ ಶರಣೆಂದಿತ್ತು. ॥ ೮೬ ॥

೮೭

ಅಡ್ಡ ವಿಭೂತಿಯಿಲ್ಲದವರ ಮುಖಹೊಲ್ಲ, ನೋಡಲಾಗದು.
ಲಿಂಗದೇವನಿಲ್ಲದ ಠಾವು ನರವಿಂಧ್ಯ, ಹೊಗಲಾಗದು.
ದೇವಭಕ್ತರಿಲ್ಲದೂರು ಸಿನೆ ಹಾಳು,
ಕೂಡಲಸಂಗಮದೇವಾ. ॥ ೮೭ ॥

೮೮

ಅಡ್ಡ ತ್ರಿಪುಂಡ್ರದ, ಮಣಿಮಕುಟವೇಷದ
ಶರಣರ ಕಂಡಡೆ ನಂಬೂದೆನ್ನ ಮನವು,
ನಚ್ಚೂದೆನ್ನ ಮನವು, ಸಂದೇಹವಿಲ್ಲದೆ.
ಇವಿಲ್ಲದವರ ಕಂಡಡೆ ನಂಬೆ ಕೂಡಲಸಂಗಮದೇವಾ. ॥ ೮೮ ॥

## ತಾಮಸನಿರಸನಸ್ಥಲ

೮೯

ಆರಾಧ್ಯ ಪ್ರಾಣಲಿಂಗವೆಂದರಿದು,
ಪೂರ್ವಗುಣವಳಿದು ಪುನರ್ಜಾತನಾದ ಬಳಿಕ
ಸಂಸಾರಬಂಧುಗಳೆನ್ನವರೆಂದಡೆ
ನಂಟುಭಕ್ತಿ ನಾಯಕನರಕ–
ಇಂತೆಂದುದು ಕೂಡಲಸಂಗನ ವಚನ. ॥ ೮೯ ॥

೯೦

ತಾಳಮರದ ಕೆಳಗೆ ಒಂದು ಹಾಲ ಹರವಿಯಿದ್ದಡೆ
ಅದ ಹಾಲಹರವಿಯೆನ್ನರು, ಸುರೆಯ ಹರವಿಯೆಂಬರು.
ಈ ಭಾವನಿಂದೆಯ ಮಾಣಿಸಾ
ಕೂಡಲಸಂಗಮದೇವಾ. ॥ ೯೦ ॥

೯೧

ಸುಪಥಮಂತ್ರದುಪದೇಶವ ಕಲಿತು, ಮುಕ್ತಿಗೆಟ್ಟು ನಡೆವಿರಯ್ಯಾ,
ತತ್ತ್ವಮಸಿ ಎಂಬುದನರಿದು ಕತ್ತಲೆಗ ಹಿತುವಿರಯ್ಯಾ.

ವೇದವಿಪ್ರರ ವಿಚಾರಿಸಿ ನೋಡಲು,
ಉಪದೇಶಪರೀಕ್ಷೆ ನರಕವೆಂದುದು
ಕೂಡಲಸಂಗನ ವಚನಸೂಚನೆ. || ೯೧ ||

೯೨

ಕುಂಬಳದ ಕಾಯಿಗೆ ಕಬ್ಬುನದ ಕಟ್ಟ ಕೊಟ್ಟಡೆ
ಕೊಳೆವುದಲ್ಲದೆ ಬಲುಹಾಗಬಲ್ಲುದೆ?
ಅಳಿಮನದವಂಗೆ ದೀಕ್ಷೆಯ ಕೊಟ್ಟಡೆ
ಭಕ್ತಿಯೆಂತಹುದು? ಮುನ್ನಿನಂತೆ.
ಕೂಡಲಸಂಗಯ್ಯಾ
ಮನಹೀನನ ಮೀಸಲ ಕಾಯ್ದಿರಿಸಿದಂತೆ. || ೯೨ ||

೯೩

ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದಡೆ
ರಂಜನೆಯಹುದಲ್ಲದೆ ಅದರ ಗಂಜಳ ಬಿಡದಣ್ಣಾ.
ಮಣ್ಣ ಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದಡೆ
ನಿಚ್ಚ ಕೆಸರಹುದಲ್ಲದೆ ಅದರಚ್ಚಿಗ ಬಿಡದಣ್ಣಾ.
ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟಡೆ
ಕೆಟ್ಟವನೇಕೆ ಸದ್ಭಕ್ತನಹನು ಕೂಡಲಸಂಗಮದೇವಾ? || ೯೩ ||

೯೪

ಕಬ್ಬುನದ ಕೋಡಗವ ಪರುಷ ಮುಟ್ಟಲು,
ಹೊನ್ನಾದಡೇನು ಮತ್ತೇನಾದಡೇನು
ತನ್ನ ಮುನ್ನಿನ ರೂಹ ಬಿಡದನ್ನಕ್ಕ?
ಕೂಡಲಸಂಗಮದೇವಾ,
ನಿಮ್ಮ ನಂಬಿಯೂ ನಂಬದ ಡಂಬಕರುಗಳಯ್ಯಾ. || ೯೪ ||

೯೫

ತನುವಿನಲೊಂದಿಟ್ಟು ಮನದಲಿರಡಿಟ್ಟಡೆ,
ಬಲ್ಲನೊಲ್ಲನಯ್ಯಾ, ಲಿಂಗವು ಬಲ್ಲನೊಲ್ಲನಯ್ಯಾ.
ಪರಚಿಂತೆಯನೊಲ್ಲನೊಲ್ಲ
ಕೂಡಲಸಂಗಮದೇವ. || ೯೫ ||

೯೬

ಒಳಗೆ ಕುಟಿಲ, ಹೊರಗೆ ವಿನಯವಾಗಿ ಭಕ್ತರೆನಿಸಿಕೊಂಬವರ
ಬಲ್ಲನೊಲ್ಲನಯ್ಯಾ ಲಿಂಗವು,
ಅವರು ಪಥಕ್ಕೆ ಸಲ್ಲರು ಸಲ್ಲರಯ್ಯಾ.
ಒಳಹೊರಗೊಂದಾಗದವರಿಗೆ
ಅಳಿಯಾಸೆದೋರಿ ಬೀಸಾಡುವನವರ
ಜಗದೀಶ ಕೂಡಲಸಂಗಮದೇವ. || ೯೬ ||

೯೭

ಮನೆಯೊಳಗೆ ಮನೆಯೊಡೆಯನಿದ್ದಾನೊ, ಇಲ್ಲವೊ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ,
ಮನೆಯೊಳಗೆ ಮನೆಯೊಡೆಯನಿದ್ದಾನೊ, ಇಲ್ಲವೊ?
ತನುವಿನಲ್ಲಿ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ
ಮನದೊಳಗೆ [ಮನಮೊ]ಡೆಯನಿದ್ದಾನೊ, ಇಲ್ಲವೊ?
ಇಲ್ಲ, ಕೂಡಲಸಂಗಮದೇವಾ. || ೯೭ ||

೯೮

ಓತೆತ್ತ ಬಲ್ಲುದು ಅವಲಕ್ಕಿಯ ಸವಿಯ?
ಕೋಡುಗ ಬಲ್ಲುದೆ ಸೆಳೆಮಂಚದ ಸುಖವ?
ಕಾಗೆ ನಂದನವನದೊಳಗಿದ್ದಡೇನು,
ಕೋಗಿಲೆಯಾಗಬಲ್ಲುದೆ ಹೇಳಾ?
ಕೊಳನ ತಡಿಯಲೊಂದು ಹೊರಸು ಕುಳ್ಳಿರ್ದಡೇನು,
ಕಳಹಂಸೆಯಾಗಬಲ್ಲುದೆ, ಕೂಡಲಸಂಗಮದೇವಾ? || ೯೮ ||

೯೯

ಎನಿಸು ಕಾಲ ಕಲ್ಲು ನೀರೊಳಗಿದ್ದಡೇನು,
ನೆನೆದು ಮೃದುವಾಗಬಲ್ಲುದೆ?
ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ,
ಮನದಲ್ಲಿ ದೃಢವಿಲ್ಲದನ್ನಕ್ಕ?
ನಿಧಾನವ ಕಾಯ್ದಿರ್ದ ಬೆಂತರನಂತೆ
ಅದರ ವಿಧಿ ಏನಾಯಿತ್ತು, ಕೂಡಲಸಂಗಮದೇವಾ. || ೯೯ ||

೧೦೦

ಸಂತವಿದ್ದ ಮನೆಗೆ ಕೊಂತವ ತಂದಂತೆ
ಇದನೆಂತು ಸಂತೈಸುವೆನು?
ಸಂತೆಯ ಗುಡಿಲ ಸೂಳೆಗೆ ಕೊಂತವಳವಡುವುದೆ?
ಕೂಡಲಸಂಗಮದೇವರ ಮಹತ್ತು
ಆರಿಗೂ ಅಳವಡದು. ॥ ೧೦೦ ॥

೧೦೧

ಕೂಸುಳ್ಳ ಸೂಳೆ ಧನದಾಸೆಗೊತ್ತೆಯ ಕೊಂಡಡೆ
ಕೂಸಿಂಗಲ್ಲ, ಬೊಜಗಂಗಲ್ಲ.
ಕೂಸನೊಮ್ಮೆ ಸಂತವಿಡುವಳು, ಬೊಜಗನನೊಮ್ಮೆ ನೆರೆವಳು.
ಧನದಾಸೆ ಬಿಡದು ಕೂಡಲಸಂಗಮದೇವಾ. ॥ ೧೦೧ ॥

೧೦೨

ಎರದೆಲೆಯಂತೆ ಒಳಗೊಂದು ಹೊರಗೊಂದಾದಡೆ ಮೆಚ್ಚುವನೆ?
ಪಾರದ ಭವಂಗಳ ಬರಿಸುವನಲ್ಲದೆ ಮೆಚ್ಚುವನೆ?
ಅಘೋರ ನರಕವನುಣಿಸುವನಲ್ಲದೆ ಮೆಚ್ಚುವನೆ?
ಉಡುವಿನ ನಾಲಗೆಯಂತೆ ಎರಡಾದಡೆ
ಕೂಡಲಸಂಗಯ್ಯ ಮೆಚ್ಚುವನೆ? ॥ ೧೦೨ ॥

೧೦೩

ಭಕ್ತರ ಕಂಡಡೆ ಬೋಳರಪ್ಪಿರಯ್ಯಾ,
ಸವಣರ ಕಂಡಡೆ ಬತ್ತಲೆಯಪ್ಪಿರಯ್ಯಾ,
ಹಾರುವರ ಕಂಡಡೆ ಹರಿನಾಮವೆಂಬಿರಯ್ಯಾ,
ಅವರವರ ಕಂಡಡೆ ಅವರವರಂತೆ
ಸೂಳೆಗೆ ಹುಟ್ಟಿದವರ ತೋರದಿರಯ್ಯಾ.
ಕೂಡಲಸಂಗಯ್ಯನ ಪೂಜಿಸಿ, ಅನ್ಯದೈವಂಗಳಿಗೆರಗಿ
ಭಕ್ತರೆನಿಸಿಕೊಂಬ ಅಜ್ಞಾನಿಗಳ ನಾನೇನೆಂಬೆನಯ್ಯಾ. ॥ ೧೦೩ ॥

೧೦೪

ಗಂಡ ಶಿವಲಿಂಗದೇವರ ಭಕ್ತ,
ಹೆಂಡತಿ ಮಾರಿ ಮಸಣಿಯ ಭಕ್ತೆ.
ಗಂಡ ಕೊಂಬುದು ಪಾದೋದಕ–ಪ್ರಸಾದ,
ಹೆಂಡತಿ ಕೊಂಬುದು ಸುರೆ–ಮಾಂಸ.
ಭಾಂಡ–ಭಾಜನ ಶುದ್ಧವಿಲ್ಲದವರ ಭಕ್ತಿ
ಹೆಂಡದ ಮಡಕೆಯ ಹೊರಗೆ ತೊಳೆದಂತೆ
ಕೂಡಲಸಂಗಮದೇವಾ. ॥ ೧೦೪ ॥

೧೦೫

ಹಾವಡಿಗನು ಮೂಕೊರತಿಯು: ತನ್ನ ಕೈಯಲ್ಲಿ ಹಾವು,
ಮಗನ ಮದುವೆಗೆ ಶಕುನವ ನೋಡಹೋಹಾಗ
ಇದಿರಲೊಬ್ಬ ಮೂಕೊರತಿಯ ಹಾವಡಿಗನ ಕಂಡು,
ಶಕುನ ಹೊಲ್ಲೆಂಬ ಚದುರನ ನೋಡಾ.
ತನ್ನ ಸತಿ ಮೂಕೊರತಿ, ತನ್ನ ಕೈಯಲ್ಲಿ ಹಾವು,
ತಾನು ಮೂಕೊರೆಯ.
ತನ್ನ ಭಿನ್ನವನರಿಯದೆ ಅನ್ಯರನೆಂಬ
ಕುನ್ನಿಯನೇನೆಂಬೆ ಕೂಡಲಸಂಗಮದೇವಾ? ॥ ೧೦೫ ॥

೧೦೬

ಅಂಗದಿಚ್ಛೆಗೆ ಮದ್ಯಮಾಂಸವ ತಿಂಬರು,
ಕಂಗಳಿಚ್ಛೆಗೆ ಪರವಧುವ ನೆರೆವರು.
ಲಿಂಗಲಾಂಛನಧಾರಿಯಾದಲ್ಲಿ ಫಲವೇನು
ಲಿಂಗಪಥವ ತಪ್ಪಿ ನಡೆವವರು?
ಜಂಗಮಮುಖದಿಂದ ನಿಂದೆ ಬಂದಡೆ
ಕೊಂಡ ಮಾರಿಂಗೆ ಹೋಹುದು ತಪ್ಪದು
ಕೂಡಲಸಂಗಮದೇವಾ. ॥ ೧೦೬ ॥

೧೦೭

ಶಿವಜನ್ಮದಲ್ಲಿ ಹುಟ್ಟಿ, ಲಿಂಗೈಕ್ಯರಾಗಿ,
ತನ್ನ ಅಂಗದ ಮೇಲೆ ಲಿಂಗವಿರುತಿರಲು,
ಅನ್ಯರನೆ ಹಾಡಿ, ಅನ್ಯರನೆ ಹೊಗಳಿ,

ಅನ್ಯರ ವಚನವ ಕೊಂಡಾಡಲು, ಕರ್ಮ ಬಿಡದು, ಭವಬಂಧನ!
ಶ್ವಾನಯೋನಿಯಲ್ಲಿ ಬಪ್ಪುದು ತಪ್ಪದು!
ಇದು ಕಾರಣ, ಕೂಡಲಸಂಗಮದೇವಾ,
ನಿಮ್ಮ ನಂಬಿಯೂ ನಂಬದ ಡಂಬಕರಿಗೆ
ಮಳಲ ಗೋಡೆಯನಿಕ್ಕಿ, ನೀರಲ್ಲಿ ತೊಳೆದಂತಾಯಿತ್ತಯ್ಯಾ. ॥ ೧೦೭ ॥

೧೦೮

ಅರ್ಥರೇಖೆಯಿದ್ದಲ್ಲಿ ಫಲವೇನು, ಆಯುಷ್ಯರೇಖೆ ಇಲ್ಲದನ್ನಕ್ಕರ?
ಹಂದಿಯ ಕೈಯಲ್ಲಿ ಚಂದ್ರಾಯುಧವಿದ್ದಲ್ಲಿ ಫಲವೇನು?
ಅಂಧಕನ ಕೈಯಲ್ಲಿ ದರ್ಪಣವಿದ್ದು ಫಲವೇನು?
ಮರ್ಕಟನ ಕೈಯಲ್ಲಿ ಮಾಣಿಕವಿದ್ದು ಫಲವೇನು?
ನಮ್ಮ ಕೂಡಲಸಂಗನ ಶರಣರನರಿಯದವರ ಕೈಯಲ್ಲಿ
ಲಿಂಗವಿದ್ದು ಫಲವೇನು? ಶಿವಪಥವನರಿಯುವನ್ನಕ್ಕ. ॥ ೧೦೮ ॥

೧೦೯

ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ,
ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ,
ಇದ್ದಡೇನೊ ಶಿವ ಶಿವಾ ಹೋದಡೇನೊ?
ಕೂಡಲಸಂಗಮದೇವಯ್ಯಾ
ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ. ॥ ೧೦೯ ॥

೧೧೦

ಅವಳ ವಚನ ಬೆಲ್ಲದಂತೆ, ಹೃದಯದಲಿಪ್ಪುದು ನಂಜು ಕಂಡಯ್ಯಾ.
ಕಂಗಳಲೊಬ್ಬನ ಕರೆವಳು, ಮನದಲೊಬ್ಬನ ನೆರೆವಳು.
ಕೂಡಲಸಂಗಮದೇವ ಕೇಳಯ್ಯಾ,
ಮಾನಿಸಗಳ್ಳೆಯ ನಂಬದಿರಯ್ಯಾ. ॥ ೧೧೦ ॥

೧೧೧

ಹಾದರಕ್ಕೆ ಹೋದಡೆ, ಕಳ್ಳದಮ್ಮ ಹಾಯಿತ್ತು.
ಹಾಳು ಗೋಡೆಗೆ ಹೋದಡೆ, ಚೇಳೂರಿತ್ತು.
ಅಬ್ಬರವ ಕೇಳಿ ತಳವಾರ ಉಟ್ಟ ಸೀರೆಯ ಸುಲಿದ.

ನಾಚಿ ಹೋದಡೆ ಮನೆಯ ಗಂಡ ಬೆನ್ನ ಬಾರನೆತ್ತಿದ,
ಅರಸು ಕೂಡಲಸಂಗಮದೇವ ದಂಡವ ಕೊಂಡ. ॥ ೧೧೧ ॥

೧೧೨

ಗರಿ ತೋರೆ ಗಂಡರೆಂಬವರ ಕಾಣೆ,
ನಿರಿ ಸೋಂಕೆ ಮುನಿ[ಯು]ಲ್ಲ ನೋಡಯ್ಯಾ.
ನಂಟುತನವೇನವನ? ಬಂಟತನವೇನವನ?
ಹುಲ್ಲುಕಿಚ್ಚು, ಹೊಲೆಯನ ಮೇಳಾಪ-
ಅಲ್ಲಿ ಹುರುಳಿಲ್ಲ, ಕೂಡಲಸಂಗಮದೇವಾ. ॥ ೧೧೨ ॥

೧೧೩

ಆಳಿವುತ್ತ ಆಳಿವುತ್ತ ಬಳಲುವರಲ್ಲದೆ, ಕೊಳಗ ಬಳಲೂದೆ?
ನಡೆವುತ್ತ ನಡೆವುತ್ತ ಬಳಲುವರಲ್ಲದೆ, ಬಟ್ಟೆ ಬಳಲೂದೆ?
ಶ್ರವವ ಮಾಡುತ್ತ ಮಾಡುತ್ತ ಬಳಲುವರಲ್ಲದೆ, ಕೋಲು ಬಳಲೂದೆ?
ನಿಜವನರಿಯದ ಭಕ್ತ ಬಳಲುವನಲ್ಲದೆ, ಲಿಂಗ ಬಳಲೂದೆ?
ಕೂಡಲಸಂಗಮದೇವಾ, ಅರಸರಿಯದ ಬಿಟ್ಟಿಯೋ. ॥ ೧೧೩ ॥

## ಭಕ್ತನ ಜ್ಞಾನಿಸ್ಥಲ

೧೧೪

ಒಲೆಯ ಬೂದಿಯ ಬಳಿಯಲು ಬೇಡ,
ಒಲಿದಂತೆ ಹೂಸಿಕೊಂಡಿಪ್ಪುದು.
ಹೂಸಿ ಏನು ಫಲ, ಮನದಲ್ಲಿ ಲೇಸಿಲ್ಲದನ್ನಕ್ಕ?
ಒಂದನಾಡಹೋಗಿ ಒಂಬತ್ತನಾಡುವ ಡಂಬಕರ ಮೆಚ್ಚ
ಕೂಡಲಸಂಗಯ್ಯ. ॥ ೧೧೪ ॥

೧೧೫

ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ,
ಹರದ ಕುಳ್ಳಿರ್ದ ನಮ್ಮ ಮಹಾದೇವಸೆಟ್ಟಿ.

ಒಮ್ಮನವಾದಡೆ ಒಡನೆ ನುಡಿವನು,
ಇಮ್ಮನವಾದಡೆ ನುಡಿಯನು.
ಕಾಣೆಯ ಸೋಲ, ಅರ್ಧಗಾಣೆಯ ಗೆಲ್ಲ,
ಜಾಣ ನೋಡವ್ವಾ, ನಮ್ಮ ಕೂಡಲಸಂಗಮದೇವ. ॥ ೧೧೫ ॥

೧೧೬

ನಂಬರು ನಚ್ಚರು ಬರಿದೆ ಕರೆವರು,
ನಂಬಲರಿಯರೀ ಲೋಕದ ಮನುಜರು.
ನಂಬಿ ಕರೆದಡೋ ಎನ್ನನೆ ಶಿವನು?
ನಂಬದೆ ನಚ್ಚದೆ ಬರಿದೆ ಕರೆವರ
ಕೊಂಬ ಮೆಟ್ಟಿ ಕೂಗೆಂದ ಕೂಡಲಸಂಗಮದೇವ. ॥ ೧೧೬ ॥

೧೧೭

ಹುತ್ತವ ಬಡಿದಡೆ ಹಾವು ಸಾಯಬಲ್ಲುದೆ ಅಯ್ಯಾ?
ಅಘೋರ ತಪವ ಮಾಡಿದಡೇನು?
ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತು ನಂಬುವನಯ್ಯಾ
ಕೂಡಲಸಂಗಮದೇವ? ॥ ೧೧೭ ॥

೧೧೮

ಕಾಮವೇಕೊ, ಲಿಂಗಪ್ರೇಮಿಯೆನಿಸುವಂಗೆ?
ಕ್ರೋಧವೇಕೊ, ಶರಣವೇದ್ಯನೆನಿಸುವಂಗೆ?
ಲೋಭವೇಕೊ, ಭಕ್ತಿಯ ಲಾಭವ ಬಯಸುವಂಗೆ?
ಮೋಹವೇಕೊ, ಪ್ರಸಾದವೇದ್ಯನೆನಿಸುವಂಗೆ?
ಮದಮತ್ಸರವುಳ್ಳವಂಗೆ ಹೃದಯಶುದ್ಧವೆಲ್ಲಿಯದೊ?
ಹದುಳಿಗರಾದಲ್ಲಿಪ್ಪ ಕೂಡಲಸಂಗಮದೇವ. ॥ ೧೧೮ ॥

೧೧೯

ಸಾರ: ಸಜ್ಜನರ ಸಂಗವ ಮಾಡೂದು,
ದೂರ: ದುರ್ಜನರ ಸಂಗ ಬೇಡವಯ್ಯಾ.
ಆವ ಹಾವಾದಡೇನು? ವಿಷವೊಂದೆ,
ಅಂತವರ ಸಂಗ ಬೇಡವಯ್ಯಾ.
ಅಂತರಂಗ ಶುದ್ಧವಿಲ್ಲದವರ ಸಂಗವು
ಸಿಂಗಿ, ಕಾಳಕೂಟ ವಿಷವೊ, ಕೂಡಲಸಂಗಯ್ಯಾ. ॥ ೧೧೯ ॥

೧೨೦

ಹಸಿದು ಎಕ್ಕೆಯ ಕಾಯ ಮೆಲಬಹುದೆ?
ನೀರಡಿಸಿ ವಿಷವ ಕುಡಿಯಬಹುದೆ?
ಸುಣ್ಣದ, ತುಯ್ಯಲ[ದ] ಬಣ್ಣವೊಂದೆ ಎಂದಡೆ
ನಂಟುತನಕ್ಕೆ ಉಣಬಹುದೆ?
ಲಿಂಗಸಾರಾಯ ಸಜ್ಜನರಲ್ಲದವರ
ಕೂಡಲಸಂಗಮದೇವರೆಂತೊಲಿವ? ॥ ೧೨೦ ॥

೧೨೧

ಎಲವದ ಮರ ಹೂತು ಫಲವಾದ ತೆರನಂತೆ:
ಸಿರಿಯಾದಡೇನು, ಶಿವಭಕ್ತಿಯಿಲ್ಲದನ್ನಕ್ಕ?
ಫಲವಾದಡೇನು ಹೇಳಾ, ಹಾವುಮೆಕ್ಕೆಯ ಕಾಯಿ?
ಕುಲವಿಲ್ಲದ ರೂಹು ಎಲ್ಲಿದ್ದಡೇನು?
ಬಚ್ಚಲ ನೀರು ತಿಳಿದಲ್ಲಿ ಫಲವೇನು?
ಅವಗುಣಗಳನು ಮೆಚ್ಚ ಕೂಡಲಸಂಗಮದೇವ. ॥ ೧೨೧ ॥

೧೨೨

ಬಚ್ಚಲ ನೀರು ತಿಳಿದಡೇನು?
ಸಲ್ಲದ ಹೊನ್ನು ಮತ್ತೆಲ್ಲಿದ್ದಡೇನು?
ಆಕಾಶದ ಮಾಪಿನ ಫಲವೆಂದಡೇನು?
ಕೊಯ್ಯಲಿಲ್ಲ, ಮೆಲ್ಲಲಿಲ್ಲ.
ಕೂಡಲಸಂಗನ ಶರಣರ ಅನುಭಾವವಿಲ್ಲದವ
ಎಲ್ಲಿದ್ದಡೇನು, ಎಂತಾದಡೇನು? ॥ ೧೨೨ ॥

೧೨೩

ಗಿಳಿಯೋದಿ ಫಲವೇನು?
ಬೆಕ್ಕು ಬಹುದ ಹೇಳಲರಿಯದು.
ಜಗವೆಲ್ಲವ ಕಾಬ ಕಣ್ಣು,
ತನ್ನ ಕೊಂಬ ಕೊಲ್ಲೆಯ ಕಾಣಲರಿಯದು.
ಇದಿರ ಗುಣವ ಬಲ್ಲೆವೆಂಬರು, ತಮ್ಮ ಗುಣವನರಿಯರು,
ಕೂಡಲಸಂಗಮದೇವಾ. ॥ ೧೨೩ ॥

೧೨೪

ಲೋಕದ ಡೊಂಕ ನೀವೇಕೆ ತಿದ್ದುವಿರಿ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ;
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ.
ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ
ಕೂಡಲಸಂಗಮದೇವ. ॥೧೨೪ ॥

೧೨೫

ಏತ ತಲೆವಾಗಿದಡೇನು, ಗುರುಭಕ್ತನಾಗಬಲ್ಲುದೆ?
ಇಕ್ಕುಳ ಕೈಮುಗಿದಡೇನು, ಭೃತ್ಯಾಚಾರಿಯಾಗಬಲ್ಲುದೆ?
ಗಿಳಿಯೋದಿದಡೇನು, ಲಿಂಗವೇದಿಯಾಗಬಲ್ಲುದೆ?
ಕೂಡಲಸಂಗನ ಶರಣರು ಬಂದ ಬರವ, ನಿಂದ ನಿಲವ
ಅನಂಗಸಂಗಿಗಳೆತ್ತ ಬಲ್ಲರು. ॥ ೧೨೫ ॥

೧೨೬

ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ:
ಆ ಪೂಜೆಯು, ಆ ಮಾಟವು
ಚಿತ್ರದ ರೂಹು ಕಾಣಿರಣ್ಣಾ, ಚಿತ್ರದ ಕಬ್ಬು ಕಾಣಿರಣ್ಣಾ,
ಅಪ್ಪಿದಡೆ ಸುಖವಿಲ್ಲ, ಮೆಲಿದಡೆ ರುಚಿಯಿಲ್ಲ.
ಕೂಡಲಸಂಗಮದೇವಾ, ನಿಜವಿಲ್ಲದವನ ಭಕ್ತಿ. ॥ ೧೨೬ ॥

೧೨೭

ಸ್ನೇಹ ತಪ್ಪಿದ ಠಾವಿನಲ್ಲಿ ಗುಣವನರಸುವರೆ ಅಯ್ಯಾ?
ಹೂ ಬಾಡಿದಲ್ಲಿ ಪರಿಮಳವನರಸುವರೆ ಅಯ್ಯಾ?
ಎನ್ನ ತಂದೆ ಕೂಡಲಸಂಗಮದೇವಾ
ತೊರೆ ಇಳಿದಡೆ ಅಂಬಿಗಂಗೇನುಂಟು? ॥ ೧೨೭ ॥

೧೨೮

ಆಸೆಗೆ ಹುಟ್ಟಿದ ಪ್ರಾಣಿ ಆಸೆಯುನೆ ಕಲಿತು,
ಪುಣ್ಯದ ಪದವಿಯ ಬಯಸಿದಡೆ
ಭವಮಾಲೆಯ ಬರವು ತಪ್ಪದು.
ಬೇಡಲು ಹುಟ್ಟಿದ ಪ್ರಾಣಿಗೆ, ಬೇಡಲು ವಿಧಿಯೆ?
ಸೂಳೆಗೆ ಹುಟ್ಟಿದ ಪ್ರಾಣಿಗೆ ನಿಜಗುಣ ಸಜ್ಜನವಪ್ಪುದೆ?

ಲಿಂಗ–ಉದಯ, ಶರಣ–ವಿಸ್ತಾರವು ಬಯಸಿದಡೊಳವೆ
ಕೂಡಲಸಂಗಮದೇವಾ, ನಿಮ್ಮಲ್ಲಿ? ॥ ೧೨೮ ॥

೧೨೯

ಹಬ್ಬಕ್ಕೆ ತಂದ ಹರಕೆಯ ಕುರಿ
ತೋರಣಕ್ಕೆ ತಂದ ತಳಿರ ಮೇಯಿತ್ತು.
ಕೊಂದಹರೆಂಬುದನರಿಯದೆ
ಬೆಂದ ಒಡಲ ಹೊರೆವುತ್ತಲದೆ.
ಅದಂದೆ ಹುಟ್ಟಿತ್ತು, ಅದೂದೆ ಹೊಂದಿತ್ತು.
ಕೊಂದವರುಳಿವರೆ ಕೂಡಲಸಂಗಮದೇವಾ. ॥ ೧೨೯ ॥

೧೩೦

ಹಾವಿನ ಬಾಯ ಕಪ್ಪೆ ಹಸಿದು
ಹಾರುವ ನೊಣಕ್ಕೆ ಆಸೆಮಾಡುವಂತೆ,
ಶೂಲವನೇರುವ ಕಳ್ಳನು ಹಾಲು ತುಪ್ಪವ ಕುಡಿದು
ಮೇಲೇಸುಕಾಲ ಬದುಕುವನೊ?
ಕೆಡುವೊಡಲ ನಚ್ಚಿ, ಕಡುಹುಸಿಯನೆ ಹುಸಿದು, ಒಡಲ ಹೊರೆವರ
ಕೂಡಲಸಂಗಮದೇವಯ್ಯನೊಲ್ಲ, ಕಾಣಿರಣ್ಣಾ. ॥ ೧೩೦ ॥

೧೩೧

ಅರತವಡಗದು, ಕ್ರೋಧ ತೊಲಗದು.
ಕ್ರೂರ ಕುಭಾಷೆ, ಕುಹಕ ಬಿಡದನ್ನಕ್ಕ
ನೀನೆತ್ತಲು ಶಿವನೆತ್ತಲು ಹೋಗುತ್ತ ಮರುಳೆ.
ಭವರೋಗವೆಂಬ ತಿಮಿರ ತಿಳಿಯದನ್ನಕ್ಕ ॥ ೧೩೧ ॥
ಕೂಡಲಸಂಗಯ್ಯನೆತ್ತ, ನೀನೆತ್ತ ಮರುಳೆ.

೧೩೨

ಹಾವು ತಿಂದವರ ನುಡಿಸಬಹುದು,
ಗರ ಹೊಡೆದವರ ನುಡಿಸಬಹುದು,
ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯಾ.
ಬಡತನವೆಂಬ ಮಂತ್ರವಾದಿ ಹೊಗಲು
ಒಡನೆ ನುಡಿವರಯ್ಯಾ, ಕೂಡಲಸಂಗಮದೇವಾ. ॥ ೧೩೨ ॥

೧೩೩

ಅರೆಭಕ್ತರಾದವರ ನೆರೆ ಬೇಡ, ಹೊರೆ ಬೇಡ,
ದಾರಿ ಸಂಗಡ ಬೇಡ, ದೂರ ನುಡಿಯಲು ಬೇಡ.
ಕೂಡಲಸಂಗನ ಶರಣರಲ್ಲಿ
ಅಚ್ಚಲಿಂಗೈಕ್ಯಂಗೆ ತೊತ್ತಾಗಿಹುದಯ್ಯಾ. ॥ ೧೩೩ ॥

೧೩೪

ಸಾರ ಸಜ್ಜನರ ಸಂಗ ಲೇಸು ಕಂಡಯ್ಯಾ,
ದೂರ ದುರ್ಜನರ ಸಂಗವದು ಭಂಗವಯ್ಯಾ.
ಸಂಗವೆರಡುಂಟು: ಒಂದ ಹಿಡಿ, ಒಂದ ಬಿಡು,
ಮಂಗಳಮೂರ್ತಿ ನಮ್ಮ ಕೂಡಲಸಂಗನ ಶರಣರ. ॥ ೧೩೪ ॥

೧೩೫

ಹೊಲೆಯ ಹೊಲಬಿಗನಾದಡೆ,
ಅವನ ಹೊರೆಯಲಿಪ್ಪುದು ಲೇಸು ಕಂಡಯ್ಯಾ.
ಹೊಲಬುಗೆಡದೆ ಲಿಂಗ ಶರಣೆನ್ನಿರಯ್ಯಾ,
ಹೊಲಬುಗೆಡಬೇಡ, ಶಿವ ಶರಣೆನ್ನಿರಯ್ಯಾ.
ನಮ್ಮ ಕೂಡಲಸಂಗನ ಮಹಾಮನೆಯಲು
ಮಾದಾರ ಚೆನ್ನಯ್ಯ ಹೊಲಬಿಗನಯ್ಯಾ. ॥ ೧೩೫ ॥

೧೩೬

ದೂಪಕನವನೊಬ್ಬ ದೇಶವ ಕೊಟ್ಟಡೆ,
ಆಸೆಮಾಡಿ ಅವನ ಹೊರೆಯಲಿರಬೇಡ.
ಮಾದಾರ ಶಿವಭಕ್ತನಾದಡೆ,
ಆತನ ಹೊರೆಯಲು ಭೃತ್ಯನಾಗಿಪ್ಪುದು ಕರ ಲೇಸಯ್ಯಾ,
ತೊತ್ತಾಗಿಪ್ಪುದು ಕರ ಲೇಸಯ್ಯಾ.
ಕಾಡ ಸೊಪ್ಪು ತಂದು ಓಡಿನಲ್ಲಿ ಹುರಿದಿಟ್ಟು,
ಕೂಡಿಕೊಂಡಿಪ್ಪುದು ನಮ್ಮ ಕೂಡಲಸಂಗನ ಶರಣರ. ॥ ೧೩೬ ॥

೧೩೭

ಪರುಷ ಮುಟ್ಟಿದ ಬಳಿಕ ಕಬ್ಬುನವಾಗದು ನೋಡಾ,
ಲಿಂಗ ಮುಟ್ಟಿದ ಬಳಿಕ ಕುಚಿತ್ತಾಚಾರವಾಗದು ನೋಡಾ,
ಕೂಡಲಸಂಗನ ಶರಣರು ಅನ್ಯವನರಿಯರಾಗಿ. ॥ ೧೩೭ ॥

೧೩೮

ಪಟ್ಟವ ಕಟ್ಟಿದ ಬಳಿಕ ಲಕ್ಷಣವನರಸುವರೆ?
ಲಿಂಗದೇವನ ಪೂಜಿಸಿ ಕುಲವನರಸುವರೆ, ಅಯ್ಯಾ?
ಕೂಡಲಸಂಗಮದೇವ
ಭಕ್ತಕಾಯ ಮಮಕಾಯವೆಂದನಾಗಿ. ॥ ೧೩೮ ॥

೧೩೯

ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ?
ಈ ಲೋಕದೊಳಗೆ ಮತ್ತೆ ಅನಂತಲೋಕ?
ಶಿವಲೋಕ, ಶಿವಾಚಾರವಯ್ಯಾ.
ಶಿವಭಕ್ತನಿದ್ದ ಠಾವೆ ದೇವಲೋಕ,
ಭಕ್ತನಂಗಳವೆ ವಾರಣಾಸಿ, ಕಾಯವೆ ಕೈಲಾಸ,
ಇದು ಸತ್ಯ, ಕೂಡಲಸಂಗಮದೇವಾ. ॥ ೧೩೯ ॥

೧೪೦

ಕಟ್ಟಿದಿರಿನಲ್ಲಿ ಶಿವಭಕ್ತನ ಕಂಡು
ದೃಷ್ಟಿವಾರಿ ಶರಣೆಂದಡೆ,
ಹುಟ್ಟೇಳು ಜನ್ಮದ ಪಾಪ ಬಿಟ್ಟು ಹಿಂಗೂದು ನೋಡಾ.
ಮುಟ್ಟಿ ಚರಣಕ್ಕೆರಗಿದಡೆ ತನು[ವ]ಪ್ಪಿದಂತೆ,
ಅಹುದು ಪರುಷ ಮುಟ್ಟಿದಂತೆ.
ಕರ್ತೃ ಕೂಡಲಸಂಗನ ಶರಣರ ಸಂಗವು
ಮತ್ತೆ ಭವಮಾಲೆಗೆ ಹೊದ್ದಲೀಯದು ನೋಡಾ. ॥ ೧೪೦ ॥

೧೪೧

ಆರಾರ ಸಂಗವೇನೇನ ಮಾಡದಯ್ಯಾ?
ಕೀಡೆ ಕೊಂಡಲಿಗನಾಗದೆ ಅಯ್ಯಾ?
ಚಂದನದ ಸನ್ನಿಧಿಯಲ್ಲಿ ಪರಿಮಳ ತಾಗಿ
ಬೇವು, ಬೊಬ್ಬುಲಿ, ತರಿಯ ಗಂಧಂಗಳಾಗವೆ?
ನಮ್ಮ ಕೂಡಲಸಂಗನ ಶರಣರ ಸನ್ನಿಧಿಯಿಂದ
ಕರ್ಮ ನಿರ್ಮಳವಾಗದಿಹುವೆ?

೧೪೨

ಎಂತಹವನಾದಡೇನು, ಲಿಂಗವ ಮುಟ್ಟಿದವನೆ ಕುಲಜಾತಿ.
ಕುಲವಹುದು ತಪ್ಪದು ಲಿಂಗ ಮುಟ್ಟಲೊಡನೆ,
ಹೊನ್ನಹುದು ತಪ್ಪದು ಪರುಷ ಮುಟ್ಟಲೊಡನೆ.
ಕೂಡಲಸಂಗಮದೇವನೊಲ್ಲ ಸರ್ವಸಂದೇಹಿಗಳ. ॥ ೧೪೨ ॥

೧೪೩

ಓದಿದಡೇನು, ಕೇಳಿದಡೇನು, ಶಿವಪಥವನರಿಯದನ್ನಕ್ಕ?
ಓದಿತ್ತು ಕಾಣಿರೋ ಶುಕನು, ಶಿವಜ್ಞಾನವನರಿಯದನ್ನಕ್ಕ.
ಓದಿದ ಫಲವು ಮಾದಾರ ಚೆನ್ನಯ್ಯಂಗಾಯಿತ್ತು
ಕೂಡಲಸಂಗಮದೇವಾ. ॥ ೧೪೩ ॥

೧೪೪

ಹಾವಿನ ಡೊಂಕು ಹುತ್ತಕ್ಕೆ ಸಸಿನ,
ನದಿಯ ಡೊಂಕು ಸಮುದ್ರಕ್ಕೆ ಸಸಿನ,
ನಮ್ಮ ಕೂಡಲಸಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ. ॥ ೧೪೪ ॥

೧೪೫

ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದು,
ಭಕ್ತದೇಹಿಕ ದೇವ ಅನಿಮಿಷನಾಗಿ!
ಕೂಡಲಸಂಗಮದೇವ
ಭಕ್ತನ ನುಡಿಯ ನಡುವೆ ರಾಶಿಯಾಗಿಪ್ಪನು. ॥ ೧೪೫ ॥

೧೪೬

ಭಕ್ತಿ ಎಂತಹದಯ್ಯಾ?
ದಾಸಯ್ಯ ಮಾಡಿದಂತಹದಯ್ಯಾ.
ಭಕ್ತಿ ಎಂತಹದಯ್ಯಾ?
ಸಿರಿಯಾಳ ಮಾಡಿದಂತಹದಯ್ಯಾ.
ಭಕ್ತಿ ಎಂತಹದಯ್ಯಾ?
ನಮ್ಮ ಬಲ್ಲಾಳ ಮಾಡಿದಂತಹದಯ್ಯಾ
ಭಕ್ತಿ ಎಂತಹದಯ್ಯಾ?
ಕೂಡಲಸಂಗಮದೇವಾ, ನೀ ಬಾಣನ ಬಾಗಿಲ ಕಾದಂತಹದಯ್ಯಾ. ॥ ೧೪೬ ॥

೧೪೭

ಮುನ್ನಿನವರು ಹೋದ ದಾರಿ ಭಯ ಕಾಣಿರಣ್ಣಾ,
ಬಲ್ಲಾಳನ ವಧುವಿನೊಡನೆ ಸರಸವನಾಡಿದಂದಿಂದ ಭಯ ಕಾಣಿರಣ್ಣಾ.
ಸಿರಿಯಾಳನ ಮಗನ ಬೇಡಿದಂದಿಂದ ಭಯ ಕಾಣಿರಣ್ಣಾ,
ದಾಸನ ವಸ್ತ್ರವ ಸೀಳಿದಂದಿಂದ ಭಯ ಕಾಣಿರಣ್ಣಾ.
ಅಘಟಿತಘಟಿತರು, ವಿಪರೀತಚರಿತ್ರರು–
ಕೂಡಲಸಂಗನ ಶರಣರು ನಡೆದ ದಾರಿ ಭಯ ಕಾಣಿರಣ್ಣಾ. ॥ ೧೪೭

೧೪೮

ದೇವನೊಳ್ಳಿದನೆಂದು ಮುಯ್ಯಾನಲು ಬೇಡ,
ತರಕಟಗಾಡಿದನೊಳ್ಳಿದನೆ?
ಅಳಿಸುವ ನಗಿಸುವನೊಳ್ಳಿದನೆ?
ಬೆಚ್ಚದೆ ಬೆದರದೆ ತೊತ್ತುತನವ ಮಾಡಲು,
ತನ್ನನೀವ ಕೂಡಲಸಂಗಮದೇವ. ॥ ೧೪೮

೧೪೯

ನೆರೆ ನಂಬೋ ನೆರೆ ನಂಬೋ ಧರಧುರವಿಲ್ಲದೆ ಸಾಮವೇದಿಗಳಂತೆ.
ನೆರೆ ನಂಬೋ ನೆರೆನಂಬೋ ದಾಸ–ದುಗ್ಗಳೆಯಂತೆ,
ನೆರೆ ನಂಬೋ ನೆರೆ ನಂಬೋ ಸಿರಿಯಾಳ–ಚಂಗಳೆಯಂತೆ,
ನೆರೆ ನಂಬೋ ನೆರೆ ನಂಬೋ ಸಿಂಧು–ಬಲ್ಲಾಳನಂತೆ,
ನೆರೆ ನಂಬಿದೆಯಾದಡೆ ತನ್ನನೀವ ಕೂಡಲಸಂಗಮದೇವ. ॥ ೧೪೯

೧೫೦

ಬಲ್ಲಿದರೊಡನೆ ಬವರವಾದಡೆ ಗೆಲಲುಂಟು, ಸೋಲಲುಂಟು,
ಕ[ಳ]ನೊಳಗೆ ಭಾಷೆ ಪೂರಾಯವಯ್ಯಾ.
ನಮ್ಮ ಕೂಡಲಸಂಗನ ಶರಣರಿಗೆ ಮಾಡಿ ಮಾಡಿ
ಧನ ಸವೆದು ಬಡವನಾದಡೆ
ಆ ಭಕ್ತನು ಆ ಲಿಂಗಕ್ಕೆ ಪೂಜೆಯಹನು. ॥ ೧೫೦

೧೫೧

ಗಿರಿಗಳ ಮೇಲೆ ಹಲವು ತರುಮರಾದಿಗಳಿದ್ದು
ಶ್ರೀಗಂಧದ ಸನ್ನಿಧಿಯಲು ಪರಿಮಳವಾಗವೆ?

ಲಿಂಗವಂತನ ಸನ್ನಿಧಿಯಿಂದ ಹಿಂದಣ ದುಸ್ಸಂಗವು ಕೆಡುವುದು.
ಕೂಡಲಸಂಗಮದೇವಯ್ಯಾ,
ಸಿರಿಯಾಳನ ಸಾರಿರ್ದ ನರರೆಲ್ಲಾ ಸುರರಾಗರೆ? ॥ ೧೫೧ ॥

೧೫೨

ಪರುಷದ ಹೊರೆಯಲ್ಲಿ ಕಬ್ಬುನವಿದ್ದು ಹೊನ್ನಾಯಿತ್ತು, ನೋಡಿರೆ!
ಅಪ್ಪಾ ಚಂಗಳೆ, ನೀನಿದ್ದೇಳು ಕೇರಿಯವರು
ಲಿಂಗದ ನೋಂಪಿಯ ನೋಂತರೆ, ಹೇಳಾ?
ಕೂಡಲಸಂಗಮದೇವಂಗೆ
ಚೇಲಾಳನೆಂಬ ಬಾಯಿನವನಿಕ್ಕಿದರೆ ಹೇಳಾ? ॥ ೧೫೨ ॥

೧೫೩

ಗೀತವ ಬಲ್ಲಾತ ಜಾಣನಲ್ಲ, ಮಾತ ಬಲ್ಲಾತ ಜಾಣನಲ್ಲ.
ಜಾಣನು ಜಾಣನು, ಆತ ಜಾಣನು:
ಲಿಂಗವ ನೆರೆ ನಂಬಿದಾತ ಜಾಣನು,
ಜಂಗಮಕ್ಕೆ ಸವೆಸುವಾತ ಆತ ಜಾಣನು,
ಜವನ ಬಾಯಲು ಬಾಲವ ಕೊಯ್ದುಹೋದಾತ ಆತ ಜಾಣನು,
ನಮ್ಮ ಕೂಡಲಸಂಗನ ಶರಣರನು. ॥ ೧೫೩ ॥

೧೫೪

ಲೇಸೆನಿಸಿಕೊಂಡು ಅಯ್ದು ದಿವಸ ಬದುಕಿದಡೇನು?
ಲೇಸೆನಿಸಿಕೊಂಡು ನಾಲ್ಕು ದಿವಸ ಬದುಕಿದಡೇನು?
ಲೇಸೆನಿಸಿಕೊಂಡು ಮೂರು ದಿವಸ ಬದುಕಿದಡೇನು?
ಲೇಸೆನಿಸಿಕೊಂಡು ಎರಡು ದಿವಸ ಬದುಕಿದಡೇನು?
ಜೀವಿತಂ ಶಿವಭಕ್ತಾನಾಂ ವರಂ ಪಂಚ ದಿನಾನಿ ಚ।
ಅಜಕಲ್ಪಸಹಸ್ರೇಭ್ಯೋ ಭಕ್ತಿಹೀನಸ್ಯ ಶಾಂಕರಿ॥
ಎಂದುದಾಗಿ ಕೂಡಲಸಂಗನ ಶರಣರ ವಚನದಲ್ಲಿ
ಲೇಸೆನಿಸಿಕೊಂಡು ಒಂದು ದಿವಸ ಬದುಕಿದಡೇನೊ! ॥ ೧೫೪ ॥

೧೫೫

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ,
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ.

ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು
ಕೂಡಲಸಂಗಮದೇವಾ. || ೧೫೫ ||

೧೫೬

ಶಿವಚಿಂತೆ ಶಿವಜ್ಞಾನವಿಲ್ಲದ ಮನುಜರು–
ಸಗಣಕ್ಕೆ ಸಾಸಿರ ಹುಳು, ಹುಟ್ಟವೆ ದೇವಾ?
ಕಾಡ ಮೃಗವೊಂದಾಗಿರಲಾಗದೆ, ದೇವಾ?
ಊರ ಮೃಗವೊಂದಾಗಿರಲಾಗದೆ, ಹರನೆ?
ನಮ್ಮ ಕೂಡಲಸಂಗನ ಶರಣರಿಲ್ಲದ ಊರು, ದೇಶ
ವನವಾಸ, ನರವಿಂಧ್ಯ ಕಾಣಿರಣ್ಣಾ. || ೧೫೬ ||

೧೫೭

ಹೊತ್ತಾರೆ ಎದ್ದು ಶಿವಲಿಂಗದೇವನ
ದೃಷ್ಟಿವಾರಿ ನೋಡದವನ ಸಂಸಾರವೇನವನ?
ಬಾಳುವೆಣನ ಬೀಳುವೆಣನ ಸಂಸಾರವೇನವನ?
ನಡೆವೆಣನ ನುಡಿವೆಣನ ಸಂಸಾರವೇನವನ?
ಕರ್ತು ಕೂಡಲಸಂಗಾ
ನಿಮ್ಮ ತೊತ್ತುಗೆಲಸ ಮಾಡದವನ ಸಂಸಾರವೇನವನ? || ೧೫೭ ||

೧೫೮

ವ್ಯಾಧನೊಂದು ಮೊಲನ ತಂದಡೆ ಸಲುವ ಹಾಗಕ್ಕೆ ಬಿಲಿವರಯ್ಯಾ,
ನೆಲನಾಳ್ವನ ಹೆಣನೆಂದಡೆ ಒಂದಡಕೆಗೆ ಕೊಂಬವರಿಲ್ಲ ನೋಡಯ್ಯಾ.
ಮೊಲನಿಂದ ಕರಕಷ್ಟ ನರನ ಬಾಳುವೆ,
ಸಲೆ ನಂಬೊ ನಮ್ಮ ಕೂಡಲಸಂಗಮದೇವನ. || ೧೫೮ ||

೧೫೯

ಉತುಪತಿ ಶುಕ್ಲ–ಶೋಣಿತದಿಂದಾದ ಲಜ್ಜೆ ಸಾಲದೆ?
ಮತ್ತೆ ದುರಿತಂಗಳ ಹೆರುವ ಹೇಗತನವೇಕಯ್ಯಾ?
ಮೃತ್ಯುವಿನ ಬಾಯಿಗೆ ಒಳಗಾಗಲೇಕೆ?
ಒತ್ತೊತ್ತೆಯ ಜನನವ ಗೆಲುವಡೆ ಕರ್ತನ ಪೂಜಿಸು
ನಮ್ಮ ಕೂಡಲಸಂಗಮದೇವನ. || ೧೫೯ ||

೧೬೦

ಮನವೆ ಸರ್ಪ, ತನು ಹೇಳಿಗೆ:
ಹಾವಿನೊಡತಣ ಹುದುವಾಳಿಗೆ!
ಇನ್ನಾವಾಗ ಕೊಂದಹುದೆಂದರಿಯೆ,
ಇನ್ನಾವಾಗ ತಿಂದಹುದೆಂದರಿಯೆ.
ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲಡೆ
ಅದೆ ಗಾರುಡ, ಕೂಡಲಸಂಗಮದೇವಾ. ॥ ೧೬೦ ॥

೧೬೧

ನರೆ ಕೆನ್ನೆಗೆ, ತೆರೆ ಗಲ್ಲಕೆ, ಶರೀರ ಗೂಡುವೋಗದ ಮುನ್ನ,
ಹಲ್ಲು ಹೋಗಿ, ಬೆನ್ನು ಬಾಗಿ, ಅನ್ಯರಿಗೆ ಹಂಗಾಗದ ಮುನ್ನ,
ಕಾಲಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ,
ಮುಪ್ಪಿಂದೊಪ್ಪವಳಿಯದ ಮುನ್ನ,
ಮೃತ್ಯು ಮುಟ್ಟದ ಮುನ್ನ
ಪೂಜಿಸು ಕೂಡಲಸಂಗಮದೇವನ. ॥ ೧೬೧ ॥

೧೬೨

ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟುಕೊಟ್ಟು
ರಕ್ಷಿತವ ಮಾಡುವ ಭರವ ನೋಡಾ.
ಮಹಾದಾನಿ ಕೂಡಲಸಂಗಯ್ಯನ ಪೂಜಿಸಿ
ಬದುಕೋ ಕಾಯ ನಿಶ್ಚೈಸದೆ. ॥ ೧೬೨ ॥

೧೬೩

ಹಂಜರ ಬಲ್ಲಿತ್ತೆಂದು ಅಂಜದೆ ಓದುವ ಗಿಳಿಯೆ,
ಎಂದೆಂದೂ ಅಳಿಯೆನೆಂದು
ಗುಡಿಗಟ್ಟಿದೆಯಲ್ಲಾ, ನಿನ್ನ ಮನದಲ್ಲಿ.
ಮಾಯಾಮಂಜರ ಕೊಲುವಡೆ ನಿನ್ನ ಹಂಜರ ಕಾವುವೆ
ಕೂಡಲಸಂಗಮದೇವನಲ್ಲದೆ? ॥ ೧೬೩ ॥

೧೬೪

ಸಂಸಾರವೆಂಬುದೊಂದು ಗಾಳಿಯ ಸೊಡರು,
ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯಾ.

ಇದ ನಚ್ಚಿ ಕೆಡಬೇಡ.
ಸಿರಿಯೆಂಬುದ ಮರೆದು, ಪೂಜಿಸು ನಮ್ಮ ಕೂಡಲಸಂಗಮದೇವನ. ॥ ೧೬೪ ॥

೧೬೫

ಎಲೆ ಎಲೆ ಮಾನವಾ, ಅಳಿಯಾಸೆ ಬೇಡವ್ರೋ,
ಕಾಳ, ಬೆಳುದಿಂಗಳು, ಸಿರಿ ಸ್ಥಿರವಲ್ಲ.
ಕೇಡಿಲ್ಲದ ಪದವಿ
ಕೂಡಲಸಂಗಮದೇವಯ್ಯನ ಮರೆಯದೆ ಪೂಜಿಸು. ॥ ೧೬೫ ॥

೧೬೬

ಎಂತಕ್ಕೆ ಎಂತಕ್ಕೆ
ಪಡೆದ ಕಾಯ ಬೀಯವಾಗದ ಮುನ್ನ ಅಟ್ಟುಣ್ಣು ಓ!
ಬೆರಣೆಯುಳ್ಳಲ್ಲಿ ಹೊತ್ತು ಹೋಗದ ಮುನ್ನ ಅಟ್ಟುಣ್ಣು ಓ!
ಮರಳಿ ಭವಕ್ಕೆ ಬಾಹೆ, ಬಾರದಿಹೆ,
ಕರ್ತು ಕೂಡಲಸಂಗಂಗೆ ಶರಣೆನ್ನು ಓ! ॥ ೧೬೬ ॥

೧೬೭

ಶಕುನವೆಂದೆಂಬೆ, ಅವಶಕುನವೆಂದೆಂಬೆ.
ನಿಮ್ಮವರು ಆಳಲಿಕೆ ಅಂದೇಕೆ ಬಂದೆ?
ನಿಮ್ಮವರು ಆಳಲಿಕೆ ಇಂದೇಕೆ ಹೋದೆ?
ನೀ ಹೋಹಾಗಳಕ್ಕೆ! ಬಾಹಾಗಳಕ್ಕೆ!
ಅಕ್ಕೆ ಬಾರದ ಮುನ್ನ ಪೂಜಿಸು
ಕೂಡಲಸಂಗಮದೇವನ. ॥ ೧೬೭ ॥

೧೬೮

ನಿಮಿಷದ ನಿಮಿಷಂ ಭೋ, ಕ್ಷಣವೊಳಗರ್ಧಂ ಭೋ,
ಕಣ್ಣುಮುಚ್ಚಿ ಬಿಚ್ಚುವಿನಿಸು ಬೇಗಂ ಭೋ,
ಸಂಸಾರದಾಗುಂ ಭೋ, ಸಂಸಾರದ ಹೋಗುಂ ಭೋ,
ಸಂಸಾರಂ ಭೋ:
ಕೂಡಲಸಂಗಮದೇವ ಮಾಡಿದ
ಮಾಯೆಯುಂ ಭೋ, ಅಭ್ರಚ್ಛಾಯೆಯುಂ ಭೋ. ॥ ೧೬೮ ॥

೧೬೯

ಹರನೀವ ಕಾಲಕ್ಕೆ ಸಿರಿಯು ಬೆನ್ನಲಿ ಬರ್ಕು:
ಪರಿದು ಹೆದ್ದೊರೆಯು, ಕೆರೆ ತುಂಬಿದಂತಯ್ಯಾ,
ನೆರೆಯದ ವಸ್ತು ನೆರೆವುದು ನೋಡಯ್ಯಾ,
ಅರಸು ಪರಿವಾರ ಕೈವಾರ ನೋಡಯ್ಯಾ.
ಪರಮ ನಿರಂಜನನ ಮರೆವ ಕಾಲಕ್ಕೆ
ತುಂಬಿದ ಹರವಿಯು ಕಲ್ಲುಕೊಂಡಂತೆ, ಕೂಡಲಸಂಗಮದೇವಾ. ॥ ೧೬೯ ॥

೧೭೦

ಹೊಯ್ದಡೆ ಹೊಯ್ಗಳು ಕೈಯ ಮೇಲೆ,
ಬೈದಡೆ ಬೈಗಳು ಕೈಯ ಮೇಲೆ.
ಹಿಂದಣ ಜನನವೇನಾದಡಾಗಲಿ,
ಇಂದಿನ ಭೋಗವು ಕೈಯ ಮೇಲೆ.
ಕೂಡಲಸಂಗಮದೇವಯ್ಯಾ
ನಿಮ್ಮ ಪೂಜಿಸಿದ ಫಲ ಕೈಯ ಮೇಲೆ. ॥ ೧೭೦ ॥

೧೭೧

ಆದ್ಯರ ವಚನ ಪರುಷ ಕಂಡಣ್ಣಾ:
ಸದಾಶಿವನೆಂಬ ಲಿಂಗ[ವು], ನಂಬೂದು,
ನಂಬಲೊಡನೆ ನೀ ವಿಜಯ ಕಂಡಣ್ಣಾ.
ಅಧರಕ್ಕೆ ಕಹಿ, ಉದರಕ್ಕೆ ಸಿಹಿ
ಕೂಡಲಸಂಗನ ಶರಣರ ವಚನ ಬೇವ ಸವಿದಂತೆ. ॥ ೧೭೧ ॥

೧೭೨

ಹೊತ್ತಾರೆ ಎದ್ದು, ಅಗ್ಘವಣಿ ಪತ್ರೆಯ ತಂದು,
ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ.
ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು?
ಹೊತ್ತು ಹೋಗದ ಮುನ್ನ, ಮೃತ್ಯುವೊಯ್ಯದ ಮುನ್ನ
ತೊತ್ತುಗೆಲಸವ ಮಾಡು ಕೂಡಲಸಂಗಮದೇವನ. ॥ ೧೭೨ ॥

೧೭೩

ಅಚ್ಚಿಗವೇಕಯ್ಯಾ ಸಂಸಾರಸೊಡನೆ?
ನಿಚ್ಚನಿಚ್ಚ ಶಿವರಾತ್ರಿಯ ಮಾಡೂದು,
ಬೇಗ ಬೇಗ ಅರ್ಚನೆ-ಪೂಜನೆಯ ಮಾಡೂದು,
ಕೂಡಲಸಂಗನ ಕೂಡೂದು. ॥ ೧೭೩ ॥

೧೭೪

ಅಂದು ಇಂದು ಮತ್ತೊಂದೆನಬೇಡ,
ದಿನವಿಂದೇ 'ಶಿವ ಶರಣೆಂ'ಬವಂಗೆ,
ದಿನವಿಂದೇ 'ಹರ ಶರಣೆಂ'ಬವಂಗೆ,
ದಿನವಿಂದೇ ನಮ್ಮ ಕೂಡಲಸಂಗನ ಮಾಣದೆ ನೆನೆವಂಗೆ. ॥ ೧೭೪ ॥

೧೭೫

ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡೂದು,
ಮಾಡಿದ ಪೂಜೆಯ ನೋಡೂದಯ್ಯಾ.
ಶಿವತತ್ವಗೀತವ ಪಾಡೂದು,
ಶಿವನ ಮುಂದೆ ನಲಿದಾಡೂದಯ್ಯಾ.
ಭಕ್ತಿಸಂಭಾಷಣೆಯ ಮಾಡೂದು,
ನಮ್ಮ ಕೂಡಲಸಂಗನ ಕೂಡೂದು. ॥ ೧೭೫ ॥

೧೭೬

ಆಳಿಗೊಂಡಹರೆಂದು ಅಂಜಲದೇಕೆ? ನಾಸ್ತಿಕವಾಡಿಹರೆಂದು ನಾಚಲದೇಕೆ?
ಆರಾದಡಾಗಲಿ ಶ್ರೀಮಹಾದೇವರಿಗೆ ಶರಣೆನ್ನಿ.
ಏನೂ ಅರಿಯೆನೆಂದು ಮೋನಗೊಂಡಿರಬೇಡ.
ಕೂಡಲಸಂಗಮದೇವರ ಮುಂದೆ ದಂದಣ ದತ್ತಣಯೆನ್ನಿ. ॥ ೧೭೬ ॥

೧೭೭

ಸುಪ್ರಭಾತ ಸಮಯದಲ್ಲಿ ಅರ್ತಿಯಲ್ಲಿ ಲಿಂಗವ ನೆನೆದಡೆ,
ತಪ್ಪೂದು ಅಪಮೃತ್ಯು, ಕಾಲಕರ್ಮಂಗಳಯ್ಯಾ.
ದೇವಪೂಜೆಯ ಮಾಟ, ದುರಿತಬಂಧನದೋಟ.
ಶಂಭು ನಿಮ್ಮ ನೋಟ, ಹಿಂಗದ ಕಣ್ಬೇಟ.

ಸದಾ ಸನ್ನಿತನಾಗಿ ಶರಣೆಂಬುದು, ನಂಬೂದು.
ಜಂಗಮಾರ್ಚನೆಯು ಮಾಟ, ಕೂಡಲಸಂಗನ ಕೂಟ. || ೧೭೭ ||

೧೭೮

ಅಂಕ ಕೆಳನೇರಿ ಕೈಮರೆದಿರ್ದಡೆ
ಮಾರಂಕ ಬಂದಿರಿವುದ ಮಾಬನೆ?
ನಿಮ್ಮ ನೆನಹ ಮನ ಮರೆದಿರ್ದಡೆ
ಮಾಯೆ ತನುವನಂಡಲೆವುದ ಮಾಬುದೆ?
ಕೂಡಲಸಂಗಯ್ಯನ ನೆನೆದಡೆ,
ಪಾಪ ಉರಿಗೊಡ್ಡಿದರಗಿನಂತೆ ಕರಗೂದಯ್ಯಾ. || ೧೭೮ ||

೧೭೯

ಆಡಿಹರಯ್ಯಾ ಹಾಡಿರಯ್ಯಾ ಮನಬಂದ ಪರಿಯಲಿ,
ಶಿವಶರಣರ ಮುಂದೆ ಆಡಿಹರಯ್ಯಾ ಹಾಡಿಹರಯ್ಯಾ.
ಕೋಡಂಗಿಯಾಟವನಾಡಿದ ಭಕ್ತಂಗೆ ಜೋಡಿಸ್ತನೀವ,
ನಮ್ಮ ಕೂಡಲಸಂಗಮದೇವ. || ೧೭೯ ||

೧೮೦

ಹೊಲಬುಗೊಂಡರಸಬೇಡ, ಬಲಿತು ತರಬೇಡ,
ಒಲಿದೊಮ್ಮೆ ಶಿವಶರಣೆನ್ನಿರಯ್ಯಾ.
ಒಂದು ಸೊಲ್ಲಿಂಗೆ ಮುಕ್ತಿ ಸಿದ್ಧಿ,
ಕೂಡಲಸಂಗಮದೇವ ಭಕ್ತಿಲಂಪಟನಾಗಿ. || ೧೮೦ ||

೧೮೧

ನಾದಪ್ರಿಯ ಶಿವನೆಂಬರು, ನಾದಪ್ರಿಯ ಶಿವನಲ್ಲಯ್ಯಾ.
ವೇದಪ್ರಿಯ ಶಿವನೆಂಬರು, ವೇದಪ್ರಿಯ ಶಿವನಲ್ಲಯ್ಯಾ.
ನಾದವ ನುಡಿಸಿದ ರಾವಣಂಗೆ ಅರೆ ಆಯುಷ್ಯವಾಯಿತ್ತು.
ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು.
ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ
ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ. || ೧೮೧ ||

೧೮೨

ಹಸಿವಾದಡುಂಬುದನು, ಸತಿಯ ಸಂಭೋಗವನು
ಆನಾಗಿ ನೀ ಮಾಡೆಂಬವರುಂಟೆ?
ಮಾಡೂದು, ಮಾಡೂದು ಮನಮುಟ್ಟಿ,
ಮಾಡೂದು, ಮಾಡೂದು ತನುಮುಟ್ಟಿ,
ತನುಮುಟ್ಟಿ ಮನಮುಟ್ಟದಿರ್ದಡೆ
ಕೂಡಲಸಂಗಮದೇವನೇತರಲ್ಲಿಯೂ ಮೆಚ್ಚ. ॥ ೧೮೨ ॥

೧೮೩

ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?
ತನ್ನ ಲಿಂಗಕ್ಕೆ ಮಾಡುವ ನಿತ್ಯನೇಮವ ತಾ ಮಾಡಬೇಕಲ್ಲದೆ
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?
ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ
ನಿಮ್ಮನೆತ್ತಬಲ್ಲರು, ಕೂಡಲಸಂಗಮದೇವಾ. ॥ ೧೮೩ ॥

೧೮೪

ಬಂಡಿ ತುಂಬ ಪತ್ರೆಯ ತಂದು ಕಂಡ ಕಂಡಲ್ಲಿ ಮಜ್ಜನಕ್ಕೆರೆವಿರಿ.
ತಾಪತ್ರಯವ ಕಳೆದು ಪೂಜಿಸಿ, ತಾಪತ್ರಯವ ಲಿಂಗನೊಲ್ಲ.
ಕೂಡಲಸಂಗಮದೇವ ಬರಿಯುದಕದಲ್ಲಿ ನೆನೆವನೆ? ॥ ೧೮೪ ॥

೧೮೫

ಭಕ್ತನಾಗಿ ಲಿಂಗ ಜಂಗಮವ ಪೂಜಿಸಬೇಕು.
ಭಕ್ತನಾಗಿ ತನ್ನ ತಾ ಪೂಜಿಸಿಕೊಂಬುದು ಎಂತಯ್ಯಾ?
ಸ್ವಾಮಿಭೃತ್ಯಸಂಬಂಧವು ಎಂತಯ್ಯಾ ಪೂರಯಿಸೂದು?
ಕೂಡಲಸಂಗಮದೇವಾ, ಕಣ್ಣುಕಟ್ಟಿ ಕನ್ನಡಿಯ ತೋರುವಂತೆ! ॥ ೧೮೫ ॥

೧೮೬

ಭೂಮಿಯೊಳಗೆ ನಿಧಾನವಿದ್ದುದ
ಅಂಜನವುಳ್ಳವರು ತೋರಿರಯ್ಯಾ.
ಅಂಜನಬೇಡ ಕಂಡಾ, ಮನದಲ್ಲಿ ಸಂದೇಹವ ಮಾಡದಿರಾ.

ಜಂಗಮದೊಳಗೆ ಲಿಂಗಯ್ಯನಿದ್ದಾನೆಂದು ನಂಬುಗೆಯುಳ್ಳಡೆ
ತೋರುವ ಕೂಡಲಸಂಗಯ್ಯ. ॥ ೧೮೬ ॥

೧೮೭

ಕನ್ನಡಿಯ ನೋಡುವ ಅಣ್ಣಗಳಿರಾ, ಜಂಗಮುವ ನೋಡಿರೆ,
ಜಂಗಮದೊಳಗೆ ಲಿಂಗಯ್ಯ ಸನ್ನಹಿತನಾಗಿಪ್ಪ.
'ಸ್ಥಾವರ ಜಂಗಮ ಒಂದೆ' ಎಂದುದು ಕೂಡಲಸಂಗನ ವಚನ. ॥ ೧೮೭ ॥

೧೮೮

ಗೀತವ ಹಾಡಿದಡೇನು, ಶಾಸ್ತ್ರ-ಪುರಾಣವ ಕೇಳಿದಡೇನು,
ವೇದವೇದಾಂತವ ನೋಡಿದಡೇನು?
ಮನವೊಲಿದು ಲಿಂಗಜಂಗಮುವ ಪೂಜಿಸಲರಿಯದವರು
ಎಲ್ಲರಲ್ಲಿ [ಪ್ರಾ]ಜ್ಞರಾದಡೇನು?
ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ. ॥ ೧೮೮ ॥

೧೮೯

ಲಿಂಗವ ಪೂಜಿಸಿದ ಬಳಿಕ ಜಂಗಮಕ್ಕೆ ಅಂಜಲೇಬೇಕು,
ದಕ್ಕ ನುಂಗಿದಂತೆ ಬೆರೆತುಕೊಂಡಿರಬೇಡ.
ಜೀಗಿ ಬೆಳೆದ ಕೊನೆವಾಳೆಯಂತೆ ಬಾಗಿಕೊಂಡಿದ್ದಡೆ,
ಬೇಡಿದ ಪದವಿಯನೀವ ಕೂಡಲಸಂಗಮದೇವ. ॥ ೧೮೯ ॥

೧೯೦

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು,
ಮರ್ಮವನರಿಯದ ಮಾಟ ಸಯಿದಾನದ ಕೇಡು.
ಬಂದ ಸಮಯೋಚಿತವನರಿಯದಿದ್ದಡೆ
ನಿಂದಿರಲೊಲ್ಲ ಕೂಡಲಸಂಗಮದೇವ. ॥ ೧೯೦ ॥

೧೯೧

ದ್ವೈತಾದ್ವೈತವನೋದಿ ಏನ ಮಾಡುವಿರಯ್ಯಾ?
ನಮ್ಮ ಶರಣರಿಗುರಿ[ಯ]ರಗಾಗಿ ಕರಗದನ್ನಕ್ಕ,
ಸ್ಥಾವರ ಜಂಗಮವೊಂದೆ ಎಂದು ನಂಬದನ್ನಕ್ಕ.
ಕೂಡಲಸಂಗಮದೇವಾ,
ಬರಿಯ ಮಾತಿನ ಮಾಲೆಯಲೇನಹುದು? ॥ ೧೯೧ ॥

೧೯೨

ಲಾಂಛನ ಹೊರಗೆ ಬಂದಿರಲು, ಒಳಗೆ ಲಿಂಗಾರ್ಚನೆಯೆಂತಯ್ಯಾ?
ಮುಖದಲ್ಲಿ ಕಟ್ಟಿದ ಕನ್ನಡಿ, ಮೂಗಿನ ಮೇಲಣ ಕತ್ತಿ!
ಸಮಯಾಚಾರವೆಂತುಟಯ್ಯಾ? ಕೂಡಲಸಂಗಮದೇವಯ್ಯಾ. || ೧೯೨ ||

೧೯೩

ಆಡುತ್ತ ಹಾಡುತ್ತ ಭಕ್ತಿಯ ಮಾಡಬಹುದು ಲಿಂಗಕ್ಕೆ:
ಅದು ಬೇಡದು, ಬೆಸಗೊಳ್ಳದು,
ತಂದೊಮ್ಮೆ ನೀಡಬಹುದು.
ಕಾಡುವ ಬೇಡುವ ಜಂಗಮ ಬಂದಡೆ,
ನೀಡಲುಬಾರದು ಕೂಡಲಸಂಗಮದೇವಾ. || ೧೯೩ ||

೧೯೪

ಕಲ್ಲ ನಾಗರ ಕಂಡಡೆ ಹಾಲನೆರೆಯೆಂಬರು,
ದಿಟದ ನಾಗರ ಕಂಡಡೆ ಕೊಲ್ಲೆಂಬರಯ್ಯಾ.
ಉಂಬ ಜಂಗಮ ಬಂದಡೆ ನಡೆಯೆಂಬರು,
ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ.
ನಮ್ಮ ಕೂಡಲಸಂಗನ ಶರಣರ ಕಂಡು ಉದಾಸೀನವ ಮಾಡಿದಡೆ,
ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ. || ೧೯೪ ||

೧೯೫

ನಾಗಂಗೆ ಹೊಸತನಿಕ್ಕಿಹೆವೆಂಬರು,
ನಾಗ ಬಂದಡೆ ಕೋಲ ಕಳೆದುಕೊಂಬರು.
ಆಗದಯ್ಯಾ, ಜಂಗಮಲಿಂಗವೆಂಬ ಶುದ್ಧವಾಗದಯ್ಯಾ,
ಕೂಡಲಸಂಗಮದೇವನಲ್ಲಿ ಸಿಂಧುಬಲ್ಲಾಳಂಗಲ್ಲದೆ ಆಗದಯ್ಯಾ. || ೧೯೫ ||

೧೯೬

ಎರೆದಡೆ ನನೆಯದು, ಮರೆದಡೆ ಬಾಡದು,
ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ:
ಕೂಡಲಸಂಗಮದೇವಾ, ಜಂಗಮಕ್ಕೆರೆದಡೆ ಸ್ಥಾವರ ನನೆಯಿತ್ತು. || ೧೯೬ ||

೧೯೭

ಅಗ್ನಿಯಾಧಾರದಲ್ಲಿ ಕಬ್ಬುನ ನೀರುಂಬುದಯ್ಯಾ,
ಭೂಮಿಯಾಧಾರದಲ್ಲಿ ವೃಕ್ಷ ನೀರುಂಬುದಯ್ಯಾ,
ಜಂಗಮವಾಪ್ಯಾಯನವಾದಡೆ ಲಿಂಗ ಸಂತುಷ್ಟಿಯಹುದಯ್ಯಾ.
ವೃಕ್ಷಸ್ಯ ವದನಂ ಭೂಮಿಃ ಸ್ಥಾವರಸ್ಯ ಚ ಜಂಗಮಃ||
ಅಹಂ ತುಷ್ಟೋಽಸ್ಮ್ಯುಮಾದೇವಿ ಉಭಯೋರ್ಲಿಂಗಜಂಗಮಾತ್||
ಇದು ಕಾರಣ ಕೂಡಲಸಂಗಮದೇವರಲ್ಲಿ
ಜಂಗಮವಾಪ್ಯಾಯನವಾದಡೆ ಲಿಂಗಸಂತುಷ್ಟಿ. || ೧೯೭ ||

೧೯೮

ಭಂಡವ ತುಂಬಿದ ಬಳಿಕ ಸುಂಕವ ತೆತ್ತಲ್ಲದೆ ಹೋಗಬಾರದು.
ಕಳ್ಳನಾಣ್ಯ ಸಲುಗೆಗೆ ಸಲ್ಲದು,
ಕಳ್ಳನಾಣ್ಯವ ಸಲಲೀಯರಯ್ಯಾ.
ಭಕ್ತಿಯೆಂಬ ಭಂಡಕ್ಕೆ ಜಂಗಮವೆ ಸುಂಕಿಗ
ಕೂಡಲಸಂಗಮದೇವಾ. || ೧೯೮ ||

೧೯೯

ಮಾಡಿ ನೀಡಿ ಲಿಂಗವ ಪೂಜಿಸಿಹೆವೆಂಬವರು ನೀವೆಲ್ಲಾ ಕೇಳಿರಣ್ಣಾ:
ಹಾಗದ ಕೆರಹ ಹೊರಗೆ ಕಳೆದು,
ದೇಗುಲಕ್ಕೆ ಹೋಗಿ ನಮಸ್ಕಾರವ ಮಾಡುವನಂತೆ
ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲ.
ಧನವನಿರಿಸದಿರಾ, ಇರಿಸಿದಡೆ ಭವ ಬಪ್ಪುದು ತಪ್ಪದು.
ಕೂಡಲಸಂಗನ ಶರಣರಿಗೆ ಸವೆಸಲೇಬೇಕು. || ೧೯೯ ||

೨೦೦

ಉಂಡುದು ಬಂದಿತ್ತೆಂಬ ಸಂದೇಹಿ ಮಾನವ ನೀ ಕೇಳಾ:
ಉಂಡುದೇನಾಯಿತ್ತೆಂಬುದ ನಿನ್ನ ನೀ ತಿಳಿದು ನೋಡಾ
ಉಂಡುದು ಆಗಳೆ ಅಪೇಯವಾಯಿತ್ತು.
ಆ ಉಂಡುದನುಣಬಂದ ಹಂದಿಯ ಬಾಳುವೆಯುವರ ಕಂಡು
ಆನು ಮರುಗುವೆನಯ್ಯಾ, ಕೂಡಲಸಂಗಮದೇವಯ್ಯಾ. || ೨೦೦ ||

೨೦೧

ಆಯುಷ್ಯವುಂಟು ಪ್ರಳಯವಿಲ್ಲೆಂದು ಅರ್ಥವ ಮಡುಗುವಿರಿ:
ಆಯುಷ್ಯ ತೀರಿ ಪ್ರಳಯ ಬಂದಡೆ ಆ ಅರ್ಥವನುಂಬುವರಿಲ್ಲ.
ನೆಲನನಗೆದು ಮಡುಗದಿರಾ, ನೆಲ ನುಂಗಿದಡುಗುಳೂದೆ?
ಕಣ್ಣನಲ್ಲಿ ನೋಡಿ, ಮಣ್ಣನಲ್ಲಿ ನೆರಹಿ, ಉಣ್ಣದೆ ಹೋಗದಿರಾ!
ನಿನ್ನ ಮಡದಿಗಿರಲೆಂದಡೆ, ಆ ಮಡದಿಯ ಕೃತಕ ಬೇರೆ:
ನಿನ್ನ ಒಡಲು ಕಡೆಯಲು ಮತ್ತೊಬ್ಬನಲ್ಲಿಗೆ ಅಡಕದೆ ಮಾಬಳೆ?
ಹೆರರಿಗಿಕ್ಕಿ ಹೆಗ್ಗುರಿಯಾಗಿ ಕೆಡಬೇಡ,
ಕೂಡಲಸಂಗನ ಶರಣರಿಗೆ ಒಡನೆ ಸವೆಸೂದು. || ೨೦೧ ||

೨೦೨

ತನು ಮನ ಧನವ ಹಿಂದಿಕ್ಕಿಕೊಂಡು
ಮಾತಿನ ಬಣಬೆಯ ಮುಂದಿಟ್ಟುಕೊಂಡು
ಒಳಲೊಟೆಯ ನುಡಿವವರು ನೀವೆಲ್ಲರೂ ಕೇಳಿರೆ.
ತಲಹಿಲ್ಲದ ಕೋಲು ಹೊಳ್ಳು ಹಾರುಹುದಲ್ಲದೆ
ಗುರಿಯ ತಾಗಬಲ್ಲುದೆ?
ಮಾಯಾಪಾಶ ಹಿಂಗಿ, ಮನದ ಗಂಟು ಬಿಡದನ್ನಕ್ಕ
ಕೂಡಲಸಂಗಮದೇವನೆಂತೊಲಿವನಯ್ಯಾ? || ೨೦೨ ||

೨೦೩

ತನು–ಮನ–ಧನವೆಂಬ ಮೂರು ಕತ್ತಿಯಿವೆ, ಸಲೆ ಮೂಗಿನ ಮೇಲೆ ಅಯ್ಯಾ,
ಲಿಂಗ ಜಂಗಮಕ್ಕೆ ಮಾಡಿಹೆನೆಂಬವಂಗೆ!
ಇದು ಕಾರಣ, ಕೂಡಲಸಂಗನ ಶರಣರಿಗೆ ಅಂಜಲೇಬೇಕು. || ೨೦೩ ||

೨೦೪

ಸರ್ವಭೂತಾತ್ಮನೆಂಬ ಮಾತಿನ ಮಾತಿನಲ್ಲಿ ಹೋಗದು,
ತನುಮನಧನವ ಸವೆಸಲೇಬೇಕು.
ನಮ್ಮ ಕೂಡಲಸಂಗನ ಶರಣರಿಗೆ ಅಂಜಲೇಬೇಕು. || ೨೦೪ ||

೨೦೫

ಹಲವು ಮಣಿಯು ಕಟ್ಟಿ ಕುಣಿಕುಣಿದಾಡಿ,
ಹಲವು ಪರಿಯಲಿ ವಿಭೂತಿಯು ಹೂಸಿ,
ಗಣಾಡಂಬರದ ನಡುವೆ ನಲಿನಲಿದಾಡಿ,
ಉಂಡು, ತಂಬುಲಗೊಂಡು ಹೋಹುದಲ್ಲ.
ತನು ಮನ ಧನವ ಸಮರ್ಪಿಸದವರ
ಕೂಡಲಸಂಗಮದೇವರೆಂತೊಲಿವ? || ೨೦೫ ||

೨೦೬

ತನುವ ಕೊಟ್ಟು ಗುರುವನೊಲಿಸಬೇಕು,
ಮನವ ಕೊಟ್ಟು ಲಿಂಗವನೊಲಿಸಬೇಕು,
ಧನವ ಕೊಟ್ಟು ಜಂಗಮವನೊಲಿಸಬೇಕು.
ಈ ತ್ರಿವಿಧವ ಹೊರಗು ಮಾಡಿ,
ಹರೆಯ ಹೊಯಿಸಿ, ಕುರುಹ ಪೂಜಿಸುವ ಗೊರವರ ಮೆಚ್ಚ
ಕೂಡಲಸಂಗಮದೇವ. | ೨೦೬ ||

೨೦೭

ಆಡಿದಡೇನು, ಹಾಡಿದಡೇನು, ಓದಿದಡೇನು ತ್ರಿವಿಧದಾಸೋಹವಿಲ್ಲದನ್ನಕ್ಕ?
ಆಡದೆ ನವಿಲು? ಹಾಡದೆ ತಂತಿ? ಓದದೆ ಗಿಳಿ?
ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ. || ೨೦೭ ||

೨೦೮

ಶಾಸ್ತ್ರ ಘನವೆಂಬೆನೆ? ಕರ್ಮವ ಭಜಿಸುತ್ತಿದೆ.
ವೇದ ಘನವೆಂಬೆನೆ? ಪ್ರಾಣವಧೆಯ ಹೇಳುತ್ತಿದೆ.
ಶ್ರುತಿ ಘನವೆಂಬೆನೆ? ಮುಂದಿಟ್ಟು ಅರಸುತ್ತಿದೆ.
ಅಲ್ಲೆಲ್ಲಿಯೂ ನೀವಿಲ್ಲದ ಕಾರಣ,
ತ್ರಿವಿಧದಾಸೋಹದಲಲ್ಲದೆ ಕಾಣಬಾರದು ಕೂಡಲಸಂಗಮದೇವನ. || ೨೦೮ ||

೨೦೯

ವೇದದಂತುಟಲ್ಲ, ಶಾಸ್ತ್ರದಂತುಟಲ್ಲ. ಗೀತಮಾತಿನಂತುಟಲ್ಲ ಕೇಳಯ್ಯಾ.
ಮಾತಿನ ಮಾತಿನ ಕವುಳುಗೋಲ ಶ್ರವದಲ್ಲಿ

ಸತ್ತವರೊಳರೆ ಅಯ್ಯಾ?
ದಿಟದಲಗಿನ ಕಾಳೆಗವಿತ್ತಲಿದ್ದುದೆ? ಕೂಡಲಸಂಗನ ಶರಣರು ಬಂದಲ್ಲಿ. ॥ ೨೦೯ ॥

೨೧೦

ಮಾತಿನ ಮಾತಿನಲಪ್ಪುದೆ ಭಕ್ತಿ?
ಮಾಡಿ ತನು ಸವೆಯದನ್ನಕ್ಕ, ಮನ ಸವೆಯದನ್ನಕ್ಕ,
ಧನ ಸವೆಯದನ್ನಕ್ಕ ಅಪ್ಪುದೆ ಭಕ್ತಿ?
ಕೂಡಲಸಂಗಮದೇವನೆಲುದೋರೆ ಸರಸವಾಡುವನು:
ಸೈರಿಸದನ್ನಕ್ಕ ಅಪ್ಪುದೆ ಭಕ್ತಿ? ॥ ೨೧೦ ॥

೨೧೧

ಹಾವಸೆಗಲ್ಲ ಮೆಟ್ಟಿ ಹರಿದು, ಗೊತ್ತ ಮುಟ್ಟಬಾರದಯ್ಯಾ,
ನುಡಿದಂತೆ ನಡೆಯಲು ಬಾರದಯ್ಯಾ.
ಕೂಡಲಸಂಗನ ಶರಣರ ಭಕ್ತಿ, ಬಾಳ ಬಾಯಧಾರೆ. ॥ ೨೧೧ ॥

೨೧೨

ಭಕ್ತಿಯೆಂಬುದ ಮಾಡಬಾರದು,
ಕರಗಸದಂತೆ ಹೋಗುತ್ತ ಕೊರೆದು, ಬರುತ್ತ ಕೊಯ್ವುದು.
ಘಟಸರ್ಪನಲ್ಲಿ ಕೈದುಡುಕಿದಡೆ ಹಿಡಿವುದ ಮಾಬುದೆ
ಕೂಡಲಸಂಗಮದೇವಾ? ॥ ೨೧೨ ॥

೨೧೩

ಹಲವುಕಾಲ ಭಾವತಿಗೊಂದು ಒಟ್ಟಿದ ಹಿದಿರೆಯು
ಒಂದು ಮಿಡುಕುರಲ್ಲಿ ಬೇವಂತೆ,
ಸಲೆ ನೆಲೆ ಸನ್ನಿಹಿತನಾಗಿಪ್ಪ ಶರಣನ ಭಕ್ತಿ
ಒಂದನಾಯತದಿಂದ ಕೆಡುವುದು.
[ಸು]ಧರ್ಮದಲ್ಲಿ ಗಳಿಸಿದ ಪಿತನ ಧನವ
ಅಧರ್ಮದಲ್ಲಿ ಕೆಡಿಸುವ ಸುತನಂತೆ–
ಶಿವನ ಸೊಮ್ಮ ಶಿವಂಗೆ ಮಾಡದೆ, ಅನ್ಯಕ್ಕೆ ಮಾಡಿದಡೆ,
ತನ್ನ ಭಕ್ತಿ ತನ್ನನೆ ಕೆಡಿಸೂದು ಕೂಡಲಸಂಗಮದೇವಾ! ॥ ೨೧೩ ॥

೨೧೪

ನಚ್ಚಿದೆನೆಂದಡೆ ಮಚ್ಚಿದೆನೆಂದಡೆ, ಸಲೆ ಮಾರುವೋದೆನೆಂದಡೆ
ತನುವನಲ್ಲಾಡಿಸಿ ನೋಡುವೆ ನೀನು.
ಮನವನಲ್ಲಾಡಿಸಿ ನೋಡುವೆ ನೀನು.
ಧನವನಲ್ಲಾಡಿಸಿ ನೋಡುವೆ ನೀನು.
ಇವೆಲ್ಲಕ್ಕಂಜದಿದ್ದಡೆ ಭಕ್ತಿಕಂಪಿತ [ನೀನು] ಕೂಡಲಸಂಗಮದೇವಾ. ॥ ೨೧೪ ॥

೨೧೫

ಕವುಳುಗೋಲ ಹಿಡಿದು ಶ್ರವವ ಮಾಡಬಹುದಲ್ಲವೆ
ಕಳನೇರಿ ಕಾದೂದರಿದು ನೋಡಾ.
ಬಣ್ಣವಿಟ್ಟು ನುಡಿದಲ್ಲಿ ಫಲವೇನು?
ಚಿನ್ನಗೆಯ್ಕವನ್ನಾಡುವವನಂತೆ.
ಬಂದ ಸಮಯವನರಿತು, ಇದ್ದುದ ವಂಚಿಸದಿದ್ದಡೆ
ಕೂಡಲಸಂಗಮದೇವನೊಲಿದು ಸಲಹುವ. ॥ ೨೧೫ ॥

೨೧೬

ಧನಕ್ಕೆ ಮನವನೊಡ್ಡಿದಡೇನು? ಮನಕ್ಕೆ ಧನವನೊಡ್ಡಿದಡೇನು?
ತನು, ಮನ, ಧನವ ಮೀರಿ ಮಾತಾಡಬಲ್ಲಡೆ
ಆತ ನಿಸ್ಸೀಮನು, ಆತ ನಿಜೈಕ್ಯನು.
ತನು, ಮನ, ಧನವನುವಾದಡೆ
ಕೂಡಲಸಂಗಮದೇವನೊಲಿವ. ॥ ೨೧೬ ॥

೨೧೭

ಅರ್ಥ ಪ್ರಾಣ ಅಭಿಮಾನದಲ್ಲಿ ವಂಚನೆಯಿಲ್ಲದಿಹುದೆ ಭಕ್ತಿ,
ಹೆಚ್ಚು ಕುಂದಿಲ್ಲದಿಹುದೆ ಸಮಯಾಚಾರ,
ಜಂಗಮವೆ ಲಿಂಗವೆಂಬುದಕ್ಕೆ ಏನು ಗುಣ
ಮನದ ಲಂಪಟತನ ಹಿಂಗದಾಗಿ?
ಒಡೆಯರ ಬರವಿಂಗೆ ಕುಸ್ನಿ ಬಾಲವ ಬಡಿದಡೆ
ಪೆಚ್ಚವೇನು ಹತ್ತೂದು ಕೂಡಲಸಂಗಮದೇವಾ? ॥ ೨೧೭ ॥

೨೧೮

ಹಸಿದು ಬಂದ ಗಂಡಂಗೆ ಉಣಲಿಕ್ಕದೆ,
ಬಡವಾದನೆಂದು ಮರುಗುವ ಸತಿಯ ಸ್ನೇಹದಂತೆ
ಬಂದುದನರಿಯಳು, ಇದ್ದುದ ಸವಸಳು.
ದುಃಖವಿಲ್ಲದ ಅಕ್ಕೆ ಹರಗಣಗನ ತೆರನಂತೆ
ಕೂಡಲಸಂಗಮದೇವಾ. ॥ ೨೧೮ ॥

೨೧೯

ಉದಯದ ಮಾಗಿಯ ಬಿಸಿಲು ಅಂಗಕ್ಕೆ ಹಿತವಾಯಿತ್ತು,
ಮಧ್ಯಾಹ್ನದ ಬಿಸಿಲು ಅಂಗಕ್ಕೆ ಕರ ಕಠಿಣವಾಯಿತ್ತು?
ಮೊದಲಲ್ಲಿ ಲಿಂಗಭಕ್ತಿ ಹಿತವಾಯಿತ್ತು,
ಕಡೆಯಲ್ಲಿ ಜಂಗಮಭಕ್ತಿ ಕಠಿಣವಾಯಿತ್ತು?
ಇದು ಕಾರಣ ಕೂಡಲಸಂಗಮದೇವನವರ ಬಲ್ಲನಾಗಿ ಒಲ್ಲನಯ್ಯಾ. ॥ ೨೧೯ ॥

೨೨೦

ಬರಬರ ಭಕ್ತಿ ಅರೆಯಾಯಿತ್ತು ಕಾಣಿರಣ್ಣಾ:
ಮೊದಲದಿನ ಹಣೆಮುಟ್ಟಿ, ಮರುದಿನ ಕೈಮುಟ್ಟಿ,
ಮೂರೆಂಬ ದಿನಕ್ಕೆ ತೂಕಡಿಕೆ ಕಾಣಿರಣ್ಣಾ.
ಹಿಡಿದುದ ಬಿಡದಿದ್ದಡೆ ಕಡೆಗೆ ಚಾಚುವ,
ಅಲ್ಲದಿದ್ದಡೆ ನಡುನೀರಲದ್ದುವ ನಮ್ಮ ಕೂಡಲಸಂಗಮದೇವ. ॥ ೨೨೦ ॥

೨೨೧

ಬಿದಿರಲಂದಣವಕ್ಕು, ಬಿದಿರೆ ಸತ್ತಿಗೆಯಕ್ಕು,
ಬಿದಿರಲ್ಲಿ ಗುಡಿಯು ಗೂಡಾರವಕ್ಕು,
ಬಿದಿರಲ್ಲಿ ಸಕಲಸಂಪದವೆಲ್ಲವು,
ಬಿದಿರದವರ ಮೆಚ್ಚ ಕೂಡಲಸಂಗಮದೇವ. ॥ ೨೨೧ ॥

೨೨೨

ಉಂಬಾಗಳಿಲ್ಲೆನ್ನ, ಉಡುವಾಗಳಿಲ್ಲೆನ್ನ,
ಬಂಧುಗಳು ಬಂದಾಗಳಿಲ್ಲೆನ್ನ.
ಲಿಂಗಕ್ಕೆ ಇಲ್ಲೆಂಬ, ಜಂಗಮಕ್ಕೆ ಇಲ್ಲೆಂಬ,
ಬಂದ ಪುರಾತರಿಗೆ ಇಲ್ಲೆಂಬ,

ಸಾವಾಗ ದೇಹವ ದೇಗುಲಕ್ಕೆ ಒಯ್ಯೆಂಬ,
ದೇವರಿಗೆ ಹೆಣ ಬಿಟ್ಟಿ ಹೇಳಿತ್ತೆ ಕೂಡಲಸಂಗಮದೇವಾ? ॥ ೨೨೨ ॥

೨೨೩

ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲವಯ್ಯಾ,
ನಾಯ ಹಾಲು ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯಾ.
ನಮ್ಮ ಕೂಡಲಸಂಗನ ಶರಣರಿಗಲ್ಲದೆ
ಮಾಡುವ ಅರ್ಥ ವ್ಯರ್ಥ ಕಂಡಯ್ಯಾ. ॥ ೨೨೩ ॥

೨೨೪

ಬಲಿಯ ಭೂಮಿ, ಕರ್ಣನ ಕವಚ, ಖಚರನ ಅಸ್ಥಿ,
ಶಿಬಿಯ ಮಾಂಸ ವೃಥಾ ಹೋಯಿತ್ತಲ್ಲಾ.
ಶಿವಭಕ್ತಮತಿಕ್ರಮ್ಯ ಯದ್ದಾನಂ ಚ ವಿಧೀಯತೇ ।
ನಿಷ್ಫಲಂ ತು ಭವೇದ್ದಾನಂ ರೌರವಂ ನರಕಂ ವ್ರಜೇತ್ ॥
ಇಂತೆಂದುದಾಗಿ, ಕೂಡಲಸಂಗನ ಶರಣರನರಿಯುವೆ
ಕೀರ್ತಿವಾರ್ತೆಗೆ ಮಾಡಿದವನ ಧನವು ವೃಥಾ ಹೋಯಿತ್ತಲ್ಲಾ. ॥ ೨೨೪ ॥

೨೨೫

ಹತ್ತು ಮತ್ತರ ಭೂಮಿ, ಬತ್ತದ ಹಯನು, ನಂದಾದೀವಿಗೆಯ
ನಡೆಸಿಹೆವೆಂಬವರ ಮುಖವ ನೋಡಲಾಗದು,
ಅವರ ನುಡಿಯ ಕೇಳಲಾಗದು.
ಅಂಡಜ, ಸ್ವೇದಜ, ಉದ್ಭಿಜ, ಜರಾಯುಜವೆಂಬ ಪ್ರಾಣಿಗಳಿಗೆ
ಭವಿತವ್ಯವ ಕೊಟ್ಟವರಾರೊ?
ಒಡೆಯರಿಗೆ ಉಂಡಲಿಗೆಯ ಮುರಿದಿಕ್ಕಿದಂತೆ
ಎನ್ನಿಂದಲೆ ಆಯಿತ್ತು, ಎನ್ನಿಂದಲೆ ಹೋಯಿತ್ತು ಎಂಬವನ ಬಾಯಲ್ಲಿ
ಮೆಟ್ಟಿ ಹುಡಿಯ ಹೊಯ್ಯದೆ ಮಾಬನೆ
ಕೂಡಲಸಂಗಮದೇವ? ॥ ೨೨೫ ॥

೨೨೬

ಅನವರತ ಮಾಡಿಹೆನೆಂದು ಉಪ್ಪರ ಗುಡಿಯ ಕಟ್ಟಿ ಮಾಡುವ
ಭಕ್ತನ ಮನೆಯದು ಲಂದಣಗಿತ್ತಿಯ ಮನೆ.
ಸರ್ವಜೀವದಯಾಪಾರಿಯೆಂದು ಭೂತದೇಹಕಿಕ್ಕುವನ ಮನೆ

ಸಯಿದಾನದ ಕೇಡು.
ಸೂಳೆಯ ಮಗ ಮಾಳವ ಮಾಡಿದಡೆ
ತಾಯ ಹೆಸರಾಯಿತ್ತು, ತಂದೆಯ ಹೆಸರಿಲ್ಲ
ಕೂಡಲಸಂಗಮದೇವಾ. || ೧೧೬ ||

೧೧೭

ಕಾಲಾಗ್ನಿರುದ್ರನ ಮೇಳಾಪವನರಿಯದವರು
ಕಾಳುಬೇಳೆನುತಿಪ್ಪರಯ್ಯಾ.
ಕಾನನದಡವಿಯಲ್ಲಿ ಕಿಚ್ಚು ಬಾಳುವೆಯಾಗಿ
ಮಿಕ್ಕಡೊರಲುವ ಬಳ್ಳುವಿನಂತೆ ಇಪ್ಪರಯ್ಯಾ,
ಮನುಜರು ನರವಿಂದ್ಯದೊಳಗೆ.
ತತ್ಕಾಲಪ್ರೇಮವನರಿಯದೆ ವಿಭವಕ್ಕೆ ಮಾಡಿದ ಭಕ್ತಿ
ಇರುಳು ಸತ್ತಿಗೆಯ ಹಿಡಿಯಿಸಿಕೊಂಬಂತೆ ಕೂಡಲಸಂಗಮದೇವಾ. || ೧೧೭ ||

೧೧೮

ಹರ[ಹಿ] ಮಾಡೂದು ಹರಕೆಯ ಕೇಡು,
ನೆರಹಿ ಮಾಡೂದು ಡಂಬಿನ ಭಕ್ತಿ.
ಹರ[ಹ]ಬೇಡ, ನೆರಹಬೇಡ
ಬಂದ ಬರವನರಿತು ಮಾಡಬಲ್ಲಡೆ ಕೂಡಿಕೊಂಡಿಪ್ಪ
ನಮ್ಮ ಕೂಡಲಸಂಗಮದೇವ. || ೧೧೮ ||

೧೧೯

ಹಡೆದೊಡವೆ ವಸ್ತುಪಸು ಮೃಡಭಕ್ತರಿಗಲ್ಲದೆ
ಕಡಬಡ್ಡಿಯ ಕೊಡಲಾಗದು.
ಬಂದಡೊಂದು ಲೇಸು, ಬಾರದಿದ್ದಡೆರಡು ಲೇಸು.
ಅಲ್ಲಿದ್ದಡೆಯೂ ಲಿಂಗಕ್ಕೆ ಬೋನ, ಇಲ್ಲಿದ್ದಡೆಯೂ ಲಿಂಗಕ್ಕೆ ಬೋನ.
ಲಿಂಗದೊಡವೆ ಲಿಂಗಕ್ಕೆ ಸಾರಿತ್ತಾಗಿ
ಬಂದಿತ್ತೆಂಬ ಪರಿಣಾಮವಿಲ್ಲ, ಬಾರದೆಂಬ ದುಃಖವಿಲ್ಲ.
ಇದು ಕಾರಣ ಕೂಡಲಸಂಗಮದೇವಾ,
ನಿಮ್ಮ ಶರಣರಿಗಲ್ಲದೆ, ಕಡಬಡ್ಡಿಯ ಕೊಡಲಾಗದು. || ೧೧೯ ||

೨೩೦

ಓಡಲಾರದ ಮೃಗವು ಸೋಣಗಂಗೆ ಮಾಂಸವ ನೀವಂತೆ
ಮಾಡಲಾಗದು ಭಕ್ತನು, ಕೊಳಲಾಗದು ಜಂಗಮ,
ಹಿರಿಯರು ನರಮಾಂಸವ ಭುಂಜಿಸುವರೆ?
ತನುವುಕ್ಕಿ ಮನವುಕ್ಕಿ ಮಾಡಬೇಕು ಭಕ್ತನು,
ಮಾಡಿಸಿಕೊಳ್ಳಬೇಕು ಜಂಗಮ, ಕೂಡಲಸಂಗಮದೇವಾ. ॥ ೨೩೦ ॥

೨೩೧

ಬಂದುದ ಕೈಕೊಳ್ಳಬಲ್ಲಡೆ ನೇಮ,
ಇದ್ದುದ ವಂಚನೆಯ ಮಾಡದಿದ್ದಡೆ ನೇಮ.
ನಡೆದು ತಪ್ಪದಿದ್ದಡೆ ಅದು ನೇಮ,
ನುಡಿದು ಹುಸಿಯದಿದ್ದಡೆ ಅದು ಮುನ್ನವೆ ನೇಮ.
ನಮ್ಮ ಕೂಡಲಸಂಗನ ಶರಣರು ಬಂದಡೆ
ಒಡೆಯರಿಗೊಡವೆಯನೊಪ್ಪಿಸುವುದೆ ನೇಮ. ॥ ೨೩೧ ॥

೨೩೨

ಹಾಲ ನೇಮ, ಹಾಲ ಕೆನೆಯ ನೇಮ,
ಕೆನೆ ತಪ್ಪಿದ ಬಳಿಕ ಕಿಚ್ಚಡಿಯ ನೇಮ,
ಬೆಣ್ಣೆಯ ನೇಮ, ಬೆಲ್ಲದ ನೇಮ,
ಅಂಬಲಿಯ ನೇಮದವರನಾರನೂ ಕಾಣೆ.
ಕೂಡಲಸಂಗನ ಶರಣರಲ್ಲಿ
ಅಂಬಲಿಯ ನೇಮದಾತ ಮಾದಾರ ಚೆನ್ನಯ್ಯ. ॥ ೨೩೨ ॥

೨೩೩

ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ,
ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ.
ಮಾಡುವ ನೀಡುವ ನಿಜಗುಣವುಳ್ಳಡೆ
ಕೂಡಿಕೊಂಬ ನಮ್ಮ ಕೂಡಲಸಂಗಮದೇವ. ॥ ೨೩೩ ॥

೨೩೪

ಮಾಡಿದನೆಂಬುದು ಮನದಲ್ಲಿ ಹೊಳೆದಡೆ,
ಏಡಿಸಿ ಕಾಡಿತ್ತು ಶಿವನ ಡಂಗುರ,

ಮಾಡಿದೆನೆನ್ನದಿರಾ ಲಿಂಗಕ್ಕೆ, ಮಾಡಿದೆನೆನ್ನದಿರಾ ಜಂಗಮಕ್ಕೆ,
ಮಾಡಿದೆನೆಂಬುದು ಮನದಲ್ಲಿಲ್ಲದಿದ್ದಡೆ,
ಬೇಡಿತ್ತನೀವನು ಕೂಡಲಸಂಗಮದೇವ. || ೨೩೪ ||

೨೩೫

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯಬಡಬೇಡ,
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ.
ಇದೇ ಅಂತರಂಗಶುದ್ಧಿ, ಇದೇ ಬಹಿರಂಗಶುದ್ಧಿ
ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ. || ೨೩೫ ||

೨೩೬

ಕೆಡೆ ನಡೆಯದೆ, ಕೆಡೆ ನುಡಿಯದೆ, ಅನ್ಯರ ಪ್ರತಿಪಾದಿಸದಿದ್ದಡೆ
ಏನ ಮಾಡನಯ್ಯಾ ಲಿಂಗವು? ಏನ ಕೊಡನಯ್ಯಾ?
ತಾನು ಏನ ಬೇಡಿದುದನೀವನಾಗಿ,
ನಂಬುಗೆಯುಳ್ಳ ಶಿವಭಕ್ತಂಗೆ ಇದೇ ದಿಬ್ಯ, ಕೂಡಲಸಂಗಮದೇವಾ. || ೨೩೬ ||

೨೩೭

ಸ್ವಾಮಿಭೃತ್ಯಸಂಬಂಧಕ್ಕೆ ಆವುದು ಪಥವೆಂದಡೆ :
ದಿಟವ ನುಡಿವುದು, ನುಡಿದಂತೆ ನಡೆವುದು.
ನುಡಿದು ಹುಸಿವ, ನಡೆದು ತಪ್ಪುವ
ಪ್ರಪಂಚಿಯನೊಲ್ಲ ಕೂಡಲಸಂಗಮದೇವ. || ೨೩೭ ||

೨೩೮

ಸತ್ಯವುಳ್ಳ ಭಂಡವ ತುಂಬೂದಯ್ಯಾ.
ಸುಯಿಧಾನವಯ್ಯಾ, ಸುಯಿಧಾನವಯ್ಯಾ,
ಮನ ಧಾರೆವಟ್ಟಲು.
ಕೂಡಲಸಂಗನ ಶರಣರು ಹಿಡಿಯದ ಭಂಡವನು
ಆರಾದಡಾಗಲಿ ಹೋಗಲೀಯರಯ್ಯಾ. || ೨೩೮ ||

೨೩೯

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ!
ಸತ್ಯವ ನುಡಿವುದೆ ದೇವಲೋಕ, ಮಿಥ್ಯವ ನುಡಿವುದೆ ಮರ್ತ್ಯಲೋಕ.
ಆಚಾರವೆ ಸ್ವರ್ಗ, ಅನಾಚಾರವೆ ನರಕ.
ಕೂಡಲಸಂಗಮದೇವಾ, ನೀವೆ ಪ್ರಮಾಣು. || ೨೩೯ ||

೨೪೦

ಪುಣ್ಯ ಪಾಪಂಗಳೆಂಬವು ತಮ್ಮ ಇಷ್ಟ ಕಂಡಿರೆ,
'ಅಯ್ಯಾ' ಎಂದಡೆ ಸ್ವರ್ಗ, 'ಎಲವೊ' ಎಂದಡೆ ನರಕ.
ದೇವಾ, ಭಕ್ತಾ, ಜಯಾ, ಜೀ[ಯಾ] ಎಂಬ ನುಡಿಯೊಳಗೆ
ಕೈಲಾಸವೈದೂದೆ ಕೂಡಲಸಂಗಮದೇವಾ. || ೨೪೦ ||

೨೪೧

ಏನಿ ಬಂದಿರಿ, ಹದುಳಿದ್ದಿರೆ ಎಂದಡೆ
ನಿ[ಮ್ಮೈ]ಸಿರಿ ಹಾರಿ ಹೋಹುದೆ?
ಕುಳ್ಳಿರೆಂದಡೆ ನೆಲ ಕುಳಿಹೋಹುದೆ?
ಒಡನೆ ನುಡಿದಡೆ ಸಿರ, ಹೊಟ್ಟೆಯೊಡೆವುದೆ?
ಕೊಡಲಿಲ್ಲದಿದ್ದಡೊಂದು ಗುಣವಿಲ್ಲದಿದ್ದಡೆ
ಮೂಗ ಕೊಯ್ವುದ ಮಾಬನೆ ಕೂಡಲಸಂಗಮದೇವಯ್ಯ? || ೨೪೧ ||

೨೪೨

ಸಂಸಾರದಲ್ಲಿ ಹುಟ್ಟಿ ಮತ್ತೊಂದ ಬಯಸಲೇಕಯ್ಯಾ?
ನಗುವುದು ನುಡಿವುದು ಶಿವಭಕ್ತರೊಡನೆ.
ಸುಮ್ಮಾನ ಹಮ್ಮು ಬಿಮ್ಮಾಗಿರಲೇಕಯ್ಯಾ?
ಅಭ್ಯಾಸೇನ ವಿಹೀನಸ್ಯ ತಸ್ಯ ಜನ್ಮ ನಿರರ್ಥಕಂ ।
ಗುರಾವಪಿ ಸಮಂ ಹಾಸ್ಯಂ ಕರ್ತವ್ಯಂ ಕುಟಿಲಂ ವಿನಾ ॥
ನಮ್ಮ ಕೂಡಲಸಂಗನ ಶರಣರೊಡನೆ
ಮನದೆರೆದು ಮಾತನಾಡೂದಯ್ಯಾ. || ೨೪೨ ||

೨೪೩

ಭಕ್ತಿಯೆಂಬ ನಿಧಾನವ ಸಾಧಿಸುವಡೆ
ಶಿವಪ್ರೇಮವೆಂಬ ಅಂಜನವನೆಚ್ಚಿಕೊಂಬುದು,

ಭಕ್ತನಾದವಂಗೆ ಇದೇ ಪಥವಾಗಿರಬೇಕು.
ನಮ್ಮ ಕೂಡಲಸಂಗನಶರಣರ ಅನುಭಾವ ಗಜವೈದ್ಯ. ॥ ೨೪೧ ॥

೨೪೪

ಕಂಡ ಭಕ್ತರಿಗೆ ಕೈಮುಗಿಯುವಾತನೆ ಭಕ್ತ,
ಮೃದುವಚನವೆ ಸಕಲ ಜಪಂಗಳಯ್ಯಾ,
ಮೃದುವಚನವೆ ಸಕಲ ತಪಂಗಳಯ್ಯಾ,
ಸದುವಿನಯವೆ ಸದಾಶಿವನ ಒಲುಮೆಯಯ್ಯಾ.
ಕೂಡಲಸಂಗಯ್ಯನಂತಲ್ಲವೊಲ್ಲನಯ್ಯಾ. ॥ ೨೪೪ ॥

೨೪೫

ಇತ್ತ ಬಾರಯ್ಯಾ, ಇತ್ತ ಬಾರಯ್ಯಾ ಎಂದು
ಭಕ್ತರೆಲ್ಲರೂ ಕೂರ್ತು ಹತ್ತಿರೆ ಕರೆವುತ್ತಿರಲು,
ಮತ್ತೆ ಕೆಲಕ್ಕೆ ಸಾರ್ದು, ಶರಣೆಂದು ಹಸ್ತ ಬಾಯನೆ ಮುಚ್ಚಿ,
ಕಿರಿದಾಗಿ ಭೃತ್ಯಾಚಾರವ ನುಡಿದು,
ವಿನಯ ತದ್ಭಾವ್ಯನವುಳ್ಳಡೆ ಎತ್ತಿಕೊಂಬನಯ್ಯಾ,
ಕೂಡಲಸಂಗಮದೇವ ಪ್ರಮಥರ ಮುಂದೆ. ॥ ೨೪೫ ॥

೨೪೬

ಭಕ್ತ ಭಕ್ತನ ಮನೆಗೆ ಬಂದಡೆ, ಭೃತ್ಯಾಚಾರವ ಮಾಡಬೇಕು.
ಕರ್ತನಾಗಿ ಕಾಲ ತೊಳೆಯಿಸಿಕೊಂಡಡೆ
ಹಿಂದೆ ಮಾಡಿದ ಭಕ್ತಿಗೆ ಹಾನಿ.
ಲಕ್ಕಗಾವುದ ದಾರಿಯ ಹೋಗಿ
ಭಕ್ತನು ಭಕ್ತನ ಕಾಂಬುದು ಸದಾಚಾರ.
ಅಲ್ಲಿ ಕೂಡಿ ದಾಸೋಹವ ಮಾಡಿದಡೆ
ಕೂಡಿಕೊಂಬನು ನಮ್ಮ ಕೂಡಲಸಂಗಯ್ಯ. ॥ ೨೪೬ ॥

೨೪೭

ದಯವಿಲ್ಲದ ಧರ್ಮವದೇವುದಯ್ಯಾ?
ದಯವೇ ಬೇಕು ಸರ್ವಪ್ರಾಣಿಗಳೆಲ್ಲರಲ್ಲಿ.
ದಯವೇ ಧರ್ಮದ ಮೂಲವಯ್ಯಾ,
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ. ॥ ೨೪೭ ॥

೨೪೮

ತನಗೆ ಮುನಿವರಿಗೆ ತಾ ಮುನಿಯಲೇಕಯ್ಯಾ?
ತನಗಾದ ಆಗೇನು? ಅವರಿಗಾದ ಚೇಗೆಯೇನು?
ತನುವಿನ ಕೋಪ ತನ್ನ ಹಿರಿಯತನದ ಕೇಡು.
ಮನದ ಕೋಪ ತನ್ನ ಅರಿವಿನ ಕೇಡು.
ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ
ನೆರೆಮನೆಯ ಸುಡದು ಕೂಡಲಸಂಗಮದೇವಾ. ॥ ೨೪೮ ॥

೨೪೯

ಅರ್ಥಕ್ಕೆ ತಪ್ಪಿದಡೇನು, ಪ್ರಾಣಕ್ಕೆ ತಪ್ಪಿದಡೇನು,
ಅಭಿಮಾನಕ್ಕೆ ತಪ್ಪಿದಡೇನು?
ಶರಣರು ಶರಣರಲ್ಲಿ ಗುಣವನರಸುವರೆ?
ಕೂಡಲಸಂಗನ ಶರಣರು ನೊಂದು ಸೈರಿಸಬೇಕು. ॥ ೨೪೯ ॥

## ಭಕ್ತನ ಭಕ್ತಸ್ಥಲ

೨೫೦

ಕಾಣದ ಠಾವಿನಲಿ ಜರಿದರೆಂದಡೆ ಕೇಳಿ ಪರಿಣಾಮಿಸಬೇಕು.
ಅದೇನು ಕಾರಣ?
ಕೊಳ್ಳದೆ ಕೊಡದೆ ಅವರಿಗೆ ಸಂತೋಷವಹುದಾಗಿ!
ಎನ್ನ ಮನದ ತದ್‌ದ್ವೇಷವಳಿದು
ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು,
ಕೂಡಲಸಂಗಮದೇವಾ. ॥ ೨೫೦ ॥

೨೫೧

ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ,
ಒರೆಗೆ ಬಣ್ಣಕ್ಕೆ ತಂದೆನ್ನ ಪುಟವನಿಕ್ಕಿ ನೋಡಯ್ಯಾ,
ಕಡಿಪಕ್ಕೆ ಬಡಿಪಕ್ಕೆ ತಂದೆನ್ನ ಕಡೆಯಾಣಿಯ ಮಾಡಿ,
ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು
ಕೂಡಲಸಂಗಮದೇವಾ. ॥ ೨೫೧ ॥

೨೫೨

ವೇದಾದಿ ನಾಮ ನಿರ್ನಾಮ ಮಹತ್ತತ್ತ್ವಂ ಮಹೇಶ್ವರಃ।
ಗುರೂಕ್ತಮಂತ್ರಮಾರ್ಗೇಣ ಇಷ್ಟಲಿಂಗಂ ತು ಶಾಂಕರಿ॥
ಎಂದುದಾಗಿ, ವಚನಪಾತಕವೆನ್ನ, ವಚನದೋಷಂಗಳೆನ್ನ,
ಕಾಡಿ ಕಾಡಿ ಕೆಡಿಸುವವೆನ್ನ!
ಕೂಡಲಸಂಗಮದೇವಾ 'ಅಹಂ' ಎಂಬ ಅಹಂಕಾರವೆನ್ನ. ॥ ೨೫೨ ॥

೨೫೩

ಅವರಿವರೆನ್ನದೆ ಚರಣಕ್ಕೆರಗಲು ಅಯ್ಯತನವೇರಿ,
[ಬಿ]ಬ್ಬನೆ ಬಿರಿವೆ ನಾನು, ಕಿಚ್ಚು ಬೆಳೆಯಿತ್ತಯ್ಯಾ.
ಆ ಕಿಚ್ಚಿಂಗೆ ಕಿಚ್ಚನಿಕ್ಕಿ ಸುಟ್ಟು ಬೆಳ್ಳುಕನ ಮಾಡಿ,
ಬೆಳುಗಾರದಂತೆ ಮಾಡು ಕೂಡಲಸಂಗಮದೇವಾ. ॥ ೨೫೩ ॥

೨೫೪

ನಡೆಯೆ ಕಂಡಾ ನಂಬಿ, ನುಡಿಯೆಲ್ಲಾ ಉಪಚಾರ!
ಮಿಗಿಲೊಂದು ಮಾತು ಬಂದಡೆ ಸೈರಿಸಲಾರೆನು.
ತುಯ್ಯಲಾದಡೆ ಉಂಬೆ, ಹುಯ್ಯಲಾದಡೆ ಓಡುವೆ,
ಆಳು ಬೇಡವಡೆ ಆಳ್ದನೇನನೀವನಯ್ಯಾ?
ಆಳಾಗಿ ಹೊಕ್ಕು ಅರಸಾಗಿ ನಡೆದಡೆ,
ಆಳಿಗೊಂಡಿತೆನ್ನ ಕೂಡಲಸಂಗನ ಭಕ್ತಿ. ॥ ೨೫೪ ॥

೨೫೫

ಇರಿಸಿಕೊಂಡು ಭಕ್ತರಾದರೆಮ್ಮವರು,
ತರಿಸಿಕೊಂಡು ಭಕ್ತರಾದರೆಮ್ಮವರು,
ಕೊರೆಸಿಕೊಂಡು ಭಕ್ತರಾದರೆಮ್ಮವರು,
ಜರಿಸಿಕೊಂಡು ಭಕ್ತರಾದರೆಮ್ಮವರು.
ಕೂಡಲಸಂಗನ ಶರಣರಿಗೆ ಮುಳಿಸ ತಾಳಿ
ಎನ್ನ ಭಕ್ತಿ ಅರೆಯಾಯಿತ್ತು. ॥ ೨೫೫ ॥

೨೫೬

ಮನಕ್ಕೆ ನಾಚದ ವಚನ, ವಚನಕ್ಕೆ ನಾಚವ ಮನ!
ಕುಂದು–ಹೆಚ್ಚ ನುಡಿವೆ.
ಒಂದು ಮಾತಿನ ಗೆಲ್ಲಕ್ಕೆ ಹಿಡಿದು ಹೋರುವೆ,
ಕೂಡಲಸಂಗನ ಶರಣರ ಎನ್ನಾಳ್ದರೆಂಬೆ. ॥ ೨೫೬ ॥

೨೫೭

ಇಲ್ಲವೆಯ ಮೇಲೆ ಕಂಚೊಡೆದಂತೆ ಬಡ ಮನವೆನ್ನ ಕಾಡಿಹಿತಯ್ಯಾ,
ಮತಿಯಿಲ್ಲದ ಮರುಳ ನಾನಯ್ಯ,
ಭಕ್ತಿಯಿಲ್ಲದ ಬಡವ ನಾನು.
ನಿಮ್ಮ ನೆನಹವಿಲ್ಲದೆ ನಿರ್ಭಾಗ್ಯನಾದೆ,
ಎನಗೆ ನೀ ಕರುಣಿಸು ಕೂಡಲಸಂಗಮದೇವಾ. ॥ ೨೫೭ ॥

೨೫೮

ಲಿಂಗವ ನಚ್ಚದೀ ಮನವು, ಜಂಗಮವ ನಂಬದೀ ಮನವು,
ಕೂಪರ ಕಂಡಡೆ ಒಲ್ಲದೀ ಮನವು.
ಈ ಮನದ ಭ್ರಮೆಯನೆಲ್ಲವ ಮರೆಸಿ,
ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು
ಕೂಡಲಸಂಗಮದೇವಾ. ॥ ೨೫೮ ॥

೨೫೯

ಅಶನ ಕುಂದದು, ವ್ಯಸನ ಮಾಣದು,
ಆರತವಡಗದು, ಬೆವಹಾರ ಮಾಣದು.
ಮಜ್ಜನಕ್ಕೆರೆವೆನಯ್ಯಾ: ಕಾಯವಿಕಾರಿಯಾನು.
ಮಜ್ಜನಕ್ಕೆರೆವೆನಯ್ಯಾ: ಜೀವವಿಕಾರಿಯಾನು.
ಮಜ್ಜನಕ್ಕೆರೆವೆನಯ್ಯಾ: ಶರಣನಲ್ಲ, ಲಿಂಗೈಕ್ಯನಲ್ಲ.
ಕೂಡಲಸಂಗಮದೇವರಲ್ಲಿ
ಅಂತರಬೆಂತರ ನಾನಯ್ಯಾ. ॥ ೨೫೯ ॥

೨೬೦

ಕುದುರನೇಸ ತೊಳೆದಡೆಯೂ ಕೆಸರು ಮಾಬುದೆ?
ಎನ್ನ ಕಾಯದಲುಳ್ಳ ಅವಗುಣಂಗಳ ಕಳೆದು ಕೃಪೆಯ ಮಾಡಯ್ಯಾ.

ಕಂಬಳಿಂಪಲ್ಲಿ ಕಣಕವ ನಾದಿದಂತೆ ಕಾಣಿರೇ ಎನ್ನ ಮನ.
ಕೂಡಲಸಂಗಮದೇವಾ, ನಿಮಗೆ ಶರಣೆಂದು ಶುದ್ಧ ಕಾಣಯ್ಯಾ. ॥ ೨೬೦ ॥

೨೬೧

ಕಾಮಧೇನು ನಿಮ್ಮ ಸಾರಿರಲು ಪರರ ಬೇಡಲಾರೆನಯ್ಯಾ.
ನಿಮ್ಮುವ ಪೂಜಿಸಿ ಭವಬಂಧನ ಬಿಡದೇಕಯ್ಯಾ?
ಹಿಂದಣ ಜನ್ಮದ ಚಿಹ್ನ ಬಿಡದನ್ನಕ್ಕ
ನಿಮ್ಮ ಪೂಜಿಸಿ ಏವೆನಯ್ಯಾ?
ಎನ್ನ ಮನದ ಅವಗುಣವ ಕಳೆದು
ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು,
ಕೂಡಲಸಂಗಮದೇವಾ. ॥ ೨೬೧ ॥

೨೬೨

ದುರ್ವ್ಯಸನಿ ದುರಾಚಾರಿ ಎಂದೆನಿಸದಿರಯ್ಯಾ, ಎನ್ನ.
ಲಿಂಗವ್ಯಸನಿ ಜಂಗಮಪ್ರೇಮಿ ಎಂದೆನಿಸಯ್ಯಾ,
'ಅವಶ್ಯಮನುಭೋಕ್ತವ್ಯಂ' ಎಂದೆನಿಸದಿರಯ್ಯಾ
ಕೂಡಲಸಂಗಮದೇವಾ, ಸೆರಗೊಡ್ಡಿ ಬೇಡುವೆನು. ॥ ೨೬೨ ॥

೨೬೩

ಧೃತಿಗೆಟ್ಟು ಅನ್ಯರ ಬೇಡದಂತೆ,
ಮತಿಗೆಟ್ಟು ಪರರುವ ಹೊಗಳದಂತೆ,
ಪರಸತಿಯರ ರತಿಗೆ ಮನ ಹಾರದಂತೆ,
ಶಿವಪಥವೊಲ್ಲದವರೊಡನಾಡದಂತೆ,
ಅನ್ಯಜಾತಿಯ ಸಂಗವ ಮಾಡದಂತೆ,
ಎನ್ನ ಪ್ರತಿಪಾಲಿಸು, ಕೂಡಲಸಂಗಮದೇವಾ. ॥ ೨೬೩ ॥

೨೬೪

ಮತ್ತೊಂದ ಕಾಣದೆ, ಮತ್ತೊಂದ ಕೇಳದೆ,
ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ
ಇರಿಸಯ್ಯಾ, ಕೂಡಲಸಂಗಮದೇವಾ. ॥ .

೨೬೫

ಮತಿಮಂದನಾಗಿ ಗತಿಯ ಕಾಣದೆ ಇದ್ದೆನಯ್ಯಾ :
ಹುಟ್ಟುಗುರುಡನ ಕೈಯ ಕೋಲ ಕೊಟ್ಟು ನಡೆಸುವಂತೆ
ನಡೆಸಯ್ಯಾ ಎನ್ನ.
ನಿಮ್ಮ ಅಚ್ಚ ಶರಣರ ಒಕ್ಕುದ ಮಿಕ್ಕುದ ನಚ್ಚಿಸು, ಮಚ್ಚಿಸು,
ಕೂಡಲಸಂಗಮದೇವಾ. ॥ ೨೬೫ ॥

೨೬೬

ಕಾಣದುದನೆಲ್ಲವ ಕಾಣಲಾರೆನಯ್ಯಾ,
ಕೇಳದುದನೆಲ್ಲವ ಕೇಳಲಾರೆನಯ್ಯಾ.
ದ್ರೋಹವಿಲ್ಲ ಎಮ್ಮ ಶಿವನಲ್ಲಿ, ಸೀಮೆಯಯ್ಯಾ.
ಒಲೆಯ ಮುಂದಿದ್ದು ಮಾಡದ ಕನಸ ಕಾಂಬವರನೊಲ್ಲನಯ್ಯಾ
ಕೂಡಲಸಂಗಮದೇವ. ॥ ೨೬೬ ॥

೨೬೭

ಎತ್ತು ತೊತ್ತಾಗಿ, ಭೃತ್ಯನಾಗಿ ಎಂದಿಪ್ಪೆನಯ್ಯಾ.
ನಿಮ್ಮವರ ಮನೆಯಲು ಕೂಡಲಸಂಗಮದೇವಾ,
ಲಿಂಗಜಂಗಮದ ಲೆಂಗಿಯಾಗಿ. ॥ ೨೬೭ ॥

೨೬೮

ಕಾಣಬಹುದೆ ಪರುಷದ ಗಿರಿ ಅಂಧಕಂಗೆ?
ಮೊಗೆಯಬಹುದೆ ರಸದ ಬಾವಿ ನಿರ್ಭಾಗ್ಯಂಗೆ?
ತೆಗೆಯಬಹುದೆ ಕಡವರವ ದಾರಿದ್ರಂಗೆ?
ಕರೆಯಬಹುದೆ ಕಾಮಧೇನು ಅಶುದ್ಧಂಗೆ?
ಪೊನ್ನ ಹುಳುವ ಕಂಡು ನರಿ ತನ್ನ ಬಾಲವ
ಹುಣ್ಣು ಮಾಡಿಕೊಂಡಡೆ ಹೋಲಬಹುದೆ?
ಎನ್ನೊಡೆಯ ಕೂಡಲಸಂಗನ ಶರಣರನು
ಪುಣ್ಯವಿಲ್ಲದೆ ಕಾಣಬಹುದೆ? ॥ ೨೬೮ ॥

೨೬೯

ಎಂತಕ್ಕೆ ಎಂತಕ್ಕೆ ನಾ ನಿಮ್ಮ ದೇವರೆಂದರಿದೆನು,
ಇಂತಾಗಿ ನೀವೆನ್ನನಾರೆಂದರಿಯಿರಿ.

ನಂಬಲರಿಯೆ, ನಂಬಿಸಲರಿಯೆ.
ಒಲಿಯಲರಿಯೆ, ಒಲಿಸಲರಿಯೆ.
ಯಥಾ ಭಾವಸ್ತಥಾ ಲಿಂಗಂ ಸತ್ಯಂ ಸತ್ಯಂ ನ ಸಂಶಯಃ।
ಯಥಾ ಭಕ್ತಿಸ್ತಥಾ ಸಿದ್ಧಿಃ ಸತ್ಯಂ ಸತ್ಯಂ ನ ಸಂಶಯಃ॥
ಎಂಬುದಾಗಿ, ಕೂಡಲಸಂಗಮದೇವಾ, ಕೇಳಯ್ಯಾ
ಕೋಟಿ ಕೋಟಿ ವರುಷ ಕೋಟಲೆಗೊಂಡೆನಯ್ಯಾ. ೨೧೯

೨೨೦

ಅರಿಸಿನವನೆ ಮಿಂದು, ಹೊಂದೊಡಿಗೆಯನೆ ತೊಟ್ಟು,
ಪುರುಷನ ಒಲವಿಲ್ಲದ ಲಲನೆಯಂತೆ ಆಸಿದ್ದೇನಯ್ಯಾ.
ವಿಭೂತಿಯನೆ ಹೂಸಿ, ರುದ್ರಾಕ್ಷಿಯನೆ ಕಟ್ಟಿ,
ಶಿವ ನಿಮ್ಮ ಒಲವಿಲ್ಲದಂತೆ ಆನಿದ್ದೇನಯ್ಯಾ.
ಕೆಟ್ಟು ಬಾಳುವರಿಲ್ಲ ಎಮ್ಮವರ ಕುಲದಲ್ಲಿ,
ನೀನೊಲಿದಂತೆ ಸಲಹಯ್ಯಾ ಕೂಡಲಸಂಗಮದೇವಾ. ೨೨೦

೨೨೧

ಉದಯಾಸ್ತಮಾನವೆನ್ನ ಬೆಂದ ಬಸುರಿಂಗೆ ಕುದಿಯಲಲ್ಲದೆ,
ನಿಮ್ಮ ನೆನೆಯಲು ತೆರಹಿಲ್ಲಯ್ಯಾ.
ಎಂತೋ ಲಿಂಗ ತಂದೆ, ಎಂತಯ್ಯಾ ಎನ್ನ ಪೂರ್ವಲಿಖಿತ?
ಬೆರಣೆಯನಾಯಲಲ್ಲದೆ ಅಟ್ಟುಣ್ಣ ತೆರಪಿಲ್ಲೆನಗೆ,
ನೀ ಕರುಣಿಸು, ಕೂಡಲಸಂಗಮದೇವಾ. ೨೨೧

೨೨೨

ತಾಮಸ ಮುಸುಕಿ ಕಂಗಳ ಕೆಡಿಸಿತ್ತೆನ್ನ, ಭಕ್ತಿ.
ಕಾಮವೆಂಬ ಅಗ್ನಿಗೆ ಮುರಿದಿಕ್ಕಿತ್ತೆನ್ನ, ಭಕ್ತಿ.
ಉವರಕ್ಕೆ ಕುದಿಕುದಿದು ಮುಂದುಗೆಡಿಸಿತ್ತೆನ್ನ, ಭಕ್ತಿ.
ಇದಿರನಾಶ್ರಯಿಸಲು ಹೋಯಿತ್ತೆನ್ನ, ಭಕ್ತಿ.
ಹೇಮಮೋಹನು ನಾನು ಕೂಡಲಸಂಗಮದೇವಾ—
ಕ್ಷಣ ಹದುಳವಿರದೆ ಬಾಯ ಟೊಣೆದು ಹೋಯಿತ್ತೆನ್ನ, ಭಕ್ತಿ. ೨೨೨

೨೭೩

ಏನಿದ್ದಡೇನಿದ್ದಡೊಲ್ಲದು ನಿಮ್ಮ ಸುಖಾವಕ್ಕೆನ್ನ ಮನವು.
ವಂಚಕನೆಂಬವ ನಾನು ಕಂಡಯ್ಯಾ,
ಕೂಡಲಸಂಗಮದೇವರ ಪೂಜಿಸಿ ಮಾನವರಾಸೆ ಬಿಡದಾಗಿ. ॥ ೨೭೩ ॥

೨೭೪

ಬೆಲ್ಲವ ತಿಂದ ಕೋಡಗದಂತೆ ಸಿಹಿಯ ನೆನೆಯದಿರಾ, ಮನವೆ.
ಕಬ್ಬು ತಿಂದ ನರಿಯಂತೆ ಹಿಂದಕ್ಕೆಳಸದಿರಾ, ಮನವೆ.
ಗಗನವನಡರಿದ ಕಾಗೆಯಂತೆ ದಸೆದಸೆಗೆ ಹಂಬಲಿಸದಿರಾ, ಮನವೆ.
ಕೂಡಲಸಂಗನ ಶರಣರ ಕಂಡು ಲಿಂಗವೆಂದೆ ನಂಬು, ಮನವೆ. ॥ ೨೭೪ ॥

೨೭೫

ಒಡೆಯರ ಕಂಡಡೆ ಕಳ್ಳನಾಗದಿರಾ, ಮನವೆ.
ಭವದ ಬಾರಿಯ ತಪ್ಪಿಸಿಕೊಂಬಡೆ
ನೀನು ನಿಯತನಾಗಿ, ಭಯಭರಿತನಾಗಿ,
ಅಹಂಕಾರಿಯಾಗದೆ ಶರಣೆನ್ನು, ಮನವೆ.
ಕೂಡಲಸಂಗನ ಶರಣರಲ್ಲಿ ಭಕ್ತಿಯ ನೋನುವಡೆ
ಕಿಂಕಿಲನಾಗಿ ಬದುಕು, ಮನವೆ. ॥ ೨೭೫ ॥

೨೭೬

ಕೋಟ್ಯನುಕೋಟಿ ಜಪವ ಮಾಡಿ ಕೋಟಲೆಗೊಳ್ಳಲದೇಕೆ ಮನವೆ?
ಕಿಂಚಿತು ಗೀತವೊಂದನಂತಕೋಟಿ ಜಪ.
ಜಪವೆಂಬುದೇಕೆ, ಮನವೆ?
ಕೂಡಲಸಂಗನ ಶರಣರ ಕಂಡು,
ಆಡಿ ಹಾಡಿ ಬದುಕು ಮನವೆ. ॥ ೨೭೬ ॥

೨೭೭

ಮನವೆ, ನಿನ್ನ ಜನ್ಮದ ಪರಿಭವವ ಮರೆದೆಯಲ್ಲಾ, ಮನವೆ!
ಲಿಂಗವ ನಂಬು ಕಂಡಾ, ಮನವೆ!
ಜಂಗಮವ ನಂಬು ಕಂಡಾ, ಮನವೆ!
ಕೂಡಲಸಂಗಮದೇವರ ಬಿಡದೆ ಬೆಂಬತ್ತು ಕಂಡಾ, ಮನವೆ! ॥ ೨೭೭ ॥

೨೭೮

ಸುರರ ಬೇಡಿದಡಿಲ್ಲ, ನರರ ಬೇಡಿದಡಿಲ್ಲ
ಬರಿದೆ ಧೃತಿಗೆಡಬೇಡ ಮನವೆ!
ಆರನಾದಡೆಯೂ ಬೇಡಿ ಬೇಡಿ
ಬರಿದೆ ಧೃತಿಗೆಡಬೇಡ ಮನವೆ!
ಕೂಡಲಸಂಗಮದೇವ[ನ]ಲ್ಲದೆ,
ಆರ ಬೇಡಿದಡಿಲ್ಲ ಮನವ! || ೨೭೮ ||

೨೭೯

ಆಡಿ ಅಳುಪದಿರಾ, ಲೇಸಮಾಡಿ ಮರುಗದಿರಾ, ಎಲೆ ಮನವೆ.
ಕೂಡಿ ತಪ್ಪದಿರಾ, ಬೇಡಿದವರಿಗಿಲ್ಲೆನ್ನದಿರು ಕಂಡಾ.
ನಾಡ ಮಾತು ಬೇಡ, ಸೆರಗೊಡ್ಡಿ ಬೇಡು
ಕೂಡಲಸಂಗನ ಶರಣರ. || ೨೭೯ ||

೨೮೦

ಹೃದಯ ಕತ್ತರಿ, ತುದಿನಾಲಗೆ ಬೆಲ್ಲಂ ಭೋ!
ಆಡಿಹೆನು ಏಂ ಭೋ, ಹಾಡಿಹೆನು ಏಂ ಭೋ!
ನಿಚ್ಚ ನಿಚ್ಚ ಶಿವರಾತ್ರಿಯ ಮಾಡಿಹೆನು ಏಂ ಭೋ!
ಆನು ಎನ್ನಂತೆ, ಮನ ಮನದಂತೆ,
ಕೂಡಲಸಂಗಮದೇವ ತಾನು ತನ್ನಂತೆ. || ೨೮೦ ||

೨೮೧

ಒಳ್ಳಿಹ ಮೈಲಾರನ ಒಳಗೆಲ್ಲ ಸಣಬು,
ಹೊರಗಣ ಬಣ್ಣ ಕರ ಲೇಸಾಯಿತ್ತಯ್ಯಾ.
ಶ್ವಾನನ ನಿದ್ರೆ, ಅಜ್ಞಾನಿಯ ತಪದಂತೆ
ಆಯಿತಯ್ಯಾ ಎನ್ನ ಮತಿ, ಕೂಡಲಸಂಗಮದೇವಾ. || ೨೮೧ ||

೨೮೨

ಲೋಕೋಪಚಾರಕ್ಕೆ ಮುಜ್ಜಸಕ್ಕರೆವೆನಯ್ಯಾ.
ಮನದ ತಾಮಸ ಬಿಡದು, ಮನದ ಕಪಟ ಬಿಡದು,
ಶಿವಶರಣೆಂಬುದು ಅಳವಡದಯ್ಯಾ.

ಎನ್ನ ಮನದಲ್ಲಿ ಎರಡುಳ್ಳನ್ನಕ್ಕ
ಕೂಡಲಸಂಗಮದೇವನೆಂತೊಲಿವ? ॥ ೨೮೨ ॥

೨೮೩

ಮಜ್ಜನಕ್ಕೆರೆವೆನಲ್ಲದಾನು, ಸಜ್ಜನವೆನ್ನಲ್ಲಿಲ್ಲಯ್ಯಾ!
ಎನ್ನಲ್ಲೇನನರಸುವೆ?
ನಂಬಿಯೂ ನಂಬದ ಡಂಬಕ ನಾನಯ್ಯಾ,
ಹಾವ ತೋರಿ ಹವಿಯ ಬೇಡುವಂತೆ-
ಕೂಡಲಸಂಗಮದೇವಾ. ॥ ೨೮೩ ॥

೨೮೪

ಕೆಲಕ್ಕೆ ಶುದ್ಧನಾದೆನಲ್ಲದೆ, ಎನ್ನ ಮನಕ್ಕೆ ಶುದ್ಧನಾಗೆನೇಕಯ್ಯಾ?
ಕೈಮುಟ್ಟಿ ಪೂಜಿಸುವಡೆ, ಎನ್ನ ಕೈ ಶುದ್ಧವಲ್ಲಯ್ಯಾ.
ಮನಮುಟ್ಟಿ ಪೂಜಿಸುವೊಡೆ, ಎನ್ನ ಮನ ಶುದ್ಧವಲ್ಲಯ್ಯಾ.
ಭಾವ ಶುದ್ಧವಾದಡೆ, ಕೂಡಲಸಂಗಯ್ಯನು
ಇತ್ತ ಬಾಯೆಂದತ್ತಿಕೊಳ್ಳನೇಕಯ್ಯಾ? ॥ ೨೮೪ ॥

೨೮೫

ಕುಲಮದಕ್ಕೆ ಹೋರಿ ಜಂಗಮಭೇದವ ಮಾಡುವೆ, ಫಲವೇನು?
ನಿತ್ಯಲಿಂಗಾರ್ಚನೆ ಪ್ರಾಯಶ್ಚಿತ್ತ.
ಛಲಮದಕ್ಕೆ ಹೋರಿ ಲಿಂಗಭೇದವ ಮಾಡುವೆ,
ಜಂಗುಳಿಯ ಕಾವ ಗೋವ ಹಲವು ಪಶುವ ನಿವಾರಿಸುವಂತೆ
ತನು ಭಕ್ತನಾಯಿತ್ತು, ಎನ್ನ ಮನ ಭವಿ
ಕೂಡಲಸಂಗಮದೇವಾ. ॥ ೨೮೫ ॥

೨೮೬

ಲಿಂಗದಲ್ಲಿ ಕಠಿಣವುಂಟೆ? ಜಂಗಮದಲ್ಲಿ ಕುಲವುಂಟೆ?
ಪ್ರಸಾದದಲ್ಲಿ ಆರುಚಿಯುಂಟೆ?
ಈ ತ್ರಿವಿಧದಲ್ಲಿ ಭಾವಭೇದವನರಸುವೆಸು,
ಕೂಡಲಸಂಗಮದೇವಾ, ಧಾ[ರಾ]ವಟ್ಟಲೆನ್ನ ಭಕ್ತಿ. ॥ ೨೮೬ ॥

೨೮೭

ಲೌಕಿಕರ ಕಂಡು ಆಡುವೆ, ಹಾಡುವೆ.
ತಾರ್ಕಿಕರ ಕಂಡು ಆಡುವೆ ಹಾಡುವೆ.
ಸಹಜಗುಣವೆನ್ನಲಿಲ್ಲಯ್ಯಾ, ನಿಜಭಕ್ತಿಯೆನಗಿಲ್ಲ, ತಂದೆ.
ಏಕೋಭಾವ ಎನಗುಳ್ಳಡೆ, ಏಕೆ ನೀ ಕರುಣಿಸೆ
ಕೂಡಲಸಂಗಮದೇವಾ. ॥ ೨೮೭ ॥

೨೮೮

ಓತಿ ಬೇಲಿವರಿವಂತೆ ಎನ್ನ ಮನವಯ್ಯಾ,
ಹೊತ್ತಿಗೊಂದು ಪರಿಯಪ್ಪ ಗೋಸುಂಬೆಯಂತೆನ್ನ ಮನವು,
ಬಾವುಲ ಬಾಳುವೆಯಂತೆನ್ನ ಮನವು.
ನಡುವಿರುಳಿದ್ದ ಕುರುಡಂಗೆ ಅಗುಸೆಯಲ್ಲಿ ಬೆಳಗಾದಂತೆ
ನಾನಿಲ್ಲದ ಭಕ್ತಿಯ ಬಯಸಿದಡುಂಟೆ
ಕೂಡಲಸಂಗಮದೇವಾ? ॥ ೨೮೮ ॥

೨೮೯

ಸತ್ಯಸಂಬಂಧ ಸಯವಾದ ಭೃತ್ಯಾಚಾರವೆನಗಿಲ್ಲವಯ್ಯಾ.
ಅನುದಿನ ನಿಮ್ಮ ನೆನೆಯಲು ಭಕ್ತಿಯಿಲ್ಲವಯ್ಯಾ ಎನಗೆ.
ಕೂಡಲಸಂಗಮದೇವಾ.
ಕರುಣೆ, ಕೃಪೆಯ ಮಾಡಯ್ಯಾ. ॥ ೨೮೯ ॥

೨೯೦

ಶಬ್ದಸಂಭಾಷಣೆಯ ನುಡಿಯ ವರ್ತಿಸಿ ನುಡಿವೆ,
ತೊಡಹದ ಕೆಲಸದ ಬಣ್ಣದಂತೆ
ಕಡಿಹಕ್ಕೆ ಒರೆಗೆ ಬಾರದು, ನೋಡಾ.
ಎನ್ನ ಮನದಲೊಂದು, ಹೃದಯದಲೊಂದು,
ವಚನದಲೊಂದು ನೋಡಾ.
ಕೂಡಲಸಂಗಮದೇವಾ,
ಆನು ಭಕ್ತನೆಂಬ ಹುಸಿಯ ಮಸಕವನೇನ ಬಣ್ಣಿಸುವೆನಯ್ಯಾ? ॥ ೨೯೦ ॥

೨೯೧

ಹಾಲ ತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು,
ತವರಾಜದ ನೊರೆ ತೆರೆಯಂತೆ ಆದ್ಯರ ವಚನವಿರಲು,
ಬೇರೆ ಬಾವಿಯ ತೋಡಿ, ಉಪ್ಪನೀರನುಂಬವನ ವಿಧಿಯಂತೆ
ಆಯಿತ್ತೆನ್ನ ಮತಿ, ಕೂಡಲಸಂಗಮದೇವಾ. ॥ ೨೯೧ ॥

೨೯೨

ಜನ್ಮ ಹೊಲ್ಲೆಂಬೆನೆ, ಜನ್ಮವ ಬಿಡಲಹೆನು.
ಭಕ್ತರೊಲವ ಪಡೆವೆನೆ, ಭಕ್ತಿಯ ಪಥವನರಿವೆನು.
ಲಿಂಗವೆಂದು ಬಲ್ಲೆನೆ, ಜಂಗಮವೆಂದು ಕಾಬೆನು.
ನಿಚ್ಚ ನಿಚ್ಚ ಶಿವರಾತ್ರಿಯ ಮಾಡಬಲ್ಲೆನೆ, ಕೈಲಾಸವ ಕಾಣಬಲ್ಲೆನು.
ಎನ್ನಲ್ಲಿ ನಡೆಯಿಲ್ಲಾಗಿ, ನಾನು ಭಕ್ತನೆಂತಹೆನಯ್ಯಾ,
ಕೂಡಲಸಂಗಮದೇವಾ? ॥ ೨೯೨ ॥

೨೯೩

ಉಡುವಿನ ಭಾವದಲ್ಲಿ ಹಡೆದರೆಮ್ಮವರು,
ಊಸರವಳ್ಳಿಯಂತೆ ಎನ್ನ ಇರವು,
ಬಾವುಲ ಬಾಳುವೆಯ ತೆರನಂತೆ!
ಹೊತ್ತಾರೆ ಎದ್ದ ಕುರುಡಂಗೆ
ಅಗುಸೆಯಲ್ಲಿ ಅಸ್ತಮಾನದಂತೆ–
ನಾನು ಭಕ್ತಿಯ ಬಯಸಿದಡಹುದೆ
ಕೂಡಲಸಂಗಮದೇವಾ? ॥ ೨೯೩ ॥

೨೯೪

ಬಸುರ ಬಾಳುವೆಗೆ,
ನಿಮ್ಮಲ್ಲಿ ಹುಸಿಯ ಹೊಸಿ ನೇರಿಲಹಣ್ಣ ಮಾರುವಂತೆ,
ಕಾಲ ಸಾಲ ದಾರಿದ್ರ್ಯಕ್ಕಂಜಿ ನಿಮ್ಮ ಮರೆಹೊಕ್ಕೆನಯ್ಯಾ.
ಆವುದ ಹುಸಿಯೆಂಬೆ? ಆವುದ ಕಿರಿದೆಂಬೆ?
ಇದ ನೀನೆ ಬಲ್ಲೆಯಯ್ಯಾ,
ಕೂಡಲಸಂಗಮದೇವಾ, ನಾನು ಉದರಪೋಷಕನಯ್ಯಾ. ॥ ೨೯೪ ॥

೨೯೫

ಮೂಗ ಕಂಡ ಕನಸಿನಂತಾಯಿತೆನ್ನ ಭಕ್ತಿ:
ಗುಣವ ಹೇಳಬಾರದಾರಿಗೆಯೂ, ಕೇಳಲೆಂತೂ ಬಾರದು.
ಎನ್ನ ಹೇಗತನವ ಮಾಣಿಸು, ಕೂಡಲಸಂಗಮದೇವಾ. ॥ ೨೯೫ ॥

೨೯೬

ಕಾಣೆಯ ಲೋಭ ಕೋಟಿಯ ಲಾಭವ ಕೆಡಿಸಿದುವ ನಾನರಿಯೆನಯ್ಯಾ.
ಭಕ್ತಿಯ ಕುಳವನರಿಯದೆ ಮತಿಗೆಟ್ಟ ಪರಿಯ ನಾನರಿಯೆನಯ್ಯಾ.
ಕೂಡಲಸಂಗನ ಶರಣರ ಸಂಗದಿಂದ ಅರಿದಡೆ
ನಾನು ಬದುಕುವೆನಯ್ಯಾ. ॥ ೨೯೬ ॥

೨೯೭

ಏನನೋದಿ, ಏನ ಕೇಳಿ, ಏನ ಮಾಡಿಯೂ ಫಲವೇನು,
ನಿಮ್ಮವರೊಲಿಯದನ್ನಕ್ಕ?
ಶಿವ ಶಿವ, ಮಹಾದೇವಾ,
ಬಾಳಿಲ್ಲದವಳ ಓಲೆಯಂತಾಯಿತ್ತೆನಗೆ,
ಕೂಡಲಸಂಗಮದೇವಾ. ॥ ೨೯೭ ॥

೨೯೮

ಮುನ್ನೂರರುವತ್ತು ದಿನ ಶ್ರವವ ಮಾಡಿ,
ಕಳನೇರಿ ಕೈಮರೆದಂತಾಯಿತ್ತೆನ್ನ ಭಕ್ತಿ.
ಎನಿಸು ಕಾಲ ಲಿಂಗಾರ್ಚನೆಯ ಮಾಡಿ,
ಏವೆನಯ್ಯಾ ಮನದಲ್ಲಿ ದೃಢವಿಲ್ಲದನ್ನಕ್ಕ?
ಕೊಡನ ತುಂಬಿದ ಹಾಲ ಕೆಡಹಿ,
ಉಡುಗಲೆನ್ನಳವೆ, ಕೂಡಲಸಂಗಮದೇವಾ? ॥ ೨೯೮ ॥

೨೯೯

ಶಬ್ದಸುಖಕ್ಕೆ ಮಚ್ಚಿ, ಮಾತಿಂಗೆ ಮಾತನೆ ಕೊಟ್ಟು, ಕೆಟ್ಟೆನಯ್ಯಾ!
ಅನುಭಾವ ಅಕ್ಕವೆಯಾಗದೆ, ಬಿಬ್ಬನೆ ಬಿರಿದೆನಯ್ಯಾ!
ಅಮೃತದ ಕೊಡನ ತುಂಬಿ, ಒಡೆಯ ಹೊಯ್ದು, ಅರಸಬುಂಟೇ?
ಸ್ವಾಮಿಭೃತ್ಯಸಂಬಂಧವೇ ಎನ್ನ ಭಕ್ತಿ.
ಪ್ರತ್ಯುತ್ತರ ನಾಯಕನರಕ ಕೂಡಲಸಂಗಮದೇವಾ. ॥ ೨೯೯ ॥

೩೦೦

ಅಂಕವೋಡಿದಡೆ ತೆತ್ತಿಗಂಗೆ ಭಂಗವಯ್ಯಾ,
ಕಾದಿ ಗೆಲಿಸಯ್ಯಾ ಎನ್ನನು.
ಕಾದಿ ಗೆಲಿಸಯ್ಯಾ ಕೂಡಲಸಂಗಮದೇವಯ್ಯಾ,
ಎನ್ನ ತನು ಮನ ಧನದಲ್ಲಿ ವಂಚನೆಯಿಲ್ಲದೆ. ॥ ೩೦೦ ॥

೩೦೧

ಹೇಡಿ ಬಿರಿದ ಕಟ್ಟಿದಂತೆ ಆಯಿತೆನ್ನ ವೇಷ :
ಕಾದಬೇಕು, ಕಾದುವಡೆ ಮನವಿಲ್ಲ–
ಆಗಳೆ ಹೋಯಿತ್ತು ಬಿರಿದು,
ಹಗರಣ ನಗೆಗೆಡೆಯಾಯಿತ್ತು.
ಮಾರೇಕ ಜಂಗಮ ಮನೆಗೆ ಬಂದಡೆ
ಕಾಣದಂತಡ್ಡ ಮುಸುಡಿಟ್ಟಡೆ
ಕೂಡಲಸಂಗಮದೇವ ಜಾಣ, ಹಲುದೋರೆ ಮೂಗಕೊಯ್ವ. ॥ ೩೦೧ ॥

೩೦೨

ಅಚ್ಚ ಶರಣರು ನಿಮ್ಮ ನಿಚ್ಚ ನೆನೆವರು,
ಬಚ್ಚ ಬರಿಯ ಮಾತನಾಡುವೆನು.
ಒಪ್ಪಚ್ಚಿ ಅರೆಭಕ್ತಿ, ನೆನೆಯಲೀಯದು ನಿಮ್ಮ.
ಮೆಚ್ಚರು ನಿಮ್ಮವರು ಎನ್ನನು ಕೂಡಲಸಂಗಮದೇವಾ. ॥ ೩೦೨ ॥

೩೦೩

ಆಡುವುದಳವಟ್ಟಿತ್ತು, ಹಾಡುವುದಳವಟ್ಟಿತ್ತು,
ಅರ್ಚನೆಯುಳವಟ್ಟಿತ್ತು, ಪೂಜನೆಯುಳವಟ್ಟಿತ್ತು,
ನಿತ್ಯಲಿಂಗಾರ್ಚನೆ ಮುನ್ನವೆಯುವಳವಟ್ಟಿತ್ತು.
ಕೂಡಲಸಂಗನ ಶರಣರು ಬಂದಡೆ,
ಏಗುವುದು, ಏ ಬೆಸನೆಂಬುದು ಒಪ್ಪಚ್ಚಿ ಅಳವಡದು. ॥ ೩೦೩ ॥

೩೦೪

ಒಡೆಯರಿಗೆ ಒಡವೆಯನೊಪ್ಪಿಸಲಾರದೆ
ಮೊರೆಯಿಡುವ ಮನವ ನಾನೇನೆಂಬೆ?
ನೆತ್ತಿಯಲ್ಲಿ ಅಲಗ ತಿರುಪುವಂತಪ್ಪ
ವೇದನೆಯಹುದೆನಗೆ.

ಕೊಯ್ದ ಮೂಗಿಂಗೆ ಕನ್ನಡಿಯ ತೋರುವಂತಪ್ಪ
ವೇದನೆಯುಹುದೆನಗೆ.
ಬೆಂದ ಹುಣ್ಣ ಕಂಬಿಯಲ್ಲಿ ಕೀಸುವಂತಪ್ಪ
ವೇದನೆಯುಹುದೆನಗೆ.
ಕೂಡಲಸಂಗಮವೇ[ವಾ] ನೀ ಮಾಡಿ ನೋಡುವ ಹಗರಣವ
ನಾ ಮಾಡಿಹೆನೆಂದಡೆ, ಮನಕ್ಕೆ ಮನ ನಾಚದೆ ಅಯ್ಯಾ? || ೩೦೪ ||

೩೦೫

ಹೊರಿಸಿಕೊಂಡು ಹೋದ ನಾಯಿ, ಮೊಲನನೇನ ಹಿಡಿವುದಯ್ಯಾ?
ಇರಿಯದ ವೀರ, ಇಲ್ಲದ ಸೊಬಗುವ ಹೇಳುವುದೆ ನಾಚಿಕೆ.
ಆನು ಭಕ್ತನೆಂತೆಂಬೆನಯ್ಯಾ, ಕೂಡಲಸಂಗಮದೇವಾ? || ೩೦೫ ||

೩೦೬

ಎನ್ನ ಭಕ್ತನೆಂದೆಂಬರು:
ಎನ್ನ ಹೊರಹಂಚಿ, ಒಳಬೊಳ್ಳಿತನವನರಿಯರಾಗಿ.
ಎನ್ನ ಮಾನಾಪಮಾನವೂ ಶರಣರಲ್ಲಿ, ಜಾತಿವಿಜಾತಿಯೂ ಶರಣರಲ್ಲಿ,
ತನುಮನಧನ[ವೂ] ಶರಣರಲ್ಲಿ. ವಂಚನೆಯುಳ್ಳ ಡಂಭಕ ನಾನು.
ತಲೆಯೊಡೆಯಂಗೆ ಕಣ್ಣ ಬೈಚಿಡುವೆ ಕೂಡಲಸಂಗಮದೇವಾ. || ೩೦೬ ||

೩೦೭

ನೋಡುವರುಳ್ಳಡೆ ಮಾಡುವೆ ದೇಹಾರವ.
ಎನಗೊಂದು ನಿಜವಿಲ್ಲ, ಎನಗೊಂದು ನಿಷ್ಪತ್ತಿಯಿಲ್ಲ.
ಲಿಂಗವ ತೋರಿ ಉದರವ ಹೊರೆವ ಭಂಗಗಾರ ನಾನು,
ಕೂಡಲಸಂಗಮದೇವಾ. || ೩೦೭ ||

೩೦೮

ಭಕ್ತಿ ಎಳ್ಳನಿತಿಲ್ಲ, ಯುಕ್ತಿಶೂನ್ಯನಯ್ಯಾ ನಾನು.
ತನುವಂಚಕ, ಮನವಂಚಕ, ಧನವಂಚಕ ನಾನಯ್ಯಾ.
ಕೂಡಲಸಂಗಮದೇವಾ, ಒಳಲೊಟ್ಟೆ ಎನ್ನ ಮಾತು. || ೩೦೮ ||

೩೦೯

ತನು ನಿಮ್ಮದೆಂಬೆ, ಮನ ನಿಮ್ಮದೆಂಬೆ, ಧನ ನಿಮ್ಮದೆಂಬೆ,
ಮತ್ತೆಯೂ ವಂಚನೆ ಮಾಣದಯ್ಯಾ.
ಲಿಂಗ ಜಂಗಮವೆಂಬೆ, ಜಂಗಮ ಲಿಂಗವೆಂಬೆ,
ಮತ್ತೆಯೂ ವಂಚನೆ ಮಾಣದಯ್ಯಾ.
ಒಡಲೊಡವೆ ಹಡೆದರ್ಥ ನಿಮ್ಮದೆಂದರಿಯದೆ
ಕೆಮ್ಮನೆ ಕೆಟ್ಟೆ, ಕೂಡಲಸಂಗಮದೇವಾ. || ೩೦೯ ||

೩೧೦

ಊರ ಸೀರೆಗೆ ಅಸಗ ಬಡಿ ಹಡೆದಂತೆ
ಹೊನ್ನೆನ್ನದು, ಹೆಣ್ಣೆನ್ನದು, ಮಣ್ಣೆನ್ನದು ಎಂದು ಮರುಳಾದೆ.
ನಿಮ್ಮನರಿಯದ ಕಾರಣ ಕೆಮ್ಮನೆ ಕೆಟ್ಟೆ,
ಕೂಡಲಸಂಗಮದೇವಾ. || ೩೧೦ ||

೩೧೧

ಅರ್ಥಪ್ರಾಣಾಭಿಮಾನ ನಿಮ್ಮದೆಂಬೆ,
ಮತ್ತೆಯೂ ಆಸೆ ಬಿಡದನ್ನಕ್ಕ ಭಕ್ತನೆಂತಪ್ಪೆನಯ್ಯಾ?
ಶರಣನೆಂತೆನಿಸುವೆನಯ್ಯಾ,
ಕೂಡಲಸಂಗನ ಶರಣರ ಸಕಲರತಿಗೆ ಸಲ್ಲವನ್ನಕ್ಕ? || ೩೧೧ ||

೩೧೨

ನಿಮ್ಮ ಭಕ್ತಿಯಲ್ಲಿ ಧರಧುರನೆಂಬೆ.
ದಿಟಕ್ಕೆ ಬಂದಡೆ ಅಡ್ಡ ಮುಖವನಿಕ್ಕುವೆ-
ಗರುಡಂಗೆ ಘಟಸರ್ಪನ ತೋರುವಂತೆ!
ಶಿವಶರಣೆಂದಡೆ ಕಿವಿ ಕೇಳದಂತಿಹೆನು,
ಮನಕ್ಕೆ ಮನವೇ ಸಾಕ್ಷಿಯಯ್ಯಾ, ಕೂಡಲಸಂಗಮದೇವಾ. || ೩೧೨ ||

೩೧೩

ಆದ್ಯರ ವಚನ ಪರುಷವೆಂಬೆನು,
ಆ ಪರುಷವೆನಗೆಂತು ದೊರೆಕೊಂಬುದಯ್ಯಾ?
ತನು ಮನ ಧನವ ವಿವರಿಸಿ ನುಡಿವೆ
ಸೋಂಕಿಂಗೆ ಸೈರಿಸಲಾರೆ.

ಹೊಲೆಯರ ಮದ್ದಳೆಯಂತೆ ನುಡಿವ ಡಂಬಕ ನಾನಯ್ಯಾ,
ಕೂಡಲಸಂಗಮದೇವಾ. ॥ ೩೧೩ ॥

೩೧೪

ಕಾಂಚನವೆಂಬ ನಾಯ ನಚ್ಚಿ ನಿಮ್ಮ ನಾನು ಮರೆವೆನಯ್ಯಾ.
ಕಾಂಚನಕ್ಕೆ ವೇಳೆಯಲ್ಲದೆ ಲಿಂಗಕ್ಕೆ ವೇಳೆ[ಯ]ಲ್ಲ.
ಪಡಿಕೆಗೆ ಮಚ್ಚಿದ ಸೊಣಗ
ಅಮೃತದ ರುಚಿಯ ಬಲ್ಲುದೆ ಕೂಡಲಸಂಗಮದೇವಾ? ॥ ೩೧೪ ॥

೩೧೫

ಒಲಿದ ಗಂಡನೊಮ್ಮೆ ಒಲ್ಲದಿಪ್ಪ ಕಂಡವ್ವಾ.
ತಪ್ಪೆನ್ನದು, ತಪ್ಪೆನ್ನದು!
ತನು ಮನ ಧನದಲ್ಲಿ ಮಾಟಕೂಟವೆಂದರಿಯದ
ತಪ್ಪೆನ್ನದು, ತಪ್ಪೆನ್ನದು!
ಕಪೆಯಿಲ್ಲದ ಹುಸಿ ಎನ್ನದು, ಕೂಡಲಸಂಗಮದೇವಾ. ॥ ೩೧೫ ॥

೩೧೬

ಕಾಣುತ್ತ ಕಡೆಗಣಿಸಿ, ಕೆಡಿಸಿ, ಅರಸುವ ಮತಿಭ್ರಷ್ಟ ನಾನು ಲಿಂಗಯ್ಯಾ.
ತನುಲೋಭ ಮನಲೋಭ ಧನಲೋಭ ಮುಂದುಗೆಡಿಸಿ ಕಾಡಿಪವೆನ್ನ.
ತನು ಮನ ಧನವ ನಿವೇದಿಸಿದವರ ಮನೆಯ ಮಗ ನಾನಯ್ಯಾ,
ಕೂಡಲಸಂಗಮದೇವಾ. ॥ ೩೧೬ ॥

೩೧೭

ಹಗಹದಲ್ಲಿ ಬಿದ್ದವರ ಮೇಲೆ ಒರಳನೂಕುವರೆ?
ಕೋಳದ ಮೇಲೆ ಸಂಕೋಲೆಯನಿಕ್ಕುವರೆ?
ಬೆಂದ ಹುಣ್ಣ ಕಂಬಿಯಲ್ಲಿ ಕೀಸುವರೆ?
ಕೂಡಲಸಂಗಯ್ಯ ಕಾಡುವ ಕಾಟ
ಸಿರಿಯಾಳಂಗಲ್ಲದೆ ಸೈರಿಸಬಹುದೆ? ॥ ೩೧೭ ॥

೩೧೮

ಸೋಲಬಲ್ಲರು ಅವರು, ಗೆಲಲರಿಯರಯ್ಯಾ.
ತನು ಮನ ಧನದಲ್ಲಿ ವಂಚನೆಯನರಿಯರಯ್ಯಾ, ದಾಸ ಸಿರಿಯಾಳನವರು.
ಕೂಡಲಸಂಗನ ಶರಣರು ಉಪಚಾರವನರಿಯರಯ್ಯಾ. ॥ ೩೧೮ ॥

೩೧೯

ಮಾತಿನಲ್ಲಿ ಶ್ರೋತ್ರಸುಖವ ನುಡಿಯಬಹುದಲ್ಲದೆ
ಮಾಡುವ ಸತ್ಕ್ರಿಯೆಯಿಂದ ಭಕ್ತನೆನಿಸಲು ಬಾರದು.
ಅರ್ಥಪ್ರಾಣಾಭಿಮಾನವಾರಿಗೆಯೂ ಸಮನಿಸದು
ಲಿಂಗಮುಖದಲುದಯವಾದ ಶರಣಂಗಲ್ಲದೆ ಅಯ್ಯಾ.
ಕೂಡಲಸಂಗನ ಶರಣರ ಭಕ್ತಿಭಂಡಾರವು
ಎನಗೆಂತು ಸಾಧ್ಯವಪ್ಪುದು, ಹೇಳೆನ್ನ ತಂದೆ. || ೩೧೯ ||

೩೨೦

ಬಾಣ ಮಯೂರನಂತೆ ಬಣ್ಣಿಸಬಲ್ಲೆನೆ?
ಸಿರಿಯಾಳನಂತೆ ಉಣಲಿಕ್ಕಬಲ್ಲೆನೆ?
ದಾಸಿಮಯ್ಯನಂತೆ ಉಡಕೊಡಬಲ್ಲೆನೆ?
ಉಂಡು ಉಟ್ಟು, ಕೊಟ್ಟಡೆ ಮುಯ್ಯಿಗೆ ಮುಯ್ಯೆನಿಸಿತ್ತು,
ಎನಗೆ ಕೊಟ್ಟಡೆ ಧರ್ಮವೆನಿಸಿತ್ತು,
ಕೂಡಲಸಂಗಮದೇವಾ. || ೩೨೦ ||

೩೨೧

ದಾಸಿದೇವ ತನ್ನ ವಸ್ತ್ರವನಿತ್ತು ತವನಿಧಿಯ ಪ್ರಸಾದವ ಪಡೆದ.
ಸಿರಿಯಾಳ ತನ್ನ ಮಗನನಿತ್ತು ಪ್ರಾಣಪ್ರಸಾದವ ಪಡೆದ.
ಬಲ್ಲಾಳದೇವ ತನ್ನ ವಧುವನಿತ್ತು ಸಮತೆಪ್ರಸಾದವ ಪಡೆದ.
ಇವರೆಲ್ಲರೂ ತಮತಮಗೆ ಮಾಡಿ ಪಡೆದರು ಸಮ್ಯಕ್‌ಪದವಿಯನು.
ನಾನೇನನೂ ಅರಿಯದ ಭಕ್ತಿಯ ಬಡವಂಗೆ ಕರುಣಿಸು
ಕೂಡಲಸಂಗಮದೇವಾ. || ೩೨೧ ||

೩೨೨

ತ್ರಿವಿಧ ತ್ರಿವಿಧದಲ್ಲಿ ತಪ್ಪಿದ ತಪ್ಪುಕ ನಾನಯ್ಯಾ,
ಒಮ್ಮಿಂಗೆ ಕರುಣಿಸಯ್ಯಾ.
ಇದನರಿದು ಇನ್ನು ತಪ್ಪಿದೆನಾದಡೆ
ನೀವು ಮಾಡಿತ್ತೆ ಸಲುವುದು, ಕೂಡಲಸಂಗಮದೇವಾ. || ೩೨೨ ||

೩೨೩

ಎನ್ನ ತಪ್ಪು ಅನಂತಕೋಟಿ, ನಿಮ್ಮ ಸೈರಣೆಗೆ ಲೆಕ್ಕವಿಲ್ಲ,
ಇನ್ನು ತಪ್ಪಿದೆನಾದಡೆ ನಿಮ್ಮ ಪಾದವೆ ದಿಬ್ಯ.
ಕೂಡಲಸಂಗಮದೇವಯ್ಯಾ,
ನಿಮ್ಮ ಪ್ರಮಥರ ಮುಂದೆ ಕಿನ್ನರ ಬೊಮ್ಮಣ್ಣ ಸಾಕ್ಷಿ. || ೩೨೩ ||

೩೨೪

ಅಡಿಗಡಿಗೆ ಎನ್ನ ಮನವ ಜಡಿದು ನೋಡದಿರಯ್ಯಾ.
ಬಡವನೆಂದೆನ್ನ ಕಾಡದಿರಯ್ಯಾ.
ಎನಗೆ ಒಡೆಯರುಂಟು ಕೂಡಲಸಂಗನ ಶರಣರು. || ೩೨೪ ||

೩೨೫

ಭಕ್ತಿವಿಶೇಷವ ಮಾಡುವಡೆ ಹತ್ತು ಬೆರಳುಂಟು,
ಹಾಸಿ ದುಡಿವಡೆ ತನಗುಂಟು, ತನ್ನ ಪ್ರಮಥರಿಗುಂಟು.
ಮಾರಿತಂದೆಗಳಂತೆ ಎನಗೇಕಹುದಯ್ಯಾ?
ರತ್ನದ ಸಂಕಲೆಯನಿಕ್ಕಿ ಕಾಡಿಹ ಕೂಡಲಸಂಗಮದೇವ,
ಶಿವಧೋ ಶಿವಧೋ! || ೩೨೫ ||

೩೨೬

ಮನೆ ನೋಡಾ ಬಡವರು: ಮನ ನೋಡಾ ಘನ.
ಸೋಂಕಿನಲ್ಲಿ ಶುಚಿ : ಸರ್ವಾಂಗ ಕಲಿಗಳು.
ಪಸರಕ್ಕನುವಿಲ್ಲ: ಬಂದ ತತ್ಕಾಲಕೆ ಉಂಟು,
ಕೂಡಲಸಂಗನ ಶರಣರು ಸ್ವತಂತ್ರಧೀರರು. || ೩೨೬ ||

೩೨೭

ತತ್ವವನರಿದೆಹೆನೆಂದು ಮೃತ್ಯುವ ಕರೆಕೊಂಡೆನಯ್ಯಾ.
ನಾನೆತ್ತ ಬಲ್ಲೆ ನಿಮ್ಮ ಶರಣರಂತುವನು?
ನಾನೆತ್ತ ಬಲ್ಲೆ ನಿಮ್ಮ ಪ್ರಮಥರಂತುವನು?
ಸರ್ವಾಪರಾಧಿ ನಾನು.
ಎನ್ನ ಮನದ ಕೊನೆಯ ಸೂತಕ ಹಿಂಗದು,
ಕೂಡಲಸಂಗಮದೇವಾ. || ೩೨೭ ||

೩೨೮

ಆ ಮಿಹಿಲಾಳು ಭೋಜ ದೇವುಲಾಳು.
ಆನು ಸೂಳೆ, ನಮ್ಮಕ್ಕ ಸೂಳೆ.
ಬೆಳ್ಳಿಗೆಯಾವಿನ ಕರುವೆಂದಡೆ ಬಳ್ಳವಾಲ ಕರೆವುದೆ?
ಕೂಡಲಸಂಗನ ಶರಣರ ಮುಂದೆ ನಾನು ಕಾದಿಹೆ, ಬಾ ಬಸಿಲೆ. || ೩೨೮ ||

೩೨೯

ಆನೆಯೂ ಆ ದಾರಿಯಲ್ಲಿ ಹೋಯಿತ್ತೆಂದಡೆ,
ಆಡೂ ಆ ದಾರಿಯಲ್ಲಿ ಹೋಯಿತ್ತೆನ್ನಬಹುದೆ?
ಸಂಗನ ಶರಣರಿಗೆ ಆನು ಸರಿಯೆಂದು ಗಳಹಲಿಬಹುವೆ?
ಜಂಗಮಕ್ಕೆ ಮಾಡುವ ಭಕ್ತರಿಗೆ ಆನು ಸರಿಯೆ
ಹೇಳಾ, ಕೂಡಲಸಂಗಮದೇವಾ? || ೩೨೯ ||

೩೩೦

ಆ ಕರಿಯಾಕೃತಿಯ ಸೂಕರನ ಪೋಲಿಸಿದಡೆ
ಆ ಕರಿಯಾಗಲರಿವುದೆ?
ಭೂನಾಗನಾಕೃತಿಯುನು ವ್ಯಾಳೇಶನ ಹೋಲಿಸಿದಡೆ
ವ್ಯಾಳೇಶನಾಗಲರಿವುದೆ?
ನಾನು ಭಕ್ತನಾದಡೇನಯ್ಯಾ,
ನಮ್ಮ ಕೂಡಲಸಂಗಮದೇವನ ಸದ್ಭಕ್ತರ ಹೋಲಲರಿವೆನೆ? || ೩೩೦ ||

೩೩೧

ಮೋಟನ ಮೌಳಿ, ಮೂಕೊರತಿಯ ಶೃಂಗಾರ,
ಬೇಟ ಕುರುಡಂಗೆ ನಗೆಗೆಡೆಯಾಯಿತ್ತು.
ನಮ್ಮ ಕೂಡಲಸಂಗನ ಶರಣರ ಮುಂದೆ
ನಾನು ಭಕ್ತನೆಂಬ ನಾಚಿಕ್ಕೆ ಸಾಲದೆ? || ೩೩೧ ||

೩೩೨

ಮೂಗಿಲ್ಲದ ಮುಖಕ್ಕೆ ಶೃಂಗಾರವೆ?
ವಿಕೃತವೇಷಧಾರಿಯಾನು, ಭಂಡನು! ಲಜ್ಜೆಭಂಡನು!
ಕೂಡಲಸಂಗನ ಶರಣರಲ್ಲಿ
ಹಾವ ತೋರಿ ಹವಿಯ ಬೇಡುವಂತೆ. || ೩೩೨ ||

೩೩೩

ಮಾವಿನಕಾಯೊಳಗೆ ಒಂದು ಎಕ್ಕೆಯ ಕಾಯಿ ನಾನಯ್ಯಾ.
ಆನು ಭಕ್ತನೆಂತೆಂಬೆ, ನಿಮ್ಮ ಶರಣರ ಮುಂದೆ ನಾಚಿಕೆಯಿಲ್ಲವೆ?
ಕೂಡಲಸಂಗನ ಶರಣರ ಮುಂದೆ ನಾನೆಂತು ಭಕ್ತನಪ್ಪೆನಯ್ಯಾ? || ೩೩೩ ||

೩೩೪

ಮರದ ನೆಳಲಲಿದ್ದು ತನ್ನ ನೆಳಲನರಸಬಹುದೆ?
ನಿಮ್ಮ ಶರಣರ ಮುಂದೆ ನಾನೇತರ ಭಕ್ತನಯ್ಯಾ?
ನಿಮ್ಮ ಶರಣರ ಮುಂದೆ ನಾನೇತರ ಯುಕ್ತನಯ್ಯಾ?
ಆನು ಭಕ್ತನೆಂಬ ನುಡಿ ಸುಡದೆ, ಕೂಡಲಸಂಗಮದೇವಾ? || ೩೩೪ ||

೩೩೫

ಎನ್ನಿಂದ ಕಿರಿಯರಿಲ್ಲ, ಶಿವಭಕ್ತರಿಂದ ಹಿರಿಯರಿಲ್ಲ.
ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ.
ಕೂಡಲಸಂಗಮದೇವಾ, ಎನಗಿದೇ ದಿಬ್ಯ. || ೩೩೫ ||

೩೩೬

ಆನು ಭಕ್ತನಲ್ಲಯ್ಯಾ, ಆನು ವೇಷಧಾರಿಯಯ್ಯಾ.
ಕಾಟುಗ, ಕೇತುಗ, ಪೋಲುಗ ಎಂಬುದು ಎನ್ನ ಹೆಸರು.
ಕೂಡಲಸಂಗಮದೇವಾ ನಿಮ್ಮ ಶರಣರ ಮನೆಯ ಮಗ ನಾನಯ್ಯಾ. || ೩೩೬ ||

೩೩೭

ಡಂಬೂ ಡಳುಹೂ ಎನ್ನದಯ್ಯಾ, ಡಂಬಕನೆಂಬವ ನಾನಯ್ಯಾ.
ನಿಮ್ಮ ನಂಬಿದ ಶರಣರ [ನಂಬದ] ಡಿಂಗರಿಗ ನಾನು,
ಕೂಡಲಸಂಗಮದೇವಾ. || ೩೩೭ ||

೩೩೮

ಚೆನ್ನ ಚೇರಮನ ಬಂಟ ನಾನಯ್ಯಾ,
ಎನ್ನ ಚಾಗುಬೊಲ್ಲನ ಕಾವ ಗೋವನೆಂಬರು.
ಕೂಡಲಸಂಗನ ಶರಣರೊಡೆಯರಾಗಿ
ತಮ್ಮ ತೊತ್ತಿನ ಮಗನೆಂದು ಒಲಿದಂತೆ ನುಡಿವರು. || ೩೩೮ ||

೩೩೯

ಕಾಲಲೊದೆದು ಬಡಿದು ಜಡಿವರಯ್ಯಾ, ಭಕ್ತಿಯೆಯ್ದದೆಂದೆನ್ನ.
ಜರೆವರಯ್ಯಾ, ನುಡಿವರಯ್ಯಾ,
ಕೂಡಲಸಂಗನ ಶರಣರೊಡೆಯರಾಗಿ. ॥ ೩೩೯ ॥

೩೪೦

ನಡೆವರಯ್ಯಾ ಒಡೆಯರು ತನು-ಮ-ಧನದ ಮೇಲೆ,
ನುಡಿವರಯ್ಯಾ ಒಂದು ನಿಮಿಷ ಬಾರದಿರ್ದಡೆ,
ಜರೆವರಯ್ಯಾ ಒಡೆಯರು ಮನಬಂದ ಪರಿಯಲು.
ಶಿವ ಶಿವಾ! ಅಣೆವರಯ್ಯಾ ಮುಂಡೆಯನೂರಿ.
ಪ್ರಾಣದ ಒಡೆಯರಯ್ಯಾ,
ಕೂಡಲಸಂಗಮದೇವಾ, ನಿಮ್ಮ ಶರಣರು. ॥ ೩೪೦ ॥

೩೪೧

ಅರ್ಥ ಪ್ರಾಣ ಅಭಿಮಾನಕ್ಕೆ ಒಡೆಯರು ಸದ್‌ಭಕ್ತರಲ್ಲದೆ
ಎನಗಾರೂ ಇಲ್ಲಯ್ಯಾ.
'ಭೃತ್ಯಾಪರಾಧಃ ಸ್ವಾಮಿನೋ ದಂಡಃ'
ಕೂಡಲಸಂಗಮದೇವಾ, ನೀವೇ ಪ್ರಮಾಣು. ॥ ೩೪೧ ॥

೩೪೨

ಅರ್ಚಿಸಲರಿಯೆ, ಪೂಜಿಸಲರಿಯೆ,
ನಿಚ್ಚ ಶಿವರಾತ್ರಿಯ ನಾ ಮಾಡಲರಿಯೆ.
ಕಪ್ಪಡಿವೇಷದಿಂದಾನು ಬಂದಾಡುವೆ, ಕಪ್ಪಡಿವೇಷದಿಂದ.
ಈಶ ನಾ ನಿಮ್ಮ ದಾಸರ ದಾಸಿಯ ದಾಸನಯ್ಯಾ,
ನಿಮ್ಮ ವೇಷಧಾರಿಯ ಮನೆಯ ಪಂಗುಳ ನಾನಯ್ಯಾ,
ಕೂಡಲಸಂಗಮದೇವಾ
ನಿಮ್ಮ ಲಾಂಛನ ಧರಿಸಿಪ್ಪ ಉದರಪೋಷಕ ನಾನಯ್ಯಾ. ॥ ೩೪೨ ॥

೩೪೩

ಅಪ್ಪನು ಡೋಹರ ಕಕ್ಕಯ್ಯನಾಗಿ,
ಮುತ್ತಯ್ಯ ಚೆನ್ನಯ್ಯನಾದರೆ ಆನು ಬದುಕೆನೆ?
ಮುತ್ತಾತ ಶ್ವಪಚಯ್ಯನ ಸನ್ನಿಧಿಯಿಂದ

ಭಕ್ತಿಯ ಸದ್‌ಗುಣವ ನಾನು ಅರಿವೆನಯ್ಯಾ.
ಕಷ್ಟಜಾತಿ ಜನ್ಮದಲಿ ಜನಿಯಿಸಿದೆ ಎನ್ನ,
ಎನಗಿದು ವಿಧಿಯೆ ಕೂಡಲಸಂಗಮದೇವಾ? || ೩೪೩ ||

೩೪೪

ಉತ್ತಮಕುಲದಲ್ಲಿ ಹುಟ್ಟಿದೆನೆಂಬ
ಕಷ್ಟತನದ ಹೊರೆಯ ಹೊರಿಸದಿರಯ್ಯಾ.
ಕಕ್ಕಯ್ಯನೊಕ್ಕುದನಿಕ್ಕ ನೋಡಯ್ಯಾ,
ದಾಸಯ್ಯ ಶಿವದಾನವನೆರೆಯ ನೋಡಯ್ಯಾ,
ಮನ್ನಣೆಯ ಚೆನ್ನಯ್ಯನೆನ್ನುವ ಮನ್ನಿಸ.
ಉನ್ನತ ಮಹಿಮ,
ಕೂಡಲಸಂಗಮದೇವಾ, ಶಿವಧೋ ಶಿವಧೋ! || ೩೪೪ ||

೩೪೫

ಸೆಟ್ಟಿಯೆಂದೆನೆ ಸಿರಿಯಾಳನ?
ಮಡಿವಾಳನೆಂಬೆನೆ ಮಾಚಯ್ಯನ?
ಡೋಹರನೆಂಬೆನೆ ಕಕ್ಕಯ್ಯನ?
ಮಾದಾರನೆಂಬೆನೆ ಚೆನ್ನಯ್ಯನ?
ಆನು ಹಾರುವನೆಂದಡೆ ಕೂಡಲಸಂಗಯ್ಯ ನಗುವನಯ್ಯಾ. || ೩೪೫ ||

೩೪೬

ಚೆನ್ನಯ್ಯನ ಮನೆಯ ದಾಸನ ಮಗನು
ಕಕ್ಕಯ್ಯನ ಮನೆಯ ದಾಸಿಯ ಮಗಳು,
ಇವರಿಬ್ಬರು ಹೊಲದಲು ಬೆರಣಿಗೆ ಹೋಗಿ, ಸಂಗವ ಮಾಡಿದರು.
ಇವರಿಬ್ಬರಿಗೆ ಹುಟ್ಟಿದ ಮಗ ನಾನು,
ಕೂಡಲಸಂಗಮದೇವ ಸಾಕ್ಷಿಯಾಗಿ. || ೩೪೬ ||

೩೪೭

ಸೂಳೆಗೆ ಹುಟ್ಟಿದ ಕೂಸಿನಂತೆ
ಆರನಾದಡೆಯೂ 'ಅಯ್ಯಾ, ಅಯ್ಯಾ' ಎನಲಾರೆ.
ಚೆನ್ನಯ್ಯನೆಮ್ಮಯ್ಯನು, ಚೆನ್ನಯ್ಯನ ಮಗ ನಾನು.

ಕೂಡಲಸಂಗನ ಮಹಾಮನೆಯಲಿ
ಧರ್ಮಸಂತಾನಿ ಭಂಡಾರಿ ಬಸವಣ್ಣನು. || ೩೪೭ ||

೩೪೮

ಹರನು ಮೂಲಿಗನಾಗಿ, ಪುರಾತರೊಳಗಾಗಿ,
ಬಳಿ ಬಳಿಯಲು ಬಂದ ಮಾದಾರನ ಮಗ ನಾನಯ್ಯಾ.
ಕಳಿದ ಹೊಲೆಯನೆಮ್ಮಯ್ಯ, ಜಾತಿಸೂತಕ.
ಮಾದಾರನ ಮಗ ನಾನಯ್ಯಾ.
ಪನ್ನಗಭೂಷಣ ಕೂಡಲಸಂಗಯ್ಯಾ,
ಚೆನ್ನಯ್ಯನೆನ್ನ ಮುತ್ತಯ್ಯನಜ್ಜನಪ್ಪನಯ್ಯಾ. || ೩೪೮ ||

೩೪೯

ಅಪ್ಪನು ನಮ್ಮ ಮಾದಾರ ಚೆನ್ನಯ್ಯ,
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ,
ಚಿಕ್ಕಯ್ಯನೆಮ್ಮಯ್ಯ ಕಾಣಯ್ಯ,
ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ,
ಎನ್ನನೇತಕ್ಕರಿಯಿರಿ, ಕೂಡಲಸಂಗಯ್ಯಾ? || ೩೪೯ ||

೩೫೦

ಭಕ್ತಿಯಿಲ್ಲದ ಬಡವ ನಾನಯ್ಯಾ:
ಕಕ್ಕಯ್ಯನ ಮನೆಯಲ್ಲೂ ಬೇಡಿದೆ,
ಚೆನ್ನಯ್ಯನ ಮನೆಯಲ್ಲೂ ಬೇಡಿದೆ,
ದಾಸಯ್ಯನ ಮನೆಯಲ್ಲೂ ಬೇಡಿದೆ.
ಎಲ್ಲಾ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದಡೆ
ಎನ್ನ ಪಾತ್ರೆ ತುಂಬಿತ್ತು, ಕೂಡಲಸಂಗಮದೇವಾ. || ೩೫೦ ||

೩೫೧

ಹಿರಿಯಯ್ಯ ಶ್ವಪಚಯ್ಯ,
ಕಿರಿಯಯ್ಯ ಡೋಹರ ಕಕ್ಕಯ್ಯ,
ಅಯ್ಯಗಳಯ್ಯ ನಮ್ಮ ಮಾದಾರ ಚೆನ್ನಯ್ಯ.
ಕೂಡಲಸಂಗಮದೇವಾ,
ನಿಮ್ಮ ಶರಣರು ಎನ್ನ ಸಲಹುವರಾಗಿ. || ೩೫೧ ||

೩೫೨

ಎಮ್ಮ ತಾಯಿ ನಿಂಬಿಯವ್ವೆ ನೀರನೆರೆದುಂಬಳು,
ಎಮ್ಮಯ್ಯ ಚೆನ್ನಯ್ಯ ರಾಯಕಂಪಣವ ಹೇರುವ.
ಎಮಗೆ ಆರೂ ಇಲ್ಲವೆಂಬಿರಿ,
ಎಮ್ಮಕ್ಕ ಕಂಚಿಯಲ್ಲಿ ಬಾಣಸವ ಮಾಡುವಳು.
ಎಮಗೆ ಆರೂ ಇಲ್ಲವೆಂಬಿರಿ,
ಎಮ್ಮ ಅಜ್ಜರ ಅಜ್ಜರು ಹಡೆದ ಭಕ್ತಿಯ ನಿಮ್ಮ ಕೈಯಲು ಕೊಂಬೆ,
ಕೂಡಲಸಂಗಮದೇವಾ. || ೩೫೨ ||

೩೫೩

ಎನಗಾರೂ ಇಲ್ಲ, ಎನಗಾರೂ ಇಲ್ಲವೆಂಬರು,
ಬಾಣಸವ ನಾನು, ಮಯೂರನವ ನಾನು,
ಕಾಳಿದಾಸನವ ನಾನು.
ಕಕ್ಕಯ್ಯ ಹಿರಿಯಯ್ಯ, ಚಿಕ್ಕಯ್ಯ ಚೆನ್ನಯ್ಯ
ಎತ್ತಿ ಮುದ್ದಾಡಿಸದರೆನ್ನ, ಕೂಡಲಸಂಗಯ್ಯಾ. || ೩೫೩ ||

೩೫೪

ಅಯ್ಯಾ, ನಿಮ್ಮ ವಂಶಾವಳಿಯಲು ಒಬ್ಬ ತೊತ್ತಿನ ಮಗ ಹುಟ್ಟಿದ.
ಆತನ ತೊತ್ತಿನ ಮಗ ನಾನಯ್ಯಾ,
ಬಳಿದೊತ್ತು, ಬಳಗದೊತ್ತು, ವಂಶದೊತ್ತು ನಾನಯ್ಯಾ.
ಕೂಡಲಸಂಗಮದೇವಯ್ಯಾ,
ನಿಮ್ಮ ಒಡೆತನಕ್ಕೆ ಕೇಡಿಲ್ಲವಾಗಿ, ಎನ್ನ ತೊತ್ತುತನಕ್ಕೆ ಕೇಡಿಲ್ಲ. || ೩೫೪ ||

೩೫೫

ಕೈಯ ಬೋಹರಿಗೆ, ಮಂಡೆಯ ಮೇಲೆ ಸಿಂಬೆ,
ಸಿಂಬಕನ ಮನೆಯ ಮಗ ನಾನಯ್ಯಾ.
ಕೂಡಲಸಂಗಮದೇವರ ಮಂಚದ ಕೋಡೇರಿ ಬಂದ
ತೊತ್ತಿನ ಮಗ ನಾನಯ್ಯಾ. || ೩೫೫ ||

೩೫೬

ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ,
ಭಕ್ತರ ಮನೆಯ ತೊತ್ತಾಗಿಪ್ಪುದು ಕರ ಲೇಸಯ್ಯಾ.

‘ತಾರೌ ಅಗ್ನವಣೆ, ನೀಡೌ ಪತ್ರೆಯ,
ಲಿಂಗಕ್ಕೆ ಬೋನವ ಹಿಡಿಯೌ’ ಎಂಬರು.
‘ಕೂಡಲಸಂಗನ ಮಹಾಮನೆಯಲ್ಲು
ಒಕ್ಕುದನುಣ್ಣೌ ತೊತ್ತೇ’ ಎಂಬರು. || ೩೫೬ ||

೩೫೭

ಆನು ನಿಮ್ಮ ಶರಣರಿಗೆ, ಮಂಡೆಯ ಬೋಳಿಸಿಕೊಂಡು
ಗಂಡುದೊತ್ತಾದೆನಯ್ಯಾ.
ಕೂಡಲಸಂಗಮದೇವಾ, ನಿಮ್ಮ ಶರಣರಿಗೆ. || ೩೫೭ ||

೩೫೮

ಅನುದಿನ ಮನಮುಟ್ಟಿ ಧನ್ಯನಯ್ಯಾ, ದಮ್ಮಯ್ಯಾ! ದಮ್ಮಯ್ಯಾ!
ನಿಮ್ಮ ಧರ್ಮದ ಕವಿಲೆಯಾನಯ್ಯಾ.
ಕೂಡಲಸಂಗಮದೇವಯ್ಯಾ,
ನಿಮ್ಮ ಶರಣರ ಮನೆಯ ಮಗ ನಾನಯ್ಯಾ. || ೩೫೮ ||

೩೫೯

ಕಾಮವ ತೊರೆದಾತ, ಹೇಮವ ಜರೆದಾತ,
ಭಾನುವಿನ ಉದಯಕ್ಕೆ ಒಳಗಾಗದ ಶರಣನು.
ಆಗಳೂ ನಿಮ್ಮ ಮಾಣದೆ ನೆನೆವರ ಮನೆಯಲು ಶ್ವಾನನಾಗಿರಿಸು,
ಮಹಾದಾನಿ ಕೂಡಲಸಂಗಮದೇವಾ. || ೩೫೯ ||

೩೬೦

ಮೇಲಾಗಲೊಲ್ಲೆನು ಕೀಳಾಗಲಲ್ಲದೆ,
ಕೀಳಿಂಗಲ್ಲದೆ ಹಯನು ಕರೆವುದೆ?
ಮೇಲಾಗಿ ನರಕದಲೋಲಾಡಲಾರೆನು.
ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು,
ಮಹಾದಾನಿ ಕೂಡಲಸಂಗಮದೇವಾ. || ೩೬೦ ||

೩೬೧

ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ,
ರುದ್ರಪದವಿಯನೊಲ್ಲೆ.

ನಾನು ಮತ್ತಾವ ಪದವಿಯನೊಲ್ಲೆನಯ್ಯಾ.
ಕೂಡಲಸಂಗಮದೇವಾ, ನಿಮ್ಮ ಸದ್ಭಕ್ತರ
ಪಾದವನರಿದಿಪ್ಪ ಮಹಾಪದವಿಯ ಕರುಣಿಸಯ್ಯಾ. ॥ ೨೬೧ ॥

೨೬೨

ಕಾಗೆ ವಿಷ್ಟಿಸುವ ಹೊನ್ನಕಳಸವಹುದರಿಂದ
ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯಾ.
ಅಯ್ಯಾ ನಿಮ್ಮ ಶರಣರ ಪಾದಕ್ಕೆ ಚಮ್ಮಾವುಗೆಯ ಮಾಡಯ್ಯಾ.
ಕರ್ಮಾವಲಂಬಿನಃ ಕೇಚಿತ್ ಕೇಚಿತ್ ಜ್ಞಾನಾವಲಂಬಿನಃ।
ವಯಂ ತು ಶಿವಭಕ್ತಾನಾಂ ಪಾದರಕ್ಷಾವಲಂಬನಃ॥
ಕೂಡಲಸಂಗಮದೇವಾ,
ನಿಮ್ಮ ಸೆರಗೊಡ್ಡಿ ಬೇಡೂದೊಂದೇ ವರವ ಕರುಣಿಸಯ್ಯಾ. ॥ ೨೬೨ ॥

೨೬೩

ಆವಾವ ಭಾವದಲ್ಲಿ ಮಾಡಿ ಕೂಡಿಹೆನೆಂಬವರ
ಬಾಗಿಲ ತೋರಯ್ಯಾ.
ತನುವನೊಪ್ಪಿಸಿದವರ, ಮನವನೊಪ್ಪಿಸಿದವರ, ಧನವನೊಪ್ಪಿಸಿದವರ
ಬಾಗಿಲ ತೋರಯ್ಯಾ.
ಇವೆಲ್ಲವನೊಪ್ಪಿಸಿ ಜಂಗಮವೆನ್ನವರೆನ್ನವರೆಂಬವರ
ಕೆರಹ ಹೊತ್ತಿರಿಸೆನ್ನನು, ಕೂಡಲಸಂಗಮದೇವಾ. ॥ ೨೬೩ ॥

೨೬೪

ಆಯತ, ಸ್ವಾಯತದನುಭಾವವ ನಾನೆತ್ತ ಬಲ್ಲೆನು?
ಲಿಂಗ ಜಂಗಮಕ್ಕೆ ಮಾಡಿ ನೀಡುವ
ಅಚ್ಚ ಶರಣರ ಮನೆಯಲು ಭೃತ್ಯನಾಗಿಪ್ಪೆನಯ್ಯಾ.
ಇದು ಕಾರಣ ಕೂಡಲಸಂಗನ ಶರಣರಲ್ಲದೆ ಅನ್ಯವನರಿಯೆನಾಗಿ. ॥ ೨೬೪ ॥

೨೬೫

ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ,
ಅಂಬುಜಕೆ ಭಾನುವಿನ ಉದಯದ ಚಿಂತೆ,
ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ,
ಎನಗೆ ನಮ್ಮ ಕೂಡಲಸಂಗನ ಶರಣರ ನೆನೆವುದೆ ಚಿಂತೆ. ॥ ೨೬೫ ॥

೩೬೬

ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ,
ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ,
ಬಯಸುತ್ತಿರ್ದೆನಯ್ಯಾ ನಿಮ್ಮ ಶರಣರ ಬರವನು.
ಬಯಸುತ್ತಿರ್ದೆನಯ್ಯಾ ನಿಮ್ಮ ಭಕ್ತರ ಬರವನು.
ದಿನಕರನುದಯಕ್ಕೆ ಕಮಳ ವಿಕಸಿತವಾದಂತೆ
ಎನಗೆ ನಿಮ್ಮ ಶರಣರ ಬರವು, ಕೂಡಲಸಂಗಮದೇವಾ. ‖ ೩೬೬ ‖

೩೬೭

ಸೂರ್ಯನ ಉದಯ ತಾವರೆಗೆ ಜೀವಾಳ,
ಚಂದ್ರಮನುದಯ ನೆಯ್ದಿಲೆಗೆ ಜೀವಾಳ.
ಕೂಪರ ಠಾವಿನಲ್ಲಿ ಕೂಟ ಜೀವಾಳವಯ್ಯಾ,
ಒಲಿದ ಠಾವಿನಲ್ಲಿ ನೋಟ ಜೀವಾಳವಯ್ಯಾ.
ಕೂಡಲಸಂಗನ ಶರಣರ
ಬರವೆನಗೆ ಪ್ರಾಣ ಜೀವಾಳವಯ್ಯಾ. ‖ ೩೬೭ ‖

೩೬೮

ಜಲವ ತೆಪ್ಪಿದ ಮತ್ಸ್ಯ ಬದುಕೂವೇ ಸೋಜಿಗ,
ಗಣತಿಂತಿಣಿಯೊಳಗಿರಿಸೆನ್ನ ಲಿಂಗವೆ.
ಶಿವ ಶಿವಾ, ಕೂಡಲಸಂಗಮದೇವಾ,
ಸೆರಗೊಡ್ಡಿ ಬೇಡುವೆನು. ‖ ೩೬೮ ‖

೩೬೯

ಅಯ್ಯಾ, ನಿಮ್ಮ ಮಹಾವ್ರತಿಗಳನಗಲಿ ಬದುಕಲಾರೆನು.
ಶಿವಘೋ ಶಿವಘೋ! ಕಂಗಳಶ್ರುಗಳಲ್ಲಿ ಮುಂದುಗಾಣೆನು.
ಲಿಂಗಸಂಗಿಗಳನಗಲಿ ಆನೆಂತು ಬದುಕುವೆ,
ಕೂಡಲ ಸಂಗಮದೇವಾ. ‖ ೩೬೯ ‖

೩೭೦

ಜಜ್ಜನೆ ಜರಿದೆನು, ಜಜ್ಜನೆ ಜರಿದೆನು, ಜಜ್ಜನೆ ಜರಿದೆ ನೋಡಯ್ಯಾ,
ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆ ನೋಡಯ್ಯಾ.

ನಾನೊಬ್ಬನೆ ಉಳಿದೆನು, ನಾನೊಬ್ಬನೆ ಉಳಿದೆನು,
ನಾನೊಬ್ಬನೆ ಉಳಿದೆ ನೋಡಯ್ಯಾ.
ಕೂಡಲಸಂಗಮದೇವಾ, ನಿಮ್ಮ ಶರಣರನಗಲಿದ ಕಾರಣ. || ೩೭೦ ||

೩೭೧

ಕಂಡರೆ ಮನೋಹರವಯ್ಯಾ, ಕಾಣದಿದ್ದರೆ ಅವಸ್ಥೆ ನೋಡಯ್ಯಾ.
ಹಗಲಿರುಳಹುದು, ಇರುಳು ಹಗಲಹುದು.
ಎಂತದನು ಆಳವಾಡಿ ಕಳೆವೆನು?
ಒಂದು ಜುಗ ಮೇಲೆ ಕೆಡೆದಂತೆ ಇಹುದು.
ಕೂಡಲಸಂಗನ ಶರಣರನಗಲುವ ದಾವತಿಯಿಂದ
ಮರಣವೇ ಲೇಸು ಕಂಡಯ್ಯಾ. || ೩೭೧ ||

೩೭೨

ಅಂಗೈ ತಿಂದುವೆನ್ನ, ಕಂಗಳು ಕೆತ್ತಿಹವಯ್ಯಾ,
ಬಂದಹರಯ್ಯಾ ಪುರಾತರೆನ್ನ ಮನೆಗೆ,
ಬಂದಹರಯ್ಯಾ ಶರಣರೆನ್ನ ಮನೆಗೆ.
ಕಂಡ ಕನಸು ದಿಟವಾಗಿ ಜಂಗಮ ಮನೆಗೆ ಬಂದರೆ,
ಶಿವಾರ್ಚನೆಯ ಮಾಡುವೆ,
ಕೂಡಲಸಂಗಮದೇವಯ್ಯಾ, ನಿಮ್ಮ ಮುಂದೆ. || ೩೭೨ ||

೩೭೩

ಲಿಂಗವ ಪೂಜಿಸುತ್ತ ಜಂಗಮದ ಮುಖವ ನೋಡುತ್ತಿಪ್ಪ
ಸುಖವ ಕೊಡು, ಕಂಡಾ ಲಿಂಗವೆ,
ಪರಮಸುಖವ ಕೊಡು, ಕಂಡಾ ಲಿಂಗವೆ.
ಕೂಡಲಸಂಗಮದೇವಾ, ಇದೇ ವರವ ನಿಮ್ಮಲ್ಲಿ ಬೇಡುವೆ. || ೩೭೩ ||

೩೭೪

ಮನೆದೈವ, ಕುಲದೈವ ಎನಗೆ ನಿಮ್ಮವರಯ್ಯಾ.
ತನು ಮೀಸಲು, ಮನ ಮೀಸಲು, ನಯನ ಮೀಸಲು ಎನ್ನ,
ಕೂಡಲಸಂಗಮದೇವಾ, ನಿಮ್ಮ ಶರಣರಿಗೆ. || ೩೭೪ ||

೩೭೫

ಗಿಳಿಯ ಪಂಜರವಿಕ್ಕಿ, ಸೊಡರಿಂಗೆಣ್ಣೆಯನೆರೆದು, ಬತ್ತಿಯನಿಕ್ಕಿ
ಬರವ ಹಾರುತ್ತಿದ್ದೆನೆಲೆಗವ್ವಾ.
ತರಗೆಲೆ ಗಿರಿಕೆಂದಡೆ ಹೊರಗನಾಲಿಸುವೆ:
ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲೆಗವ್ವಾ.
ಕೂಡಲಸಂಗಮದೇವನ ಶರಣರು ಬಂದು, ಬಾಗಿಲ ಮುಂದೆ ನಿಂದು
'ಓವಾ' ಎಂದಡೆ, ಸಂತೋಷ ಪಟ್ಟೆನೆಲೆಗವ್ವಾ. || ೩೭೫ ||

೩೭೬

ಅಡವಿಯುಲೊಬ್ಬ ಕಡು ನೀರಡಿಸಿ,
ಎಡೆಯಲ್ಲಿ ನೀರಕಂಡಂತಾಯಿತ್ತಯ್ಯಾ.
ಕುರುಡ ಕಣ್ಣ ಹಡೆದಂತೆ,
ಬಡವ ನಿಧಾನವ ಹಡೆದಂತಾಯಿತ್ತಯ್ಯಾ.
ನಮ್ಮ ಕೂಡಲಸಂಗನ ಶರಣರ ಬರವೆನ್ನ ಪ್ರಾಣ ಕಂಡಯ್ಯಾ. || ೩೭೬

೩೭೭

ಇಂದೆನ್ನ ಮನೆಗೆ ಪ್ರಮಥರು ಬಂದಾರೆಂದು
ಗುಡಿ ತೋರಣವ ಕಟ್ಟಿ, ಷಡುಸಮ್ಮಾರ್ಜನೆಯ ಮಾಡಿ,
ರಂಗವಾಲಿಯನಿಕ್ಕಿ 'ಉಘೇ, ಚಾಂಗು ಭಲಾ' ಎಂದೆಂಬೆ.
ಕೂಡಲ ಸಂಗನ ಶರಣರು
ತಮ್ಮ ಒಕ್ಕುದನಿಕ್ಕಿ ಸಲಹುವರಾಗಿ. || ೩೭೭ ||

೩೭೮

ಸಸಿಯ ಮೇಲೆ ಸಾಗರವರಿದಂತಾಯಿತ್ತಯ್ಯಾ, ಎನ್ನ ಭಕ್ತಿ.
ಆನಂದದಿಂದ ನಲಿನಲಿದಾಡುವೆನು.
ಆನಂದದಿಂದ ಕುಣಿಕುಣಿದಾಡುವೆನು.
ಕೂಡಲಸಂಗನ ಶರಣರು ಬಂದಡೆ,
ಉಬ್ಬಿ, ಕೊಬ್ಬಿ, ಹರುಷದಲೋಲಾಡುವೆ. || ೩೭೮ ||

೩೭೯

ಮನ ಮನ ಬೆರಸಿದಲ್ಲಿ ತನು ಕರಗದಿದ್ದಡೆ,
ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿದ್ದಡೆ,
ಕಂಡಾಗಳಶ್ರುಜಲಂಗಳು ಸುರಿಯದಿದ್ದಡೆ,
ನುಡಿವಲ್ಲಿ ಗದ್ಗದಂಗಳು ಪೊಣ್ಮದಿದ್ದಡೆ;
ಕೂಡಲ ಸಂಗಮದೇವರ ಭಕ್ತಿಗಿದು ಚಿಹ್ನ?
ಎನ್ನಲ್ಲಿ ಇವಿಲ್ಲಾಗಿ, ಆನು ಡಂಬಕ ಕಾಣಿರೇ. ॥ ೩೭೯ ॥

೩೮೦

ಅಷ್ಟವಿಧಾರ್ಚನೆ ಷೋಡಶೋಪಚಾರಂಗಳನು
ಅರಸರಿಯದ ಬಿಟ್ಟಿ ಮಾಡುವೆನು.
ಎನ್ನ ತಾಗಿದ ಸುಖವ ಜಂಗಮಕ್ಕರ್ಪಿಸಲರಿಯದ ಉಪಚಾರಿಯಾನು.
ಸ್ಥಾವರ ಜಂಗಮವನರಿಯದ ಪೂಜಕ ನಾನು.
ಮತ್ತೆ ನಾಚದೇ ಕೂಡಲಸಂಗಮದೇವಯ್ಯಾ,
ಜಂಗಮವೆನ್ನ ಪ್ರಾಣಲಿಂಗವೆಂಬೆನು. ॥ ೩೮೦ ॥

೩೮೧

ಆವಗೆಯಲೊದಗಿದ ಕರ್ಪಿನಂತೆ,
ಅಮೃತದೊಳಗಿರ್ದ ಸರ್ಪನ ತನುವಿನಂತೆ,
ಇರ್ದೆನಯ್ಯಾ, ಹೊರಗೆ ನುಂಪಾಗಿ.
ಸಿಂಹಕ್ಕೊಲಿದ ಮದಕರಿಯಂತೆ
ಆನು ಜಂಗಮಕ್ಕೊಲಿದೆನಯ್ಯ, ಕೂಡಲಸಂಗಮದೇವಾ. ॥ ೩೮೧ ॥

೩೮೨

ಸ್ಥಾವರ ಜಂಗಮ ಒಂದೆಯೆಂದು ಇದಿರ ನುಡಿವ ನಾನೆಡಹುತಿಪ್ಪೆ.
ಸಹಜನಲ್ಲಯ್ಯಾ,
ಆನು ಸಮ್ಯಕ್ಕನಲ್ಲಯ್ಯಾ.
ಅನುಭವಲಿಂಗಸಂಗಿಯೆಂಬೆನು,
ಈ ನುಡಿ ನುಡದಿಹುದೆ, ಕೂಡಲಸಂಗಮದೇವಾ? ॥ ೩೮೨ ॥

೩೮೩

ಮಸಿಯುವೇಸುಕಾಲ ಜೆಳಗಿದರೆ, ಬಿಳಿದಾಗಬಲ್ಲುವೆ?
ಕರ್ಮಸ್ಥಿತಿ ಬೆನ್ನ ಬಿಡದು.
ಅನಂತಕೋಟಿ ಸನ್ಮಾನವ ಮಾಡಿದರೇನು?
ನಿಮಿಷದ ಉದಾಸೀನ ಕೆಡಿಸಿತ್ತು.
ಕೂಡಲಸಂಗಮದೇವಾ
ನಿಮ್ಮ ನಂಬಿಯೂ ನಂಬದ ಡಂಬಕ ನಾನಯ್ಯಾ. || ೩೮೩ ||

೩೮೪

ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ.
ಉಪ್ಪ ಅಪ್ಪುವಿನಲ್ಲಿ ಅದ್ದಿ ಮೆಲಿದಂತಾಯಿತ್ತೆನ್ನ ಭಕ್ತಿ.
ಕೂಡಲಸಂಗಮದೇವಾ,
ಆನು ಮಾಡದೆನೆಂಬ ಕಿಚ್ಚು ಸಾಲದೆ? || ೩೮೪ ||

೩೮೫

ಅಷ್ಟವಿಧಾರ್ಚನೆ ಷೋಡಶೋಪಚಾರವ
ಮಾಡುವ ಹೆಮ್ಮೆನಲ್ಲಿ ಬೆಂದೆನಯ್ಯಾ.
ಲಿಂಗವೆಂದರಿಯದೆ, ಜಂಗಮವೆಂದರಿಯದೆ,
ಪ್ರಸಾದವೆಂದರಿಯದೆ ಆನು ಬೆಂದೆನಯ್ಯಾ.
ಕೂಡಲಸಂಗಮದೇವಾ, ಆನು ಮಾಡುವುದೆಲ್ಲವೂ
ಉಪಚಾರವಯ್ಯಾ. || ೩೮೫ ||

೩೮೬

ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದನಿತಿಲ್ಲ.
ಎನ್ನ ಭಕ್ತನೆಂಬರು, ಎನ್ನ ಸಮಯಾಚಾರಿಯೆಂಬರು
ನಾನೇನು ಪಾಪವ ಮಾಡಿದೆನೊ.
ಬೆಳೆಯದ ಮುನ್ನವೆ ಕೊಯ್ವರೆ? ಹೇಳಯ್ಯಾ.
ಇರಿಯದ ವೀರ, ಇಲ್ಲದ ಸೊಬಗು!
ಎಲ್ಲಾ ಒಡೆಯರೂ ಏರಿಸಿ ನುಡಿವರು,
ಎನಗಿದು ವಿಧಿಯೆ, ಕೂಡಲಸಂಗಮದೇವಾ. || ೩೮೬ ||

೩೮೭

ಎನ್ನ ವರೊಲಿದು ಹೊನ್ನ ಶೂಲದಲ್ಲಿಕ್ಕಿದರೆನ್ನ ಪೊಗಳಿ, ಪೊಗಳಿ.
ಎನ್ನ ಹೊಗಳತೆ ಎನ್ನನಿಮ್ಮೈಗೊಂಡಿತ್ತಲ್ಲಾ–
ಅಯ್ಯೋ, ನೊಂದೆನು, ಸೈರಿಸಲಾರೆನು!
ಅಯ್ಯಾ, ನಿಮ್ಮ ಮನ್ನಣೆಯೆ ಮಸೆದಲಗಾಗಿ ತಾಗಿತ್ತಲ್ಲಾ–
ಅಯ್ಯೊ ನೊಂದೆನು, ಸೈರಿಸಲಾರೆನು.
ಕೂಡಲಸಂಗಮದೇವಾ,
ನೀನೆನಗೆ ಒಳ್ಳಿದನಾದಡೆ
ಎನ್ನ ಹೊಗಳತೆಗಡ್ಡ ಬಾರಾ, ಧರ್ಮಿ! ॥ ೩೮೭ ॥

೩೮೮

ಎನ್ನ ವರೆನಗೊಲಿದು ಹೊನ್ನ ಸೂಲವನಿಕ್ಕಿದರಯ್ಯಾ.
ಅಹಂಕಾರವೂರಾಯ ಘಾಯದಲ್ಲಿ
ಆನೆಂತು ಬದುಕುವೆನೆಂತು ಜೀವಿಸುವೆ?
ಜಂಗಮವಾಗಿ ಬಂದು ಜರೆದು, ಸೂಲವನಿಳುಹಿ,
ಪ್ರಸಾದದ ಮದ್ದನಿಕ್ಕಿ,
ಸಲಹು ಕೂಡಲಸಂಗಮದೇವಾ. ॥ ೩೮೮ ॥

೩೮೯

ಎಡದ ಕೈಯಲು ಹಾಲ ಬಟ್ಟಲು, ಬಲದ ಕೈಯಲು ಓಜುಗಟ್ಟಿಗೆ,
ಆವಾಗ ಬಂದಾನೆಮ್ಮಯ್ಯ,
ಬಡಿದು ಹಾಲ ಕುಡಿಸುವ ತಂದೆ.
ದಂಡಕ್ಷೀರದ್ವಯಾ ಹಸ್ತೇ ಜಂಗಮೋ ಭಕ್ತಿಮಂದಿರಂ।
ಅತಿಭಕ್ತ್ಯಾ ಲಿಂಗಸಂತುಷ್ಟಿರಪಹಾಸ್ಯಾದ್ಯವದಂಡನಮ್॥
ಎಂದುದಾಗಿ, ಕೂಡಲಸಂಗಮದೇವಯ್ಯ, ತಾನೆ
ಭಕ್ತಿಯ ಪಥವ ತೋರುವ ತಂದೆ. ॥ ೩೮೯ ॥

೩೯೦

ಎನ್ನ ಆಪತ್ತು, ಸುಖ–ದುಃಖವನಿನ್ನಾರಿಗೆ ಹೇಳುವೆ?
ಶರಣಸ್ಥಲದವರಿಗೆ ಹೇಳಿದಡೆ ಮಚ್ಚರ!
ಸವತಿ ಸಕ್ಕರೆ–ಬೇವು ಬೆಲ್ಲ ಉಂಟೆ? ಇನ್ನಾರಿಗೆ ಹೇಳುವೆ?

ಕೂಡಲಸಂಗಮದೇವಾ, ಜಂಗಮವಾಗಿ ಬಂದು
ಎನ್ನ ಮನದ ಸೂತಕವ ಕಳೆಯಾ. ॥ ೩೯೦ ॥

೩೯೧

ನಾನಾಸ್ಥಾನಂಗಳಲ್ಲಿ ಬಂದು ಕುಳ್ಳಿರ್ದುದು ತೆರಳೂದೆ, ಅಯ್ಯಾ;
ಉಭಯಕುಳಕ್ಕಲ್ಲದೆ ತೆರಳದು.
ಬೀದಿಯಲ್ಲಿ ಬಿದ್ದ ಶಿಶುವನು
ಹೆತ್ತ ತಾಯಿ ಹತ್ತಿರೆ ಬಂದು ಎತ್ತುವಂತೆ,
ಎನ್ನನಾರು ಜನ್ಮಕ್ಕೆ ತಂದು ಅಘೋರನರಕದಲ್ಲಿಕ್ಕಿದುದ ನಾನು ಬಲ್ಲೆ.
ಕೂಡಲಸಂಗಮದೇವಾ ನಿಮ್ಮ ಹಂಗೇನು? ಹರಿಯೇನು?
ಉಭಯ ಲಿಂಗ ಜಂಗಮದ ಮೊರೆಹೊಕ್ಕು ಬದುಕಿದೆನು. ॥ ೩೯೧ ॥

೩೯೨

ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ :
ಮೀನಜ, ರೋಮಜ ಮಹಾಮುನಿಗಳ
ಲಯುವ ಮಾಡೂದ ನಾ ಬಲ್ಲೆನಾಗಿ.
ಅಯ್ಯಾ ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ :
ನವಕೋಟಿಬ್ರಹ್ಮರಿಗೆ
ಪ್ರಳಯುವ ಮಾಡೂದ ನಾ ಬಲ್ಲೆನಾಗಿ.
ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ :
ದಶಕೋಟಿ ನಾರಾಯಣರಿಗೆ
ಮರಣವ ಮಾಡೂದ ನಾ ಬಲ್ಲೆನಾಗಿ.
ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ :
ಅನಂತಕೋಟಿರುದ್ರರಿಗೆ
ಲಯುವ ಮಾಡೂದ ನಾ ಬಲ್ಲೆನಾಗಿ.
ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ :
ಎನ್ನನೇಳೇಳು ಭವಕ್ಕೆ ತಂದಲ್ಲಿ.
ಅನುಭಯಲಿಂಗಜಂಗಮದ ಮೊರೆಹೊಕ್ಕು
ಭವಂ ನಾಸ್ತಿಯಾಗಿ ಬದುಕಿದೆನಯ್ಯಾ,
ಕೂಡಲಸಂಗಮದೇವಾ. ॥ ೩೯೨ ॥

೩೯೩

ಲಿಂಗದರ್ಶನ ಕರಮುಟ್ಟಿ, ಜಂಗಮದರ್ಶನ ಶಿರಮುಟ್ಟಿ,
ಆವುದ ಘನವೆಂಬೆ, ಆವುದ ಕಿರಿದೆಂಬೆ?
ತಾಳಸಂಪುಟಕ್ಕೆ ಬಾರದ ಘನವ ಅರ್ಪಿಸ ಹೋದಡೆ,
ಅರ್ಪಣ ಮುನ್ನವೆ ಇಲ್ಲ. ಗಮನ ನಿರ್ಗಮನವಾಯಿತ್ತು.
ಈ ಉಭಯ ಭೇದವನರಿಯರಾಗಿ,
ಜಂಗಮವೇ ಲಿಂಗ ಕೂಡಲಸಂಗಮದೇವಾ. || ೩೯೩ ||

೩೯೪

ಶಿವಭಕ್ತರೆ ಅಧಿಕರು ನೋಡಯ್ಯಾ.
ಇದಕ್ಕೆ ಅಧಿಕವಾಗಿ ಜಂಗಮವ ಕಂಡೆ.
ಈ ದ್ವಿವಿಧವನೊಂದೆ ಎಂದು ನಂಬಿದೆ,
ಕೂಡಲಸಂಗಮದೇವಾ. || ೩೯೪ ||

೩೯೫

ಕೃತಯುಗದಲ್ಲಿ ಕೇತಾರವೆಂಬ ಮೂಲಸ್ಥಾನ,
ತ್ರೇತಾಯುಗದಲ್ಲಿ ವಾರಣಾಸಿಯೆಂಬ ಮೂಲಸ್ಥಾನ,
ದ್ವಾಪರದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ,
ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ–
ಈ ನಾಲ್ಕು ಮೂಲಸ್ಥಾನ.
ನಾನಾ ಸ್ಥಾನವ ಮುಟ್ಟದೆ ಜಂಗಮವೆ ಲಿಂಗವೆಂದು ನಂಬಿದೆ,
ಕೂಡಲಸಂಗಮದೇವಾ. || ೩೯೫ ||

೩೯೬

ಭಕ್ತದೇಹಿಕನಪ್ಪ ದೇವನು ಸದ್ಭಕ್ತರ ಬಳಿಯಲ್ಲಿ ಬಪ್ಪನಾಗಿ,
ಆಳ್ದನು ಬರಲಾಳು ಮಂಚದ ಮೇಲಿಪ್ಪುದು ಗುಣವೇ? ಹೇಳಾ.
ಕೂಡಲಸಂಗಮದೇವಾ,
ಜಂಗಮರೂಪಾಗಿ ಸಂಗಯ್ಯ ಬಂದಾನೆಂದು
ಎಂದೆಂದೂ ನಾನು ಮಂಚವನೇರದ ಭಾಷೆ. || ೩೯೬ ||

೩೯೭

ಜಂಗಮದ ಸನ್ನಿಧಿಯಲ್ಲಿ ವಾಹನವನೇರಲಮ್ಮೆ:
ಏರಿದರೆ ಭವ ಹಿಂಗದು.
ಏನು ಕಾರಣ : ಮುಂದೆ ಸೂಲವನೇರುವ ಪ್ರಾಪ್ತಿಯುಂಟಾದ ಕಾರಣ.
ಜಂಗಮ ಬರಲಾಸನದಲ್ಲಿ ಇರಲಮ್ಮೆ :
ಇದ್ದರೆ ಭವ ಹಿಂಗದು.
ಏನು ಕಾರಣ : ಮುಂದೆ ಕಾಯ್ದ ಇಟ್ಟಿಗೆಯ ಮೇಲೆ
ಕುಳ್ಳಿರುವ ಪ್ರಾಪ್ತಿಯುಂಟಾದ ಕಾರಣ.
ಜಂಗಮದ ಮುಂದೆ ದಿಟ್ಟತನದಲ್ಲಿ ಬೆರೆತು ನಿಂದಿರಲಮ್ಮೆನು :
ನಿಂದಡೆ ಭವ ಹಿಂಗದಾಗಿ.
ಏನು ಕಾರಣ : ಮುಂದೆ ಹೆಡಗುಡಿಯ ಕಟ್ಟಿ
ಕುಳ್ಳಿರಿಸುವ ಪ್ರಾಪ್ತಿಯುಂಟಾದ ಕಾರಣ.
ಇಂತೀ ಬಾಧೆ ಭವಂಗಳಿಗಂಜುವೆನಯ್ಯಾ.
ನಿಮ್ಮವರ ಸುಳುಹು ನೀವೆಂದೇ ಭಾವಿಸಿ,
ತೊತ್ತು-ಭೃತ್ಯನಾಗಿಪ್ಪೆನಯ್ಯಾ, ಕೂಡಲಸಂಗಮದೇವಾ. ॥ ೩೯೭ ॥

೩೯೮

ಜಂಗಮವಿರಹಿತ ಲಿಂಗಾರ್ಚನೆ : ಓಡಬಿಲಲೆರೆದ ಜಲದಂತೆ.
ಜಂಗಮಸನ್ನಿಹಿತ ಲಿಂಗಾರ್ಚನೆ : ಇದೆ ಭಕ್ತಿಗೆ ಪಥವಯ್ಯಾ.
ಜಂಗಮಪ್ರಸಾದಭೋಗೋಪಭೋಗವು : ಎನಗಿದೇ ಲಿಂಗಾರ್ಚನೆ.
ಬೇರೆ ಮತ್ತೊಂದನರಿದೆನಾದಡೆ,
ಕೂಡಲಸಂಗಮದೇವ ನರಕದಲ್ಲಿಕ್ಕುವ. ॥ ೩೯೮ ॥

೩೯೯

ಭಿತ್ತಿಯಿಲ್ಲದೆ ಬರೆಯಬಹುದೆ ಚಿತ್ತಾರವ?
ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ?
ಜಂಗಮವಿಲ್ಲದೆ ಲಿಂಗಾರ್ಚನೆಯ ಮಾಡಬಹುದೆ?
ರೂಢೀಶ್ವರನ ಭೇದಿಸಬಹುದೆ? ಒಡಲಿಲ್ಲ[ದೆ].
ನಿರಾಳಕರ್ತೃ ಕೂಡಲಸಂಗಮದೇವ
ಜಂಗಮಮುಖವಾದನಾಗಿ ಮತ್ತೊಂದನರಿಯೆನಯ್ಯಾ. ॥ ೩೯೯ ॥

೪೦೦

ಸಮಯೋಚಿತದಲ್ಲಿ ಲಿಂಗಾರ್ಚನೆಯ ಮಾಡುತಿಪ್ಪನಾ ಭಕ್ತನು.
ಮಾಡಿದಡೆ ಮಾಡಲಿ, ಮಾಡಿದಡೆ ತಪ್ಪೇನು?
ಆ ಜಂಗಮದ ಶಬ್ದವ ಕೇಳಿ ಪ್ರಸಾದಕ್ಕೆ ಕೈದುಡುಕಿವಡೆ
ಅದು ಪ್ರಸಾದವಲ್ಲ, ಕಿಲ್ಬಿಷ.
ಆ ಸಮಯೋಚಿತದಲ್ಲಿ ಬಂದ ಜಂಗಮದ ಶಬ್ದವ ಕೇಳಿ
ಪ್ರಸಾದಕ್ಕೆ ಕೈದೆಗೆದಡೆ, ಅದು ಲಿಂಗಕ್ಕೆ ಬೋನ.
ಇದು ಕಾರಣ, ಕೂಡಲಸಂಗಮದೇವಾ,
ಇಂತಪ್ಪ ಸದಾಚಾರಿಗಳನೆನಗೆ ತೋರಾ. || ೪೦೦ ||

೪೦೧

ಉತ್ತಮ ಮಧ್ಯಮ ಕನಿಷ್ಠವೆಂದು, ಬಂದ ಜಂಗಮವನೆಂದೆನಾದಡೆ
ನೊಂದೆನಯ್ಯಾ, ಬೆಂದೆನಯ್ಯಾ, ಎನ್ನ ಕಿಚ್ಚು ಎನ್ನ ಸುಟ್ಟಿತ್ತು.
ಸುಖಿಜಂಗಮ, ಸಾಮಾನ್ಯಜಂಗಮ ಉಂಟೆ,
ಕೂಡಲಸಂಗಮದೇವಾ? || ೪೦೧ ||

೪೦೨

ಲಾಂಛನವ ಕಂಡು ನಂಬುವೆ, ಅವರಂತರಂಗವ ನೀನೇ ಬಲ್ಲೆ.
ತೊತ್ತಿಂಗೆ ತೊತ್ತುಗೆಲಸವಲ್ಲದೆ, ಅರಸರ ಸುದ್ದಿ ಎಮಗೇಕಯ್ಯಾ?
ರತ್ನಮೌಕ್ತಿಕದಚ್ಚು,
ಕೂಡಲಸಂಗಮದೇವಾ ನಿಮ್ಮ ಶರಣರು. || ೪೦೨ ||

೪೦೩

ಆರಾರ ಮನದಲ್ಲಿ ಏನೇನಿಹುದೆಂದರಿಯೆ.
ಒಳ್ಳಿಹರೆಂದೆನಲಮ್ಮೆ, ಹೊಲ್ಲಹರೆಂದೆನಲಮ್ಮೆ, ಶಿವಭಕ್ತರಾದ ಕಾರಣ.
ಜಂಗಮವೆ ಲಿಂಗ ಕೂಡಲಸಂಗಮದೇವಾ. || ೪೦೩ ||

೪೦೪

ಸಂಗಸಹಿತ ಶರಣರು ಬಂದರೆ
ನಂಬೂದೆನ್ನ ಮನವು, ನಚ್ಚೂದೆನ್ನ ಮನವು.
ಹಾವು ನೇಣೆಂಬ ಭ್ರಾಂತುಳ್ಳನ್ನಕ್ಕ ನಾನು ಭಕ್ತನೆಂತಪ್ಪೆನು?

ಅಂಗಲಿಂಗ ಸನ್ನಿಹಿತವಾಗಿ ಬಂದಡೆ, ಸಂಗ ನೀನೆಂದು,
ಮತ್ತೆ ಮನದಲ್ಲಿ ಸಂದೇಹ ಹೊಳೆದಡೆ
ಬೆಂದೆನಲ್ಲಾ ನಾನು, ಕೂಡಲಸಂಗಮದೇವಾ. ॥ ೪೦೪ ॥

೪೦೫

ಕೆಂಡವಲ್ಲಿಟ್ಟಡೆ ಮೆಯ್ ಬೆಂದೂದೆಂಬರು.
ಕೊಂಡಿಟ್ಟವನ ಕೈ ಮುನ್ನವೆ ಬೆಂದೂದು.
ನೊಂದೆ, ನಾನು ನೊಂದೆನಯ್ಯಾ. ಬೆಂದೆ, ನಾನು ಬೆಂದೆನಯ್ಯಾ.
ಕೂಡಲಸಂಗನ ಶರಣರ ಕಂಡು ಕಾಣದಂತಿದ್ದಡೆ
ಅಂದೇ ಬೆಂದೆನಯ್ಯಾ. ॥ ೪೦೫ ॥

೪೦೬

ಎಡದ ಕೈಯಲು ನಿಗಳವನಿಕ್ಕಿ
ಬಲದ ಕೈಯ ಕಡಿದುಕೊಂಡಡೆ ನೋಯದಿಪ್ಪುದೆ?
ಪ್ರಾಣವೊಂದಾಗಿ ದೇಹ ಬೇರಿಲ್ಲ.
ಲಿಂಗವ ಪೂಜಿಸಿ ಜಂಗಮವನುದಾಸೀನವ ಮಾಡಿದಡೆ
ಬೆಂದೆನಯ್ಯಾ ನಾನು, ಕೂಡಲಸಂಗಮದೇವಾ. ॥ ೪೦೬ ॥

೪೦೭

ತನುವ ನೋಯಿಸಿ, ಮನವ ಬಳಲಿಸಿ,
ನಿಮ್ಮ ಪಾದವಿಡಿದವರೊಳರೆ? ಈ ನುಡಿ ಸುಡದಿಹುವೆ?
ಕೂಡಲಸಂಗಮದೇವಾ,
ಶಿವಭಕ್ತರ ನೋವೇ ಅದು ಲಿಂಗದ ನೋವು. ॥ ೪೦೭ ॥

೪೦೮

ಆತ್ಮಸ್ತುತಿ ಪರನಿಂದೆಯ ಕೇಳಿಸದಿರಯ್ಯಾ, ನಿಮ್ಮ ಧರ್ಮ.
ಆನು ಭಕ್ತನೆನ್ನಲ್ಲಿ ಲೇಸುಂಟೆಂದು ಪರಿಣಾಮಿಸಿದಡೆ
ನಿಮಗಾನು ದ್ರೋಹಿಯಯ್ಯಾ.
ಕೂಡಲಸಂಗಮದೇವಾ,
ನಿಮ್ಮ ಶರಣರ ಲೇಸೇ ಎನ್ನ ಲೇಸಯ್ಯಾ. ॥ ೪೦೮ ॥

೪೦೯

ನಡೆಯಲರಿಯದೆ, ನುಡಿಯಲರಿಯದೆ
ಲಿಂಗವ ಪೂಜಿಸಿ ಫಲವೇನು? ಫಲವೇನು?
ಅವರ ದುಃಖವೆನ್ನ ದುಃಖ, ಅವರ ಸುಖವೆನ್ನ ಸುಖ.
ಕೂಡಲಸಂಗನ ಶರಣರ ಮನನೊಂದಡೆ
ಆನು ಬೆಂದೆನಯ್ಯಾ. || ೪೦೯ ||

೪೧೦

ಬಂಜೆ ಬೇನೆಯನರಿಯದಂತೆ
ಒಬ್ಬರೊಂದ ನುಡಿವಿರಿ, ಕೇಳಿರಯ್ಯಾ.
ಎನಗೆ ಆಯುಷ್ಯ ಭವಿಷ್ಯ, ಎನ್ನ ಭಕ್ತರು.
ಎನಗೆ ಆಯುಷ್ಯ ಭವಿಷ್ಯ, ಎನ್ನ ಪ್ರಮಥರು ಕಂಡಯ್ಯಾ.
ಕೂಡಲಸಂಗನ ಶರಣರು ಮುಖಲಿಂಗಿಗಳಯ್ಯಾ. || ೪೧೦ ||

೪೧೧

ಬೇರೂರಲಿದ್ದು ಬಂದ ಜಂಗಮವೆ ಲಿಂಗವೆಂದು,
ಮನೆಯಲಿದ್ದ ಜಂಗಮವನುದಾಸೀನವ ಮಾಡಿದಡೆ
ನಾನು ಬೆಂದೆನಯ್ಯಾ.
ಆನು ಬೆಂದ ಬೇಗೆಯನರಿಯೆ, ಕಾಣಾ
ಕೂಡಲಸಂಗಮದೇವಾ. || ೪೧೧ ||

೪೧೨

ಉಟ್ಟು–ತೊಟ್ಟು ಪೂಜ್ಯವಾಗಿ ಬಂದ ಜಂಗಮ ವಿಶೇಷವೆಂದು,
ಕಂತೆ–ಬೊಂತೆಯ ಜಂಗಮ ಬಂದಡೆ ಹೀನವೆಂದು
ಕಂಡೆನಾದಡೆ ಪಂಚಮಹಾಪಾತಕ.
ಇದು ಕಾರಣ, ಅನ್ನ–ವಸ್ತ್ರ-ಧನ ಮಾಟದಲ್ಲಿ
ಎರಡಾಗಿ ಕಂಡೆನಾದಡೆ ನರಕದಲ್ಲಿಕ್ಕುವ,
ಕೂಡಲಸಂಗಮದೇವ. || ೪೧೨ ||

೪೧೩

ಅಡ್ಡದೊಡ್ಡ ನಾನಲ್ಲಯ್ಯಾ, ದೊಡ್ಡ ಬಸುರನಲ್ಲಯ್ಯಾ,
ದೊಡ್ಡವರನಲ್ಲದೆ ನಿಮ್ಮ ಶರಣರು ಮನ್ನಿಸರಯ್ಯಾ.
ಹಡೆದುಂಬ ಸೂಳೆಯಂತೆ ಧನವುಳ್ಳವರನರಸಿ ಅರಸಿ
ಬೋಧಿಸಲು, ಪ್ರಾರ್ಥಿಸಲು ಮುನ್ನ ನಾನರಿಯೆನಯ್ಯಾ.
ದೊಡ್ಡತನವೆನಗಿಲ್ಲಯ್ಯಾ, ಅಂಜುವೆನಂಜುವೆ ನಿಮ್ಮ ಪ್ರಮಥರಿಗೆ.
ಅನಾಥ ನಾನಯ್ಯಾ, ಕೂಡಲಸಂಗಮದೇವಾ. ॥ ೪೧೩ ॥

೪೧೪

ಕುದುರೆ–ಸತ್ತಿಗೆಯುವರ ಕಂಡಡೆ ಹೊರಳಿಬಿದ್ದು ಕಾಲಹಿಡಿವರು,
ಬಡಭಕ್ತರು ಬಂದಡೆ 'ಎಡೆಯಿಲ್ಲ, ಅತ್ತ ಸನ್ನಿ' ಎಂಬರು.
ಎನ್ನೊಡೆಯ ಕೂಡಲಸಂಗಯ್ಯನವರ
ತಡಗೆಡಹಿ ಮೂಗ ಕೊಯ್ಯದೆ ಮಾಬನೆ? ॥ ೪೧೪ ॥

೪೧೫

ದೂರದಿಂದ ಬಂದ ಜಂಗಮುವನಯ್ಯಗಳೆಂದು,
ಸಾರಿದ್ದ ಜಂಗಮುವ ಪರಿಚಾರಕರೆಂಬ ಕೇಡಿಂಗೆ ಬೆರಗಾದೆನಯ್ಯಾ.
ಸಾರಿದ್ದವರು, ದೂರದವರೆಂದು ಬೇರೆ ಮಾಡಿ ಕಂಡಡೆ,
ಕೂಡಲಸಂಗಮದೇವ ಸಿಂಗಾರದ ಮೂಗ ಕೊಯ್ಯದೆ ಮಾಬನೆ? ॥ ೪೧೫ ॥

೪೧೬

ಹಿಡಿವೆಡೆಯನೆ ಕಾಸಿ ಹಿಡಿವ,
ಕೈಬೆಂದು ಮಿಡುಮಿಡನೆ ಮಿಡುಕುವ,
ಮರುಳ ಮಾನವನೇ
ಬಡವನೆಂದೆನಬೇಡ ಲಾಂಛನಧಾರಿಯನು,
ಕಡುಸ್ನೇಹದಿಂದವರ ಪೂಜೆಮಾಡೂದು.
ನಿಜವಡಗಿದ ರೂಪು, ನಿರ್ವಯಲಸ್ಥಾನ,
ನಡೆಲಿಂಗ ಜಂಗಮ : ಕೂಡಲಸಂಗಮದೇವ. ॥ ೪೧೬ ॥

೪೧೭

ಹಾಲ ಕಂದಲು, ತುಪ್ಪದ ಮಡಕೆಯ
ಬೋಡು ಮುಕ್ಕೆನಬೇಡ.
ಹಾಲು ಸಿಹಿ, ತುಪ್ಪ ಕಮ್ಮನೆ: ಲಿಂಗಕ್ಕೆ ಬೋನ.
ಕೂಡಲಸಂಗನ ಶರಣರ
ಲಿಂಗಹೀನರೆಂದಡೆ ನಾಯಕನರಕ. ॥ ೪೧೭ ॥

೪೧೮

ಆಚಾರವರಿಯಿರಿ, ವಿಚಾರವರಿಯಿರಿ
ಜಂಗಮಸ್ಥಲ ಲಿಂಗ ಕಾಣಿರಯ್ಯಾ.
ಜಾತಿಭೇದವಿಲ್ಲ, ಸೂತಕವಿಲ್ಲ, ಅಜಾತಂಗೆ ಕುಲವಿಲ್ಲ.
ನುಡಿದಂತೆ ನಡೆಯದಿದ್ದಡೆ
ಕೂಡಲಸಂಗಯ್ಯ ಮೆಚ್ಚ ಕಾಣಿರಯ್ಯಾ. ॥ ೪೧೮ ॥

೪೧೯

ಸ್ಥಾವರಭಕ್ತಂಗೆ ಸೀಮೆಯಲ್ಲದೆ
ಘನಲಿಂಗಜಂಗಮಕ್ಕೆ ಸೀಮೆಯೆಲ್ಲಿಯದು?
ಅಂಬುಧಿಗೆ ಸೀಮೆಯಲ್ಲದೆ
ಹರಿವ ನದಿಗೆ ಸೀಮೆಯೆಲ್ಲಿಯದು?
ಭಕ್ತಂಗೆ ಸೀಮೆಯಲ್ಲದೆ
ಜಂಗಮಕ್ಕೆ ಸೀಮೆಯುಂಟೆ? ಕೂಡಲಸಂಗಮದೇವಾ. ॥ ೪೧೯ ॥

೪೨೦

ಎತ್ತಿಕೊಳ್ಳಲೇಕೆ, ಮತ್ತೆ ಉಹಲೇಕಯ್ಯಾ?
ಧರಧುರ ಭಕ್ತಿಯ ಮಾಡಲೇಕಯ್ಯಾ?
ನಿಂದಿಸಲೇಕೆ, ಸ್ತುತಿಯಿಸಲೇಕೆ?
ಹೋಗಬಿಟ್ಟು ಜಂಗಮವ ಹಿಂದೆಯಾಡುವನ ಬಾಯಲ್ಲಿ
ಮೆಟ್ಟಿ ಹುಡಿಹೊಯ್ಯದೆ ಮಾಬನೆ
ಕೂಡಲಸಂಗಮದೇವ? ॥ ೪೨೦ ॥

೪೨೧

ಮರಕ್ಕೆ ಬೇರು ಬಾಯಿಯೆಂದು ತಳಯಿಂಕೆ ನೀರನೆರೆದಡೆ
ಮೇಲೆ ಪಲ್ಲವಿಸಿತ್ತು ನೋಡಾ.
ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದಡೆ
ಮುಂದೆ ಸಕಳಾರ್ಥವನೀವನು.
ಆ ಜಂಗಮವ ಹರನೆಂದು ಕಂಡು, ನರನೆಂದು ಭಾವಿಸಿದಡೆ
ನರಕ ತಪ್ಪದು, ಕಾಣಾ ಕೂಡಲಸಂಗಮದೇವಾ. || ೪೨೧ ||

೪೨೨

ಆರಾಧನೆಯ ಮಾಡಿದಡೆ ಅಮೃತದ ಬೆಳಸು,
ವಿರೋಧಿಸಿದಡೆ ವಿಷದ ಬೆಳಸು.
ಇದು ಕಾರಣ ಜಂಗಮಕ್ಕೆ ಅಂಜಲೇಬೇಕು.
ಸ್ಥಾವರ ಜಂಗಮ ಒಂದೆಂದರಿದಡೆ
ಕೂಡಲಸಂಗಮದೇವ ಶರಣಸನ್ನಿಹಿತ. || ೪೨೨ ||

೪೨೩

ಹೊಸತಿಲ ಪೂಜಿಸಿ ಹೊಡವಂಟು ಹೋದ
ಒಕ್ಕಲಿತಿಯಂತಾಯಿತ್ತೆನ್ನ ಭಕ್ತಿ.
ಜಂಗಮವೆನ್ನೊಡೆಯರೆಂದು ಒಕ್ಕುದ ಕೊಂಡು
ಉದಾಸೀನವ ಮಾಡಿದಡೆ,
ಇಹಲೋಕಕ್ಕೆ ದೂರ, ಪರಲೋಕಕ್ಕೆ ದೂರ!
ಕೂಡಲಸಂಗಮದೇವ ಅಘೋರನರಕದಲ್ಲಿಕ್ಕುವ. || ೪೨೩ ||

೪೨೪

ಲಿಂಗವ ಪೂಜೆಯ ಮಾಡಿ, ಜಂಗಮವ ಕಂಡು ಉದಾಸೀನವ ಮಾಡಿವಡೆ,
ಆ ಲಿಂಗಪೂಜಕರಿಗೆ ಮಾಡಿದ, ಶಿವದೂತರ ದಂಡವೆಂಬುದ.
ಲೋಕದ ಕರ್ಮಿಗಳಿಗೆ ಮಾಡಿದ, ಯಮದೂತರ ದಂಡವೆಂಬುದ.
ಇದು ಕಾರಣ ಲಿಂಗ ಜಂಗಮವನೊಂದೆಂದರಿಯದವರ ಎನಗೆ
ತೋರದಿರಯ್ಯಾ, ಕೂಡಲಸಂಗಮದೇವಾ. || ೪೨೪ ||

೪೨೫

ಜಂಗಮನಿಂದೆಯ ಮಾಡಿ, ಲಿಂಗವ ಪೂಜಿಸುವ ಭಕ್ತನ ಅಂಗವ[illegible]ಯಿಂತೊ?
ಶಿವ ಶಿವಾ, ನಿಂದಿಸುವ ಪೂಜಿಸುವ ಪಾತಕವಿದ ಕೇಳಲಾಗದು.
ಗುರುವಿನ ಗುರು ಜಂಗಮ–
ಇಂತೆಂಬುದು ಕೂಡಲಸಂಗನ ವಚನ. ೪೨೫

೪೨೬

ಅರಸನ ಕಂಡು ತನ್ನ ಪುರುಷನ ಮರೆದಡೆ
ಮರನನೇರಿ ಕಯ್ಯ ಬಿಟ್ಟಂತಾಯಿತ್ತಯ್ಯಾ.
ಇಹಲೋಕಕ್ಕೆ ದೂರ, ಪರಲೋಕಕ್ಕೆ ದೂರ!
ನಮ್ಮ ಕೂಡಲಸಂಗಮದೇವಯ್ಯ
ಜಂಗಮಮುಖಲಿಂಗವಾದ ಕಾರಣ. ೪೨೬

೪೨೭

ಜಂಗಮವಿಲ್ಲದ ಮಾಟ ಕಂಗಳಿಲ್ಲದ ನೋಟ,
ಹಿಂಗಿತ್ತು ಶಿವಲೋಕ ಇನ್ನೆಲ್ಲಿಯದಯ್ಯಾ.
ಲಿಂಗಕ್ಕೆ ಮಾಡಿದ ಬೋನವ ಸಿಂಬಕ ತಿಂಬಂತೆ,
ಸಮಯೋಚಿತವನರಿಯದೆ ಉದರವ ಹೊರೆವವರ
ನರಕದಲ್ಲಿಕ್ಕದೆ ಮಾಬನೆ ಕೂಡಲಸಂಗಮದೇವ? ೪೨೭

೪೨೮

ಲಿಂಗದಲ್ಲಿ ದಿಟವನರಸುವಡೆ ಜಂಗಮವ ನೆರೆ ನಂಬೂದು.
ನಡೆಲಿಂಗ, ನುಡಿಲಿಂಗ, ಮುಖಲಿಂಗವೆಂದೆ ನಂಬೋ!
‘ಯತ್ರ ಮಾಹೇಶ್ವರಸ್ತತ್ರಸನ್ನಿಹಿತ’ನಾಗಿ
ಅಧರ ತಾಗಿದ ರುಚಿಯನುದರ ತಾಗಿದ ಸುಖವ
ಉಂಬ ಉಡುವ ಕೂಡಲಸಂಗಮದೇವ, ಜಂಗಮಮುಖದಲ್ಲಿ. ೪೨೮

೪೨೯

ಜಂಗಮದ ಮನ–ಭಾವದಲ್ಲಿ ಭಕ್ತನೆ ಭೃತ್ಯನೆಂದು,
ಭಕ್ತನ ಮನ–ಭಾವದಲ್ಲಿ ಜಂಗಮವೆ ಕರ್ತನೆಂದು ಇದ್ದ ಬಳಿಕ,
ಬಂದಿತ್ತು–ಬಾರದು, ಇದ್ದಿತ್ತು–ಹೋಯಿತ್ತೆಂಬ ಸಂದೇಹವಿಲ್ಲದಿರಬೇಕು.

ಹೋಯಿತ್ತೆಂಬ ಗುಣವುಳ್ಳನ್ನಕ್ಕ
ನಿಮಗೆ ದೂರ, ನಿಮ್ಮವರಿಗೆ ಮುನ್ನವೆ ದೂರ,
ಶಿವಾಚಾರಕ್ಕಲ್ಲಿಂದತ್ತ ದೂರ.
ಜಂಗಮದ ಹರಿವ ಪರಿವು, ಜಂಗಮದ ನಿಂದ ನಿಲವು,
ಜಂಗಮದ ಗಳಗರ್ಜನೆ, ಜಂಗಮದ ಕೋಳಾಟಕ್ಕೆ ಸೈರಿಸದಿದ್ದಡೆ
ನೀನಂದೆ ಮೂಗ ಕೊಯ್, ಕೂಡಲಸಂಗಮದೇವಾ. || ೪೨೯ ||

೪೩೦

ನಯನದಾಹಾರವ ಜಂಗಮವ ನೋಡಿಸುವೆನು,
ಶ್ರೋತ್ರದಾಹಾರವ ಜಂಗಮವ ಕೇಳಿಸುವೆನು,
ಘ್ರಾಣದಾಹಾರವ ಜಂಗಮವ ವಾಸಿಸುವೆನು,
ಜಿಹ್ವೆಯಾಹಾರವ ಜಂಗಮವನೂಡಿಸುವೆನು,
ಕವಚದಾಹಾರವ ಜಂಗಮಕ್ಕೆ ಹೊದ್ದಿಸುವೆನು,
ಅಧಿಕ ಪ್ರೇಮ ಪರಿಣಾ[ಮ]ವ ಮಾಡುವೆನು,
ಸಕಲಪದಾರ್ಥಂಗಳ ನೀಡುವೆನು,
ಕೂಡಲಸಂಗಾ ನಿಮ್ಮ ಶರಣರಿಗೆ. || ೪೩೦ ||

## ಭಕ್ತನ ಮಾಹೇಶ್ವರಸ್ಥಲ

೪೩೧

ಎಂಬತ್ತುನಾಲ್ಕುಲಕ್ಷ ಮುಖದೊಳಗೊಂದೆ ಮುಖವಾಗಿ
ಕಾಡಿ ನೋಡೆನ್ನನು, ಬೇಡಿ ನೋಡೆನ್ನನು,
ಬೇಡದಿದ್ದಡೆ, ಅಯ್ಯಾ, ನಿಮಗೆ ಪ್ರಮಥರಾಣೆ.
ನೀನಾವ ಮುಖದಲ್ಲಿ ಬಂದು ಬೇಡಿದೊಡೀವೆನು.
ಕೂಡಲಸಂಗಮದೇವಾ. || ೪೩೧ ||

೪೩೨

ಕಂದಿದೆನಯ್ಯಾ ಎನ್ನ ನೋಡುವರಿಲ್ಲದೆ,
ಕುಂದಿದೆನಯ್ಯಾ ಎನ್ನ ನುಡಿಸುವರಿಲ್ಲದೆ,
ಬಡವಾದೆನಯ್ಯಾ ಎನ್ನ ತನು ಮನ ಧನವ ಬೇಡುವರಿಲ್ಲದೆ.

ಕಾಡುವ ಬೇಡುವ ಶರಣರ ತಂದು
ಕಾಡಿಸು ಬೇಡಿಸು ಕೂಡಲಸಂಗಮದೇವಾ. || ೪೩೨ ||

೪೩೩

ವೇಷ ಅವಿಚಾರದಲ್ಲಿ ನಡೆಯಿತ್ತೆಂದು
ಆಸುರದಲ್ಲಿ ಬಗುಳುವ ಕುನ್ನಿ, ನೀ ಕೇಳಾ:
ಪರಿಯನೆ ದಾಸನ ವಸ್ತ್ರವ? ಉಣ್ಣನೆ ಚೆನ್ನಯ್ಯನ ಸಂಗಾತ?
ಪರವಧುವ ಕೊಳ್ಳನೆ ಸಿಂಧುಬಲ್ಲಾಳನ? ಬೇಡನೆ ಸಿರಿಯಾಳನ ಮಗನ?
ನಡೆವುದು ನುಡಿವುದು ಅವಿಚಾರವೆಂದು,
ಭಾವ ವಿಭಾವವೆಂದು ಕಂಡೆನಾದಡೆ ತಪ್ಪೆನ್ನದು, ಮೂಗ ಕೊಯ್ಯಿ,
ಕೂಡಲಸಂಗಮದೇವಾ. || ೪೩೩ ||

೪೩೪

ನೀನಿಕ್ಕಿದ ಬೀಯದಲ್ಲಿ ವಂಚನೆಯುಳ್ಳಡೆ
ಸಂಗಾ, ನಿಮ್ಮ ತೊತ್ತುತನಕ್ಕೆ ದೂರವಯ್ಯಾ.
ಕದ್ದು ತಿಂದಡೆ ಕೈಹಿಡಿದೊಮ್ಮೆ ಬಡಿದು
ತುಡುಗುಣಿತನವ ಬಿಡಿಸಯ್ಯಾ.
ಜಂಗಮ ಮನೆಗೆ ಬಂದಲ್ಲಿ ಓಸರಿಸಿದಡೆ
ಹಿಡಿದು ಮೂಗು ಕೊಯ್ಯಯ್ಯಾ
ಕೂಡಲಸಂಗಮದೇವಾ. || ೪೩೪ ||

೪೩೫

ದೇವನಿಂತಹನೆಂದು ತೋರಿಯೆ ಕೊಡುವೆನು ಗಣಂಗಳಿಗೆ:
ಬಲ್ಲಾಳನ ವಧುವ ಬೇಡಿದಾತನೀ ದೇವ.
ದೇವನಿಂತಹನೆಂದು ತೋರಿಯೆ ಕೊಡುವೆನು ಗಣಂಗಳಿಗೆ:
ದಾಸನ ವಸ್ತ್ರವ ಬೇಡಿದಾತನೀ ದೇವ.
ದೇವನಿಂತಹನೆಂದು ತೋರಿಯೆ ಕೊಡುವೆನು ಗಣಂಗಳಿಗೆ:
ಸಿರಿಯಾಳನ ಮಗನ ಬೇಡಿದಾತನೀ ದೇವ.
ಕೂಡಲಸಂಗಮದೇವ ಜಂಗಮಮುಖಲಿಂಗವಾಗಿ
ಕಾಡಿನೋಡುವ, ಬೇಡಿನೋಡುವ. || ೪೩೫ ||

೪೩೬

ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ
ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ.
ನಿಮ್ಮ ಶರಣರಿಗಲ್ಲವೆ ಮತ್ತೊಂದನರಿಯೆ
ಕೂಡಲಸಂಗಮದೇವಾ. || ೪೩೬ ||

೪೩೭

ಆಲುತ್ತಲು ಹರೆಯ ಹೊಯಿಸಿ, ಅಂಕವ ಮಾಡಿದೆನೆಲ್ಲರ ಕಂಡು.
ಆಸು ಬೇಡೆಂದಡೆ ಮಾಣೆ, ಕಲಿತನ ಮಾಡಿದೆನೆಲ್ಲರ ಕಂಡು.
ಅಲ್ಲಿ ಹೋಯಿತ್ತು ಗಳೆಯೆಂದಡೆ
ಆಸೆ ಮಾಡೆನು, ಕೂಡಲಸಂಗಮದೇವಾ. || ೪೩೭ ||

೪೩೮

ಕಾಗೆ ಒಂದಗುಳ ಕಂಡಡೆ ಕರೆಯದೆ ತನ್ನ ಬಳಗವನು?
ಕೋಳಿ ಒಂದು ಕುಟುಕ ಕಂಡಡೆ ಕೂಗಿ ಕರೆಯದೆ ತನ್ನ ಕುಲವನೆಲ್ಲವ?
ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದಡೆ ಕಾಗೆ ಕೋಳಿಯಿಂದ ಕರಕಷ್ಟ
ಕೂಡಲಸಂಗಮದೇವಾ. || ೪೩೮ ||

೪೩೯

ಆವನೇವನಾದಡೇನು? ಹೇಮವಿಲ್ಲದಂಗೈಸಬಹುದೆ?
ಕೊಡಲಿಲ್ಲೆಂಬುದರಿಂದ ಸಾಯಲುಬಹುದು, ಸೈರಿಸಬಾರದು.
ಬೇಡುವವರ ನೋಡಿ ನೋಡಿ, ಈಯಲಿಲ್ಲದ ಜೀವನವದೇಕೆ
ಕೂಡಲಸಂಗಮದೇವಾ? || ೪೩೯ ||

೪೪೦

ಪರಗಣಪಙ್ಕ್ತಿಯ ನಡುವೆ ಕುಳ್ಳಿರ್ದು
ನಾನು ಒಡೆತನದ ನಾಯಿತೇಜವ ಹೊತ್ತುಕೊಂಡು,
ಮಡದಿಯೆನ್ನಗಲೊಳಗೆ ಸಕಲದೇವಾನ್ನವ
ಒಡೆಯರಿಂದವೂ ಮಿಗಿಲಾಗಿ ಇಕ್ಕಲು, ತೆಗೆದಿರಿಸಿದೆನು.
ಈ ಪರಿಯ ಆಯ ಕಣ್ಗೆ ತೋರಲು ಕಿಲ್ಬಿಷವಾದವು.

ಕರುಣಿ ಚನ್ನಬಸವಣ್ಣಾ, ಮರೆದು ಕೊಂಡೆನಾದಡೆ,
ಒಡೆಯ ಕೂಡಲಸಂಗಯ್ಯ ಕೆಡಹಿ ನರಕದಲ್ಲಿಕ್ಕುವ. || ೪೪೦ ||

೪೪೧

ಭಕ್ತಿ ಸುಭಾಷೆಯ ನುಡಿಯ ನುಡಿವೆ, ನುಡಿದಂತೆ ನಡೆವೆ,
ನಡೆಯೊಳಗೆ ನುಡಿಯ ಪೂರೈಸುವೆ.
ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ.
ಒಂದು ಜವೆ ಕೊರತೆಯಾದಡೆ
ಎನ್ನನದ್ದಿ ನೀನೆದ್ದು ಹೋಗು, ಕೂಡಲಸಂಗಮದೇವಾ. || ೪೪೧ ||

೪೪೨

ಓಡುವಾತ ಲೆಂಕನಲ್ಲ, ಬೇಡುವಾತ ಭಕ್ತನಲ್ಲ.
ಓಡಲಾಗದು ಲೆಂಕನು, ಬೇಡಲಾಗದು ಭಕ್ತನು.
ಓಡೆನಯ್ಯಾ, ಬೇಡೆನಯ್ಯಾ,
ಕೂಡಲಸಂಗಮದೇವಾ. || ೪೪೨ ||

೪೪೩

ಚಂದ್ರನ ಶೈತ್ಯದಲು ಬೆಳೆವ ಕಾಯಕ್ಕೆ
ಬೆಳುದಿಂಗಳು ಬಯಸುವ ಹಂಗೇಕಯ್ಯಾ?
ಶರಣರ ಸಂಗದಲಿರ್ದು ಶಿವನ ಬೇಡುವ ಹಂಗೇಕಯ್ಯಾ?
ಕೂಡಲಸಂಗನ ಶರಣರು ಬಂದು ತಮ್ಮವನೆಂದಡೆ ಸಾಲದೆ ಅಯ್ಯಾ? || ೪೪೩ ||

೪೪೪

ದಾಸನ ವಸ್ತ್ರವ ಬೇಡದ ಮುನ್ನ
ತವನಿಧಿಯನಿತ್ತಡೆ ನಿಮ್ಮ ದೇವರೆಂಬೆ.
ಸಿರಿಯಾಳನ ಮಗನ ಬೇಡದ ಮುನ್ನ
ಕಂಚಿಯುಪುರವ ಕೈಲಾಸಕ್ಕೊಯ್ದಡೆ ನಿಮ್ಮ ದೇವರೆಂಬೆ.
ಬಲ್ಲಾಳನ ವಧುವ ಬೇಡದ ಮುನ್ನ
ಸ್ವಯಲಿಂಗವ ಮಾಡಿದಡೆ ನಿಮ್ಮ ದೇವರೆಂಬೆ.
ದೇಹಿ ನೀನು, ವ್ಯಾಪಾರಿಗಳು ನಮ್ಮವರು.
ಬೇಡು, ಕೂಡಲಸಂಗಮದೇವಾ, ಎಮ್ಮವರ ಕೈಯಲು. || ೪೪೪ ||

೪೪೫

ಎಲ್ಲರೂ ವೀರರು, ಎಲ್ಲರೂ ಧೀರರು.
ಎಲ್ಲರೂ ಮಹಿಮರು, ಎಲ್ಲರೂ ಪ್ರಮಥರು.
ಕಾಳಗದ ಮುಖದಲ್ಲಿ ಕಾಣಬಾರದು,
ಓಡುವ ಮುಖದಲ್ಲಿ ಕಾಣಬಹುದು.
ನಮ್ಮ ಕೂಡಲಸಂಗನ ಶರಣರು ಧೀರರು,
ಉಳಿದವರೆಲ್ಲರೂ ಅಧೀರರು. || ೪೪೫ ||

೪೪೬

ಎಲ್ಲಿ ನೋಡಿದಡಲ್ಲಿ ಮನವೆಳಸಿದಡೆ
ಆಣೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ.
ಪರವಧುವನುಮಾದೇವಿಯೆಂಬೆ
ಕೂಡಲಸಂಗಮದೇವಾ. || ೪೪೬ ||

೪೪೭

ಪರಿವ ಹಾವಿಂಗಂಜೆ, ಉರಿಯ ನಾಲಗೆಗಂಜೆ,
ಸುರಗಿಯ ಮೊನೆಗಂಜೆ,
ಒಂದಕ್ಕಂಜುವೆ, ಒಂದಕ್ಕಳುಕುವೆ:
ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ.
ಮುನ್ನಂಜದ ರಾವಳನೇವಿಧಿಯಾದ!
ಅಂಜುವೆನಯ್ಯಾ, ಕೂಡಲಸಂಗಮದೇವಾ. || ೪೪೭ ||

೪೪೮

ಒಂದಕ್ಕೊಂಬತ್ತ ನುಡಿದು, ಕಣ್ಣ ಕೆಚ್ಚನೆ ಮಾಡಿ, ಗಂಡುಗೆದರಿ
ಮುಡುಹಿಕ್ಕಿ ಕೆ[ಲೆ]ವರ ಕಂಡಡಂಜುವೆ, ಓಸರಿಸುವೆ!
ಓಡಿದೆನೆಂಬ ಭಂಗವಾದಡಾಗಲಿ.
ನಮ್ಮ ಕೂಡಲಸಂಗನ ಶರಣರ ಅನುಭಾವವಿಲ್ಲದವರ
ಪೊಲಮೇರೆಯ ಹೊಂದೆ, ಹೊಲನ ಬಿಟ್ಟೋಡುವೆ. || ೪೪೮ ||

೪೪೯

ಒಡೆಯರು ಬಂದಡೆ ಗುಡಿ ತೋರಣವ ಕಟ್ಟಿ,
ನಂಟರು ಬಂದಡೆ ಸಮಯವಿಲ್ಲೆನ್ನಿ.

ಅಂವೇಕೆ ಬಾರರು?
ನೀರಿಂಗೆ ನೇಣಿಂಗೆ ಹೊರಗಾದಂದು, ಸಮಯಾಚಾರಕ್ಕೆ ಒಳಗಾದಂದು.
ಪರುಷ ಮುಟ್ಟಲು ಕಬ್ಬುನ ಸುವರ್ಣವಾಯಿತ್ತು.
ಬಳಿಕ ಬಂಧುಗಳುಂಟೆ, ಕೂಡಲಸಂಗಮದೇವಾ? || ೪೪೯ ||

೪೫೦

ಒಡೆಯರಾಡುವ ಮಾತ ಕಡೆಪರಿಯಂತರ ಕೇಳಿ,
ಇದಿರುವೋಗಿ ಕಿಂಕರನಾಗಿ ನಡುಗುತ್ತ ಬಿನ್ನಹಮಾಡುವ
ಸದ್ಭಕ್ತನ ತೋರಯ್ಯಾ.
ಒಡೆಯರಾಡುವ ಮಾತ ಕಂಡು,ಕರೆದಲ್ಲಿ ಕೆಡೆಮೆಟ್ಟಿ
ಬಾಯಿ ಘನವೆಂದು ಆಡುವನ ತೋರದಿರಯ್ಯಾ,
ಅವನ ಸಂಗದಲ್ಲಿರಿಸದಿರಯ್ಯಾ,
ಅವನ ಸಹಪಙ್ತಿಯಲ್ಲಿ ಕುಳ್ಳಿರಿಸದಿರಯ್ಯಾ.
ಕೂಡಲಸಂಗಮದೇವಯ್ಯಾ, ನಿಮ್ಮ ಬೇಡೂದೊಂದೆ ವರವು. || ೪೫೦ ||

೪೫೧

ಬಡಹಾರುವನೇಸು ಭಕ್ತನಾದಡೆಯೂ ನೇಣಿನ ಹಂಗ ಬಿಡ!
ಮಾಲೆಗಾರನೇಸು ಭಕ್ತನಾದಡೆಯೂ ಬಾವಿಯ ಬೊಮ್ಮನ ಹಂಗ ಬಿಡ!
ಬಣಜಿಗನೇಸು ಭಕ್ತನಾದಡೆಯೂ ಒಟ್ಟಿಲ ಬೆನಕನ ಹಂಗ ಬಿಡ!
ಕಂಚುಗಾರನೇಸು ಭಕ್ತನಾದಡೆಯೂ ಕಾಳಿಕಾದೇವಿಯ ಹಂಗ ಬಿಡ!
ನಾನಾ ಹಂಗಿನವನಲ್ಲ, ನಿಮ್ಮ ಶರಣರ ಹಂಗಿನವನಯ್ಯಾ
ಕೂಡಲಸಂಗಮದೇವಾ. || ೪೫೧ ||

೪೫೨

ಶ್ರೀವಿಭೂತಿ ರುದ್ರಾಕ್ಷಿಯಿದ್ದವರ ಲಿಂಗವೆಂಬೆ,
ಇಲ್ಲದವರ ಭವಿಯೆಂಬೆ.
ಕೂಡಲಸಂಗಮದೇವಾ,
ಸದುಭಕ್ತರ ನೀನೆಂಬೆ. || ೪೫೨ ||

೪೫೩

ದೇವಸಹಿತ ಭಕ್ತ ಮನೆಗೆ ಬಂದಡೆ
ಕಾಯಕವಾವುದೆಂದು ಬೆಸಗೊಂಡೆನಾದಡೆ

ನಿಮ್ಮಾಣೆ! ನಿಮ್ಮ ಪುರಾತರಾಣೆ! ತಲೆದಂಡ! ತಲೆದಂಡ!
ಕೂಡಲಸಂಗಮದೇವಾ, ಭಕ್ತರಲ್ಲಿ ಕುಲವನರಸಿದಡೆ
ನಿಮ್ಮ ರಾಣಿವಾಸದಾಣೆ. || ೪೫೩ ||

೪೫೪

ಲಿಂಗಾಂಗಿಗಳಲ್ಲದವರ, ಶರಣಸಂಗವಿಲ್ಲದವರ
ಕಂಡಡೆ ನಾಚುವೆ.
ಅವರ ನುಡಿ ಎನಗೆ ಸಮನಿಸದಯ್ಯಾ ಕೂಡಲಸಂಗಮದೇವಾ,
ನೀನು ಅಲ್ಲಿ ಇಲ್ಲದ ಕಾರಣ. || ೪೫೪ ||

೪೫೫

ಶ್ರೀವಿಭೂತಿಯ ಹೂಸದವರ,
ಶ್ರೀರುದ್ರಾಕ್ಷಿಯ ಧರಿಸದವರ,
ನಿತ್ಯಲಿಂಗಾರ್ಚನೆಯ ಮಾಡದವರ,
ಜಂಗಮವೇ ಲಿಂಗವೆಂದರಿಯದವರ,
ಸದ್ಭಕ್ತರ ಸಂಗದಲ್ಲಿರದವರ ತೋರದಿರು.
ಕೂಡಲಸಂಗಮದೇವಾ, ಸೆರಗೊಡ್ಡಿ ಬೇಡುವೆನು. || ೪೫೫ ||

೪೫೬

ಕೂಪವರಿಗೆ ಹೇಳುವೆನು ಕುಳಸ್ಥಳಂಗಳನೆಲ್ಲವ,
ಕೂರದವರಿಗೆ ಹೇಳಿ ನಾನೇವೆನು ಶಿವನೆ?
ಕರಲ ಭೂಮಿಯಲ್ಲಿ ಕರೆದ ವೃಷ್ಟಿಯ ತೆರನಂತೆ
ಆವರೆತ್ತ ಬಲ್ಲರೆನ್ನ ಸುಖ-ದುಃಖವನು?
ಅಂಗತವಿಲ್ಲದ ಸಂಗವು ಅಳಲಿಲ್ಲದ ಹುಯ್ಯಲಂತೆ,
ಇದು ಕಾರಣ, ಕೂಡಲಸಂಗಮದೇವಾ,
ನಿಮ್ಮ ಶರಣರಿಗಲ್ಲದೆ ಬಾಯಿದೆರೆಯೆನು. || ೪೫೬ ||

೪೫೭

ಒಡೆಮೋಡು ಎನ್ನ ಮನೆಯಲಿಲ್ಲದಂತೆ ಮಾಡಯ್ಯಾ,
ಕೊಡು ದೇವ, ಎನ್ನ ಕೈಯಲೊಂದು ಕರಿಕೆಯನು.
'ಮೃಡದೇವಾ ಶರಣೆ'ಂದು ಭಿಕ್ಷಕ್ಕೆ ಹೋದಡೆ
ಅಲ್ಲಿ, 'ನಡೆ ದೇವಾ' ಎಂದೆನಿಸು ಕೂಡಲಸಂಗಮದೇವಾ. || ೪೫೭ ||

೪೫೮

ಭವಿರಹಿತ ಭಕ್ತನಾದ ಬಳಿಕ,
ಭಕ್ತಿಭಾಜನದಲ್ಲಿ ಮಾಡಿ ಭವಿಗಿಕ್ಕಲಾಗದಯ್ಯಾ.
ಯುಕ್ತಿಶೂನ್ಯರಿಗೆ ಮುಂದೆ ಪ್ರಸಾದ ದೂರ,
ಮುಕ್ತಿಯಿಲ್ಲ-ಮುಂದೆ ನಾಯ ಬಸುರಲ್ಲಿ ಬಪ್ಪುದು ತಪ್ಪದು ಪೃಥ್ವಿಯೊಳಗೆ.
ಕೂಡಲಸಂಗಮದೇವಾ, ನಿಮ್ಮ ಶರಣರಿಗಲ್ಲದೆ
ಅನಾಚಾರಕ್ಕೆಲ್ಲಿಯದೊ? || ೪೫೮ ||

## ಭಕ್ತನ ಪ್ರಸಾದಿಸ್ಥಲ

೪೫೯

ಅಯ್ಯಾ, ನಿಮ್ಮ ಶರಣರ ದಾಸೋಹಕ್ಕೆ
ತನುಮನಧನವಲಸದಂತೆ ಮಾಡಯ್ಯಾ,
ತನು ದಾಸೋಹಕ್ಕೆ ಉಬ್ಬುವಂತೆ ಮಾಡಯ್ಯಾ,
ಮನ ದಾಸೋಹಕ್ಕೆ ಲೀಯವಹಂತೆ ಮಾಡು,
ಧನ ದಾಸೋಹಕ್ಕೆ ಸವೆದು ನಿಮ್ಮ ಶರಣರ ಪ್ರಸಾದದಲ್ಲಿ
ನಿರಂತರ ಆಡಿ, ಹಾಡಿ, ನೋಡಿ, ಕೂಡಿ, ಭಾವಿಸಿ, ಸುಖಿಸಿ,
ಪರಿಣಾಮಿಸುವಂತೆ ಮಾಡು ಕೂಡಲಸಂಗಮದೇವಾ. || ೪೫೯ ||

೪೬೦

ಹಾರುವ ಹಾರುವನಪ್ಪೆ ನಾನು, ಸದ್ಭಕ್ತರೆನ್ನವರೆನ್ನವರೆಂದು:
ಹಾರು[ವೆ] ಹಾರು[ವೆ]ನವ್ವಾ ನಾನು, ಶರಣರು ಎನ್ನವರೆನ್ನವರೆನ್ನವರೆಂದು,
ಕೂಡಲಸಂಗನ ಶರಣರು ಒಕ್ಕುದನಿಕ್ಕಿ ಸಲಹುವರೆಂದು. || ೪೬೦ ||

೪೬೧

ಒಕ್ಕುದ ಮಿಕ್ಕುದನುಂಡು ಕಿವಿವಿಡಿದಾಡುವೆ.
ಶರಣರ ಮನೆಯ ಲೆಂಗಿಯ ಡಿಂಗರಿಗ ನಾನು,
ಕೂಡಲಸಂಗನ ಶರಣರ ಮನೆಯ
ಭಕ್ತಿಯ ಮರುಳ ನಾನು. || ೪೬೧ ||

೪೬೨

ಗುರು ಲಿಂಗ ಜಂಗಮದಿಂದ ಪಾದೋದಕ ಪ್ರಸಾದವಾಯಿತ್ತು.
ಆ ಭಾವವೆ ಮಹಾಪ್ರಸಾದವಾಗಿ
ಎನಗೆ ಬೇರೆ ಪ್ರಸಾದವೆಂಬುದಿಲ್ಲ
ಕೂಡಲಸಂಗಮದೇವಾ. || ೪೬೨ ||

೪೬೩

ಅಹುದೆಂದರಿಯೆ, ಆಗದೆಂದರಿಯೆ,
ಆದಿಪಥವ ತೋರಲರಿಯೆ,
ಸತ್ಯವನರಿಯೆ, ಸಹಜವನರಿಯೆ,
ಸಜ್ಜನ ಶುದ್ಧವ ಮುನ್ನರಿಯೆ.
ನಿಮ್ಮ ಶರಣರ ಒಕ್ಕುದನುಂಡಿಪ್ಪೆ
ಕೂಡಲಸಂಗಮದೇವಾ. || ೪೬೩ ||

೪೬೪

ಆವನಾದಡೇನು ಶ್ರೀಮಹಾದೇವನ ನೆನೆವನ
ಬಾಯ ತಂಬುಲವ ಮೆಲುವೆ, ಬೀಳುಡೆಯ ಹೊದೆವೆ,
ಪಾದರಕ್ಷೆಯ ಕಾಯ್ದು ಬದುಕುವೆ,
ಕೂಡಲಸಂಗಮದೇವಾ. || ೪೬೪ ||

೪೬೫

ಒಂದುವನರಿಯದ ಸಂದೇಹಿ ನಾನಯ್ಯಾ,
ನಂಬುಗೆಯಿಲ್ಲದ ಡಂಬಕ ನಾನಯ್ಯಾ,
ನಿಮ್ಮ ನಂಬಿದ ಶರಣರ ಡಿಂಗರಿಗ ನಾನು,
ಕೂಡಲಸಂಗಮದೇವಾ. || ೪೬೫ ||

೪೬೬

ಬಿಡದೆ ಬಾಗಿಲ ಎಂಜಲ ಕಾಯ್ದಿಪ್ಪೆನು, ಕಿಂಕರನು.
ಕಿಂಕರರ ಮನೆಯಲ್ಲಿ ಕಿಂಕಿಲವನು ಆನು ಹಾರುತ್ತಿಪ್ಪೆನು,
ನಮ್ಮ ಕೂಡಲಸಂಗನ ಶರಣರ
ಒಕ್ಕುದ ಮಿಕ್ಕುದನುಂಬ ಕಿಂಕರ ನಾನು. || ೪೬೬ ||

೪೬೭

ತೊತ್ತಿಂಗೇಕೆ ಲಕ್ಷಣ? ಬಂಟಂಗೇಕೆ ಆಚಾರ?
ಆಗಮವೇಕೆ ಡಿಂಗರಿಗಂಗೆ?
ಒಕ್ಕುದನುಂಬುವಂಗಯ್ಯಾ, ಕೂಡಲಸಂಗಮದೇವಾ
ನಿಮ್ಮ ನಂಬೂದಾಚಾರವಯ್ಯಾ. || ೪೬೭ ||

೪೬೮

ತೊತ್ತಿಂಗೆ ಲಕ್ಷಣವೇಕಯ್ಯಾ?
ಅವರೊಕ್ಕುದನುಂಡು ಮಿಕ್ಕುದ ಕಾಯ್ದಿಪ್ಪುದು.
ಸಾರೆ ಹೊರಸೇಕೆ, ಅವಳಿಗೆ ಮಾರುತ್ತರವೇಕೆ?
ಕೂಡಲಸಂಗನ ಶರಣರೊಡನೆ
ಇದಿರುತ್ತರವೇಕೆ ಸಿಂಬಕಂಗೆ? || ೪೬೮ ||

೪೬೯

ಪಾದೋದಕವ ಕೊಂಬೆ, ಪ್ರಸಾದವ ಕೊಂಬೆ,
ಅರ್ಥಪ್ರಾಣಾಭಿಮಾನ ನಿಮ್ಮದೆಂಬೆ.
ರಾತ್ರಿಯಲೊತ್ತೆಯ ಕೊಂಬ ಪಾತಕ ಸೂಳೆಯಂತೆ,
ಬರಿ ಮಾತಿಂಗೊಲಿವವನೆ ನಮ್ಮ ಕೂಡಲಸಂಗಮದೇವ? || ೪೬೯ ||

೪೭೦

ಪಾತಕ ಮಹಾಪಾತಕವ ಮಾಡಿದವನು
ಸದ್ಭಕ್ತರ ಮನೆಗೆ ಹೋಗಿ,
ಅವರೊಕ್ಕ ಪ್ರಸಾದವನಾಯ್ದುಂಡಡೆ,
ಸಕಲ ಬ್ರಹ್ಮಹತ್ಯಾದಿ ಪಾತಕ ಪರಿಹಾರ.
ಒಮ್ಮೆ ಬೇಡಿಕೊಂಡುಂಡಡೆ!
ಪಾತಕೇ ಸಮನುಪ್ರಾಪ್ತೇ ಶಿವಭಕ್ತಗೃಹಂ ವ್ರಜೇತ್।
ಯಾಚಯೇದನ್ನಮಮೃತಂ ತದಲಾಭೇ ಜಲಂ ಪಿಬೇತ್॥
ಇದು ಕಾರಣ ಕೂಡಲಸಂಗಮದೇವಾ,
ನಿಮ್ಮ ಸದ್ಭಕ್ತರಿಗೆ ನಮೋ ನಮೋ ಎಂಬೆನು. || ೪೭೦ ||

೪೭೧

ನಾನು ಹೊತ್ತ ಹುಳ್ಳಿಯನಂಬಲಿಗೆ ಕೊಂಬುವರಿಲ್ಲ ನೋಡಯ್ಯಾ.
ಆನು ನಿಮ್ಮ ಶರಣರ ಒಕ್ಕುದನುಂಡು ಬದುಕುವೆನಯ್ಯಾ.
ಮೇರುವ ಸಾರಿದ ಕಾಗೆ ಹೊಂಬಣ್ಣವಪ್ಪುದು ತಪ್ಪದು
ಕೂಡಲಸಂಗಮದೇವಾ. ॥ ೪೭೧ ॥

೪೭೨

ಭವಭವದಲ್ಲಿ ನಿಮ್ಮ ಜಂಗಮವೆ ಶರಣಯ್ಯಾ.
ಅವರುಂಡು ಮಿಕ್ಕುದ ಉಡುಗಿ,
ಒಕ್ಕಪ್ರಸಾದವನಾಯ್ದುಕೊಂಬ ಮರುಳ ನಾನಯ್ಯಾ.
ನಮ್ಮ ಕೂಡಲಸಂಗನ ಶರಣರ ರಿಣವ ನಾ ಹಿಂಗಲಾರೆ. ॥ ೪೭೨ ॥

೪೭೩

ದಾಸಿಯು ವರ್ಗದಲ್ಲಿಪ್ಪೆನು ಶಿವಶರಣರ ಮನೆಯಲ್ಲಿ.
ಅವರೊಕ್ಕುದನುಂಡು, ಮಿಕ್ಕುದ ಕಾಯ್ದುಕೊಂಡಿಪ್ಪ ಕಾರಣ
ಕಾಲ ಮುಟ್ಟಲಮ್ಮನು, ಕಲ್ಪಿತ ತೊಡೆಯಿತ್ತು.
ಭವಬಂಧನ ಹಿಂಗಿತ್ತು, ಕರ್ಮ ನಿರ್ಮೂಳವಾಯಿತ್ತು.
ಅವರ ತೊತ್ತಿನ ತೊತ್ತಿನ ಪಡಿದೊತ್ತಿನ ಮಗನೆಂದು
ಕೂಡಲಸಂಗಮದೇವನು 'ಇತ್ತ ಬಾ' ಎಂದು ಎತ್ತಿಕೊಂಡನು. ॥ ೪೭೩ ॥

೪೭೪

ಜನ್ಮ ಜನ್ಮಕ್ಕೆ ಹೊಗಲೀಯದೆ, ಸೋಹಂ ಎಂದೆನಿಸದೆ
ದಾಸೋಹಂ ಎಂದೆನಿಸಯ್ಯಾ.
ಲಿಂಗಜಂಗಮದ ಪ್ರಸಾದವ ತೋರಿ ಬದುಕಿಸಯ್ಯಾ
ಕೂಡಲಸಂಗಮದೇವಾ. ॥ ೪೭೪ ॥

೪೭೫

ಕರ್ತರು ನಿಮ್ಮ ಗಣಂಗಳು ಎನ್ನ ತೊತ್ತುಮಾಡಿ ಸಲಹಿದ ಸುಖವು
ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯದಂತುಟಲ್ಲ–
ಕೇಳಯ್ಯಾ, ಕೂಡಲಸಂಗನ ಶರಣರು
ತಮ್ಮ ಒಕ್ಕುದನಿಕ್ಕಿ ಸಲಹಿದ ಸುಖವು. ॥ ೪೭೫ ॥

## ಭಕ್ತನ ಪ್ರಾಣಲಿಂಗಿಸ್ಥಲ

೪೭೬

ತೊತ್ತಿಂಗೆ ಬಲ್ಲಹನೊಲಿದಡೆ ಪದವಿಯ ಮಾಡದೆ ಮಾಬನೆ?
ಜೇಡರ ದಾಸಯ್ಯಂಗೊಲಿದಾತ ಮತ್ತೊಬ್ಬ ದೇವನೆ, ಅಯ್ಯಾ?
ಮಾದಾರ ಚೆನ್ನಯ್ಯಂಗೆ, ಡೋಹರ ಕಕ್ಕಯ್ಯಂಗೆ,
ತೆಲುಗು ಜೊಮ್ಮಯ್ಯಂಗೆ ಒಲಿದಾತ ಮತ್ತೊಬ್ಬ ದೇವನೆ, ಅಯ್ಯಾ?
ಎನ್ನ ಮನದ ಪಂಚೇಂದ್ರಿಯ ನಿಮ್ಮತ್ತಲಾದಡೆ
ತನ್ನತ್ತ ಮಾಡುವ ಕೂಡಲಸಂಗಮದೇವಯ್ಯ. || ೪೭೬ ||

೪೭೭

ಹೊರಗೆ ಹೂಸಿ ಏವೆನಯ್ಯಾ, ಒಳಗೆ ಶುದ್ಧವಿಲ್ಲದನ್ನಕ್ಕ?
ಮಣಿಯ ಕಟ್ಟಿ ಏವೆನಯ್ಯಾ, ಮನ ಮುಟ್ಟದನ್ನಕ್ಕ?
ನೂರನೋದಿ ಏವೆನಯ್ಯಾ,
ನಮ್ಮ ಕೂಡಲಸಂಗಮದೇವರ ಮನಮುಟ್ಟದನ್ನಕ್ಕ? || ೪೭೭ ||

೪೭೮

ಸುಚಿತ್ತದಿಂದ ನಿಮ್ಮ ನೆನೆಯಲೊಲ್ಲದೆನ್ನ ಮನ,
ಎಂತಯ್ಯಾ? ಎನಗಿನ್ನಾವುದು ಗತಿ?
ಎಂತಯ್ಯಾ? ಎನಗಿನ್ನಾವುದು ಮತಿ?
ಎಂತಯ್ಯಾ? ಹರಹರಾ, ಕೂಡಲಸಂಗಮದೇವಾ
ಮನವ ಸೂತ್ರೈಸೆನ್ನ. || ೪೭೮ ||

೪೭೯

ಅಷ್ಟದಳ ಕಮಲವ ಸುತ್ತುವ ಜೀವಾತ್ಮನ
ಮೆಟ್ಟಿದ ದಳವನರಿಯದೆ,
ಆನು ಭಕ್ತನೆಂತೆಂಬೆ? ಆನು ಶರಣನೆಂತೆಂಬೆ? ಆನು ಲಿಂಗೈಕ್ಯನೆಂತೆಂಬೆ?
ಕೂಡಲಸಂಗಮದೇವಾ
ಎನ್ನ ಮನವು ಸಮಾಧಾನವಾಗದನ್ನಕ್ಕ? || ೪೭೯ ||

೪೮೦

ನಾ ನಿಮ್ಮ ನೆನೆವೆನು, ನೀವೆನ್ನ ನರಿಯಿರಿ.
ನಾ ನಿಮ್ಮನೋಲೈಸುವೆನು, ನೀವೆನ್ನ ಕಾಣೆರಿ.
ನಾನೆಂತು ಬದುಕುವೆನೆಂತು ಜೀವಿಸುವೆನಯ್ಯಾ?
ಕೂಡಲಸಂಗಮದೇವಾ,
ಎನಗೆ ನೀವೆ ಪ್ರಾಣ ಗತಿ ಮತಿ, ನೋಡಯ್ಯಾ. ॥ ೪೮೦ ॥

೪೮೧

ತಂದೆ ನೀನು ತಾಯಿ ನೀನು, ಬಂಧು ನೀನು ಬಳಗ ನೀನು.
ನೀನಲ್ಲದೆ ಮತ್ತಾರೂ ಇಲ್ಲಯ್ಯಾ.
ಕೂಡಲಸಂಗಮದೇವಾ,
ಹಾಲಲದ್ದು, ನೀರಲದ್ದು. ॥ ೪೮೧ ॥

೪೮೨

ಎನ್ನ ಆಪತ್ತು-ಸುಖ-ದುಃಖ ನೀನೆ ಕಂಡಯ್ಯಾ,
ಮತ್ತಾರೂ ಇಲ್ಲ, ಹರಹರಾ, ನೀನೆ ಕಂಡಯ್ಯಾ,
ಎನ್ನ ಮಾತಾಪಿತನು ನೀನೆ ಕಂಡಯ್ಯಾ,
ಕೂಡಲಸಂಗಮದೇವಾ. ॥ ೪೮೨ ॥

೪೮೩

ಎನ್ನ ಜನ್ಮವ ತೊಡೆದನೀ ಧರ್ಮಿ,
ಎನ್ನ ಜನ್ಮವನತಿಗಳೆದಾ ಸಧರ್ಮಿ.
ಎನ್ನ ಭವಬಂಧನವ ನಿಃಕರಿಸಿದೆಯಾಗಿ,
ಶಿವನೆ ಗತಿಯೆಂದು ನಂಬಿದೆನಯ್ಯಾ.
ಎನ್ನ ಅಷ್ಟಮದಂಗಳ ಸುಟ್ಟುರುಹಿದೆಯಾಗಿ,
ಕಟ್ಟುಗ್ರದಿಂದ ನಿಮ್ಮ ಶ್ರೀಚರಣವ ಕಂಡೆ.
ಸೃಷ್ಟಿಪ್ರತಿಪಾಲಕಾ, ನಿಮ್ಮ ನಂಬಿದೆ,
ಕರುಣಿಸು ಕೂಡಲಸಂಗಮದೇವಾ. ॥ ೪೮೩ ॥

೪೮೪

ಭವರೋಗವೈದ್ಯನೆಂದು ನಾ ನಿಮ್ಮ ಮರೆಹೊಕ್ಕೆ,
ಭಕ್ತಿದಾಯಕ ನೀನು ಕರುಣಿಸು ಲಿಂಗತಂದೆ.

ಜಯ ಜಯ ಶ್ರೀ ಮಹಾದೇವ, ಜಯ ಜಯ ಶ್ರೀ ಮಹಾದೇವ,
ಜಯ ಜಯ ಶ್ರೀ ಮಹಾದೇವ ಎನ್ನುತ್ತಿದ್ದಿತೆನ್ನ ಮನವು.
ಕೂಡಲಸಂಗಮದೇವಂಗೆ ಶರಣೆಂದಿತ್ತೆನ್ನ ಮನವು. ॥ ೪೮೪ ॥

## ಭಕ್ತನ ಶರಣಸ್ಥಲ

೪೮೫

ಅಂಗಯ್ಯ ಒಳಗಣ ಲಿಂಗವ ನೋಡುತ್ತ,
ಕಂಗಳು ಕಡೆಗೋಡಿವರಿಯುತ್ತ ಸುರಿಯುತ್ತ ಎಂದಿಪ್ಪೆನೊ?
ನೋಟವೆ ಪ್ರಾಣವಾಗಿ ಎಂದಿಪ್ಪೆನೊ?
ಕೂಟವೇ ಪ್ರಾಣವಾಗಿ ಎಂದಿಪ್ಪೆನೊ?
ಎನ್ನ ಅಂಗವಿಕಾರದ ಸಂಗವಳಿದು,
ಕೂಡಲಸಂಗಯ್ಯಾ, ಲಿಂಗ ಲಿಂಗವೆನುತ್ತ. ॥ ೪೮೫ ॥

೪೮೬

ಎದೆ ಬಿರಿವನ್ನಕ್ಕ, ಮನ ದಣಿವನ್ನಕ್ಕ,
ನಾಲಗೆ ನಲಿನಲಿದೋಲಾಡುವನ್ನಕ್ಕ
ನಿಮ್ಮ ನಾಮಾಮೃತವ ತಂದೆರೆಸು ಕಂಡಯ್ಯಾ, ಎನಗೆನ್ನ ತಂದೆ.
ಬಿರಿಮುಗುಳಂದದಿ ಎನ್ನ ಹೃದಯ
ನಿಮ್ಮ ಶ್ರೀಚರಣದ ಮೇಲೆ ಬಿದ್ದರಳುಗೆ,
ಕೂಡಲಸಂಗಯ್ಯಾ. ॥ ೪೮೬ ॥

೪೮೭

ಆಡಿ ಕಾಲು ದಣಿಯವು, ನೋಡಿ ಕಣ್ಣು ದಣಿಯವು,
ಹಾಡಿ ನಾಲಗೆ ದಣಿಯದು, ಇನ್ನೇವೆನಿನ್ನೇವೆ.
ನಾ ನಿಮ್ಮ ಕೈಯಾರೆ ಪೂಜಿಸಿ ಮನದಣಿಯಲೊಲ್ಲದಿನ್ನೇವೆನಿನ್ನೇವೆ?
ಕೂಡಲಸಂಗಮದೇವಾ ಕೇಳಯ್ಯಾ,
ನಿಮ್ಮ ಉದರವ ಬಗಿದಾನು ಹೊಗುವ ಭರವೆನಗೆ. ॥ ೪೮

೪೮೮

ಕಾಯಸಂಗ ನಿಸ್ಸಂಗವಾಗಿ ಇನ್ನಾವ ಸಂಗವನರಿಯೆನಯ್ಯಾ.
ಮಿಗೆ ಒಲಿದೆನಾಗಿ ಅಗಲಲಾರೆ.
ನಗೆಮೊಗದರಸ, ಅವಧಾರು.
ಕೂಡಲಸಂಗಮದೇವಾ,
ಬಗಿದು ಹೊಗುವೆನು ನಾ ನಿಮ್ಮ ಮನವನು. ॥ ೪೮೮ ॥

೪೮೯

ನೋಡಿ ನೋಡಿ ಲಿಂಗಧ್ಯಾನವೆನ್ನ ಮನ!
ರಾಗರಂಜನೆಯ ಉತುಪತಿ ಸ್ಥಿತಿಲಯ ನಿನಗೆಂದಾದುವು.
ರಾಗರಂಜನೆಯ ಪೂಜೆ ಎನ್ನ ಮನ!
ಕೂಡಲಸಂಗಮದೇವಾ, ಅಹಾ, ಎನ್ನ ಮನ! ॥ ೪೮೯ ॥

೪೯೦

ವಾರವೆಂದರಿಯೆ, ದಿನವೆಂದರಿಯೆ,
ಏನೆಂದರಿಯೆನಯ್ಯಾ.
ಇರುಳೆಂದರಿಯೆ, ಹಗಲೆಂದರಿಯೆ,
ಏನೆಂದರಿಯೆನಯ್ಯಾ.
ನಿಮ್ಮ ಪೂಜಿಸಿ ಎನ್ನುವ ಮರೆದೆ
ಕೂಡಲಸಂಗಮದೇವಾ. ॥ ೪೯೦ ॥

೪೯೧

ನಿಮ್ಮ ನೋಟವನಂತಸುಖ, ನಿಮ್ಮ ಕೂಟ ಪರಮಸುಖ.
ಅಪಟುಕೋಟಿ ರೋಮಂಗಳು ಕಂಗಳಾಗಿ ನೋಡುತ್ತಿದ್ದೆನು.
ಕೂಡಲಸಂಗಮದೇವಯ್ಯಾ, ನಿಮ್ಮ ನೋಡಿ ನೋಡಿ
ಮನದಲ್ಲಿ ರತಿಹುಟ್ಟಿ, ನಿಮಿರ್ದವೆನ್ನ ಕಳೆಗಳು. ॥ ೪೯೧ ॥

೪೯೨

ವಚನದಲ್ಲಿ ನಾಮಾಮೃತ ತುಂಬಿ,
ನಯನದಲ್ಲಿ ಮೂರುತಿ ತುಂಬಿ,
ಮನದಲ್ಲಿ ನಿಮ್ಮ ನೆನಹು ತುಂಬಿ,
ಕಿವಿಯಲ್ಲಿ ಕೀರುತಿ ತುಂಬಿ.

ಕೂಡಲಸಂಗಮದೇವಾ
ನಿಮ್ಮ ಚರಣಕಮಲದೊಳಗಾನು ತುಂಬಿ. ॥ ೪೯೨ ॥

೪೯೩

ಅಡಿಗಡಿಗೆ ಲಿಂಗವನಡರಿಯಡರಿ ನೋಡಿ ನೋಡಿ,
ಕಂಗಳು ಕಡೆಗೋಡಿವರಿದವೆನಗಯ್ಯಾ, ಎನ್ನ ಅಶ್ರುಜಲಂಗಳು.
ಆಲಿಕಲ್ಲ ರೂಹಿನಂತೆ, ಅರಗಿನ ಪುತ್ಥಳಿಯಂತೆ
ತನು ಪುಳಕಿತವಾದ ಬೆಮರಬಿಂದುಗಳೆಲ್ಲಾ!
ಕೂಡಲಸಂಗನ ದರ್ಶನಸ್ಪರ್ಶದಿಂದ
ಮನವೊಲಿದು ನೆರೆವ ಭರವನೇನ ಹೇಳುವೆನಯ್ಯಾ. ॥ ೪೯೩ ॥

೪೯೪

ತಾಳಮಾನ ಸರಿಸವನರಿಯೆ,
ಓಜೆ ಬಜಾವಣೆಯ ಲೆಕ್ಕವನರಿಯೆ, ಅಮೃತಗಣ ದೇವಗಣವನರಿಯೆ,
ಕೂಡಲಸಂಗಮದೇವಾ, ನಿನಗೆ ಕೇಡಿಲ್ಲವಾಗಿ
ಆನು ಒಲಿದಂತೆ ಹಾಡುವೆ. ॥ ೪೯೪ ॥

೪೯೫

ವರಂ ಪ್ರಾಣಪರಿತ್ಯಾಗಶ್ಛೇದನಂ ಶಿರಸೋಽಪಿ ವಾ।
ನತ್ವನಭ್ಯರ್ಚ್ಯ ಭುಂಜೀಯಾತ್ ಭಗವಂತಂ ತ್ರಿಲೋಚನಂ॥
ಎಂದುದಾಗಿ, ದೇಹಧರ್ಮ ತನ್ನ ಆದಂತೆ ಆಗಲಿ,
ಕೂಡಲಸಂಗನ ಪೂಜಿಸಿದಲ್ಲದೆ ನಿಲಲಾರೆನು. ॥ ೪೯೫ ॥

೪೯೬

ಸುರರು ಕಿನ್ನರರು ಕಿಂಪುರುಷರೆಂಬವರನಾರು ಬಲ್ಲರು?
ಎನ್ನ ಚಿತ್ತವು ನಿಮ್ಮ ಮೇಲೆ ಸಂಗಯ್ಯಾ,
ಎನ್ನ ಚಿತ್ತವು ನಿಮ್ಮ ಮೇಲೆ ಸಂಗಯ್ಯಾ.
ಕೂಡಲಸಂಗಮದೇವಾ
ಅನ್ಯವೆಂಬುದನರಿಯೆನಯ್ಯಾ. ॥ ೪೯೬ ॥

೪೯೭

ಮಂಡೆಯ ಬೋಳಿಸಿಕೊಂಡು ಗಂಡುದೊತ್ತುವೊಕ್ಕೆನಯ್ಯಾ.
ಲಜ್ಜೆಗೆಟ್ಟಾದಡೂ ಲಿಂಗವನೊಲಿಸುವೆ,
ನಾಣುಗೆಟ್ಟಾದಡೂ ಲಿಂಗವನೊಲಿಸುವೆ.
ಕೆಲದ ಸಂಸಾರಿಗಳು ನಗುತಿರ್ದಡಿರಲಿ,
ಕೂಡಲಸಂಗಮದೇವಾ, ಶರಣುಗತಿವೊಕ್ಕೆನಯ್ಯಾ. || ೪೯೭ ||

೪೯೮

ಎನಗೆ ನಿಮ್ಮ ನೆನಹಾದಾಗ ಉದಯ,
ಎನಗೆ ನಿಮ್ಮ ಮರಹಾದಾಗ ಅಸ್ತಮಾನ.
ಎನಗೆ ನಿಮ್ಮ ನೆನಹವೆ ಜೀವನ,
ಎನಗೆ ನಿಮ್ಮ ನೆನಹವೆ ಪ್ರಾಣ, ಕಾಣಾ ತಂದೆ.
ಸ್ವಾಮಿ, ಎನ್ನ ಹೃದಯದಲ್ಲಿ ನಿಮ್ಮ ಚರಣದುಂಡಿಗೆಯನೊತ್ತಯ್ಯಾ,
ವದನದಲಿ ಷಡಕ್ಷರಿಯ ಬರೆಯಯ್ಯಾ ಕೂಡಲಸಂಗಮದೇವಾ. || ೪೯೮ ||

೪೯೯

ಎನ್ನ ಕಾಯವ ದಂಡಿಗೆಯ ಮಾಡಯ್ಯಾ,
ಎನ್ನ ಶಿರವ ಸೋರೆಯ ಮಾಡಯ್ಯಾ,
ಎನ್ನ ನರವ ತಂತಿಯ ಮಾಡಯ್ಯಾ,
ಎನ್ನ ಬೆರಳ ಕಡ್ಡಿಯ ಮಾಡಯ್ಯಾ,
ಬತ್ತೀಸ ರಾಗವ ಪಾಡಯ್ಯಾ, ಉರದಲೊತ್ತಿ ಬಾರಿಸು,
ಕೂಡಲಸಂಗಮದೇವಾ. || ೪೯೯ ||

೫೦೦

ಕುರುಳು ಬೆರಳು ಮುಡುಹು ಮುಂಬಲ್ಲ ಕೊಳ್ಳಾ,
ನಿರಿಯನಿಕ್ಕಿ ದಾಂಟಿದಡೆ ಅಂತೆನ್ನ ನಂಬಾ,
ಪರಪುರುಷರ ಮುಖವ ನೋಡದಂತೆ ಮಾಡಾ,
ಬಳಿಕ ನೀನೆಹಗೆ ಇರಿಸಿದಂತಿರಿಸಾ,
ಎನ್ನ ಉರದಲ್ಲಿ ಕೂಡಲಸಂಗಯ್ಯನೆಂದು ಬರೆಯಾ,
ಹರಿಬ್ರಹ್ಮರಿಗೆ ಎರಗದಂತೆ ಬಳಿನೀರನೆರೆಯಾ. || ೫೦೦ ||

೫೦೧

ಕಂಡ ಕನಸು: ನಿಧಾನವ ಕಂಡೆನಯ್ಯಾ,
ಬಿಡಲಾರದ ನಿಧಾನವ ಕಂಡೆನಯ್ಯಾ,
ಕೂಡಲಸಂಗಯ್ಯನೆಂಬ ನಿಧಾನವ ಕಂಡು
ಬಿಡಲಾರೆನಯ್ಯಾ. || ೫೦೧ ||

೫೦೨

ಹೊನ್ನ ಹಾವುಗೆಯ ಮೆಟ್ಟಿದವನ!
ಮಿಡಿಮುಟ್ಟಿದ ಕೆಂಜೆಡೆಯವನ!
ಮೈಯಲ್ಲಿ ವಿಭೂತಿಯ ಹೂಸಿದವನ!
ಕರದಲ್ಲಿ ಕಪಾಲವ ಹಿಡಿದವನ!
ಅರ್ಧನಾರಿಯಾದವನ!
ಬಾಣನ ಬಾಗಿಲ ಕಾಯ್ದವನ!
ನಂಬಿಗೆ ಕುಂಟಣಿಯಾದವನ!
ಚೋಳಂಗೆ ಹೊನ್ನಮಳೆಯ ಕರೆದವನ!
ಎನ್ನ ಮನಕ್ಕೆ ಬಂದವನ!
ಸದ್ಭಕ್ತರ ಹೃದಯದಲಿಪ್ಪವನ!
ಮಾಡಿದ ಪೂಜೆಯಲೊಪ್ಪುವನ!
ಕೂಡಲಸಂಗಯ್ಯನೆಂಬವನ!! || ೫೦೨ ||

೫೦೩

ಮನಕ್ಕೆ ಮನೋಹರವಲ್ಲದ ಗಂಡರು
ಮನಕ್ಕೆ ಬಾರರು, ಕೇಳವ್ವಾ ಕೆಳದೀ,
ಪನ್ನಗಭೂಷಣರಲ್ಲದ ಗಂಡರು
ಇನ್ನೆನಗಾಗದ ಮೊರೆ, ನೋಡವ್ವಾ.
ಕನ್ನೆಯಂದಿನ ಕೂಟ, ಚಿಕ್ಕಂದಿನ ಬಾಳುವೆ,
ನಿಮ್ಮಾಣೆಯಯ್ಯಾ, ಕೂಡಲಸಂಗಮದೇವಾ. || ೫೦೩ ||

೫೦೪

ಜಗವೆಲ್ಲಾ ಅರಿಯಲು ಎನಗೊಬ್ಬ ಗಂಡನುಂಟು,
ಆನು ಮುತ್ತೈದೆ, ಆನು ನಿಟ್ಟೈದೆ.
ಕೂಡಲಸಂಗಮದೇವಯ್ಯನಂತಪ್ಪ ಎನಗೊಬ್ಬ ಗಂಡನುಂಟು. || ೫೦೪ ||

೫೦೫

ಸಂಸಾರವೆಂಬ ಶ್ವಾನನಟ್ಟಿ, ಹುಸಲ ಬೀಸರವ ಮಾಡದಿರಯ್ಯಾ,
ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯಾ.
ನೀವಲ್ಲದೆ ಮತ್ತೇನನೂ ಅರಿಯೆನು.
ಕನ್ಯೆಯಲ್ಲಿ ಕೈವಿಡಿದೆನು, ನಿಮ್ಮಲ್ಲಿ ನೆರೆದೆನು.
ಮನ್ನಿಸು ಕಂಡಾ, ಮಹಾಲಿಂಗವೆ.
ಸತಿಯಾನು, ಪತಿ ನೀನಯ್ಯಾ.
ಮನೆಯೊಡೆಯ ಮನೆಯ ಕಾಯ್ದಿಪ್ಪಂತೆ
ನೀವೆನ್ನ ಮನವ ಕಾಯ್ದಿಪ್ಪ ಗಂಡನು.
ನಿಮಗೋತ ಮನವನನ್ಯಕ್ಕೆ ಹರಿಸಿದಡೆ
ನಿಮ್ಮ ಅಭಿಮಾನ ಹಾನಿ, ಕೂಡಲಸಂಗಮದೇವಾ. ॥ ೫೦೫ ॥

## ಭಕ್ತನ ಐಕ್ಯಸ್ಥಲ

೫೦೬

ನೀನೊಲಿಯಿತ್ತೆ ಪುಣ್ಯ, ನೀನೊಲ್ಲದುದೆ ಪಾಪ,
ಸಕಲ ಜಗವೊಳಗೆ ಅನುಸ್ಯೂತನಾಗಿಪ್ಪೆಯಯ್ಯಾ.
ನೀನೊಲಿದವನೆ ನಿಮ್ಮನರಿದವನು.
ಪ್ರಸಾದಾದ್ದೇವತಾಭಕ್ತಿಃ ಪ್ರಸಾದೋ ಭಕ್ತಿಸಂಭವಃ ।
ಯಥೈವಾಂಕುರತೋ ಬೀಜಂ ಬೀಜತೋ ವಾ ಯಥಾಂಕುರಃ ॥
ನೀನೊಲಿದವನೆ ಧನ್ಯ, ಜಗಕ್ಕೆ ಪಾವನ ಕೂಡಲಸಂಗಮದೇವಾ. ॥ ೫೦೬ ॥

೫೦೭

ಅಷ್ಟವಿಧಾರ್ಚನೆ ಷೋಡಶೋಪಚಾರವ
ಅಂದಂದಿನ ಕೃತ್ಯವ ಅಂದಂದಿಗೆ ಆನು ಮಾಡಿ ಶುದ್ಧನಯ್ಯಾ.
ಹಂಗು ಹರಿಯಿಲ್ಲದ ಕಾರಣ,
ಕೂಡಲಸಂಗಮದೇವ ನಿಷ್ಫಲದಾಯಕನಾಗಿ
ಆನು ಮಾಡಿ ಶುದ್ಧನಯ್ಯಾ. ॥ ೫೦೭ ॥

೫೦೮

'ಮಾಟ ಕೂಟ, ಫಲ ಪ್ರಾಪ್ತಿ' ಎಂಬ ಮಾತ ಕೇಳಲಾಗದು ಶಿವಶಿವಾ!
ನಿಮ್ಮ ಭಕ್ತರಿಗೆ ಮಾಡಿದೆನೆನ್ನದಿರೆಂದು
ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ.
ಅಲ್ಲಿ ಮಾಡುವವರೂ ಮಾಡಿಸಿಕೊಂಬವರೂ ನೀವೆ
ಕೂಡಲಸಂಗಮದೇವಾ. || ೫೦೮ ||

೫೦೯

ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ತನು ಹಾಳಾಯಿತ್ತಯ್ಯಾ,
ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ಮನ ಹಾಳಾಯಿತ್ತಯ್ಯಾ,
ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ಕರ್ಮಭೇದನವಾಯಿತ್ತಯ್ಯಾ,
ನಿಮ್ಮವರು ಅಡಿಗಡಿಗೆ ಹೇಳಿ ಭಕ್ತಿಯೆಂಬೀ ಒಡವೆಯನು
ದಿಟವ ಮಾಡಿ ತೋರಿದರು ಕಾಣಾ, ಕೂಡಲಸಂಗಮದೇವಾ. || ೫೦೯ ||

೫೧೦

ಭಕ್ತನೆಂತೆಂಬೆನಯ್ಯಾ? ಭವಿಯ ಸಂಗ ಬಿಡದನ್ನಕ್ಕ.
ಮಾಹೇಶ್ವರನೆಂತೆಂಬೆನಯ್ಯಾ? ಪರಸ್ತ್ರೀ ಪರಧನದಾಸೆ ಬಿಡದನ್ನಕ್ಕ.
ಪ್ರಸಾದಿಯೆಂತೆಂಬೆನಯ್ಯಾ? ಆಧಿವ್ಯಾಧಿ ನಷ್ಟವಾಗದನ್ನಕ್ಕ.
ಪ್ರಾಣಲಿಂಗಿಯೆಂತೆಂಬೆನಯ್ಯಾ? ಪ್ರಾಣ ಸ್ವಸ್ಥಿರವಾಗದನ್ನಕ್ಕ.
ಶರಣನೆಂತೆಂಬೆನಯ್ಯಾ? ಪಂಚೇಂದ್ರಿಯ ನಾಶವಾಗದನ್ನಕ್ಕ.
ಐಕ್ಯನೆಂತೆಂಬೆನಯ್ಯಾ? ಜನನ ಮರಣ ವಿರಹಿತವಾಗದನ್ನಕ್ಕ.
ಇಂತಪ್ಪ ಭಾಷೆ ವ್ರತ ನೇಮಂಗಳ ನಾನರಿಯೆನಯ್ಯಾ,
ಅಘಟಿತಘಟಿತ ವರ್ತಮಾನವ ನಾನರಿಯೆನಯ್ಯಾ.
ನಿಮ್ಮ ಶರಣರ ತೊತ್ತು-ಭೃತ್ಯಾಚಾರವ ಮಾಡುವೆ
ಕೂಡಲಸಂಗಮದೇವಾ. || ೫೧೦ ||

೫೧೧

ಅಭ್ಯಾಸವೆನ್ನ ವರ್ತಿಸಿತ್ತಯ್ಯಾ, ಭಕ್ತಿ ಸಾಧ್ಯವಾಗದು,
ನಾನೇವೆನಯ್ಯಾ?
ಅಸು ನಿಮ್ಮ ಮನಂಬೊಗುವನ್ನಕ್ಕ ನೀವೆನ್ನ ಮನಂಬೊಗುವನ್ನಕ್ಕ
ಕಾಯಗುಣಂಗಳ ಕಳೆದವರಿಗೆ ಶರಣೆಂಬೆ
ಕೂಡಲಸಂಗಮದೇವಾ. || ೫೧೧ ||

೫೧೨

ತನುಸಾರಾಯರ ಮನಸಾರಾಯರ ಜ್ಞಾನಸಾರಾಯರ
ತೋರಯ್ಯಾ, ನಿಮ್ಮ ಧರ್ಮ.
ಭಾವಸಾರಾಯರ ಭಕ್ತಿಸಾರಾಯರ
ತೋರಯ್ಯಾ, ನಿಮ್ಮ ಧರ್ಮ.
ಕೂಡಲಸಂಗಮದೇವಯ್ಯಾ
ನಿಮ್ಮನರಿಯದ ಅವಗುಣಿಗಳ
ತೋರದಿರಯ್ಯಾ, ನಿಮ್ಮ ಧರ್ಮ. || ೫೧೨ ||

೫೧೩

ಸಂಚಲವಿಲ್ಲದ, ಭಕ್ತಿವಂಚನೆಯಿಲ್ಲದ ಮಹಾಂತರ ತೋರಾ.
ತನುಶುಚಿ ಮನಶುಚಿಗಳನು ತೋರಾ.
ಇಂತಪ್ಪ ಶಿವಲಿಂಗೈಕ್ಯರ ತೋರಿ ಬದುಕಿಸು,
ಕೂಡಲಸಂಗಮದೇವಾ. || ೫೧೩ ||

೫೧೪

ಕಾಮಸಂಗವಳಿದು ಅನುಭಾವಸಂಗದಲುಳಿದವರ ಅಗಲಲಾರೆನು,
ಶಿವಂಗೆ ಮಿಗೆ ಒಲಿದವರನು ನಾನು ಆಗಲಲಾರೆನು ಕಾಣಾ,
ಕೂಡಲಸಂಗಮದೇವಾ.

೫೧೫

ಭಕುತಿರತಿಯ ವಿಕಳತೆಯ ಯುಕುತಿಯನೇನ ಬೆಸಗೊಂಬಿರಯ್ಯಾ?
ಕಾಮಿಗುಂಟೆ ಲಜ್ಜೆ ನಾಚಿಕೆ?
ಕಾಮಿಗುಂಟೆ ಮಾನಾಪಮಾನವು?
ಕೂಡಲಸಂಗನ ಶರಣರಿಗೊಲಿದ
ಮರುಳನನೇನ ಬೆಸಗೊಂಬಿರಯ್ಯಾ? || ೫೧೫ ||

೫೧೬

ಇಂದು ಹುಟ್ಟಿದ ಕೂಸಿಂಗೆ ಇಂದೆ ಜವ್ವನವಾಯಿತ್ತಯ್ಯಾ.
ಆ ಕೂಸು ಬೀದಿಯಲ್ಲಿ ಒತ್ತೆಗೊಳಲು ನಿಂದಿತ್ತಯ್ಯಾ.
ಇದರ ಸಂಗಸುಖದನುಭಾವವನು
ಕೂಡಲಸಂಗಮದೇವ ತಾನೆ ಬಲ್ಲ. || ೫೧೬ ||

೫೧೭

ಸಕ್ಕರೆಯು ಕೊಡನ ತುಂಬಿ ಹೊರಗೆ ಸವಿದಡೆ ರುಚಿಯುಂಟೇ?
ತಕ್ಕೈಸಿ ಭುಜತುಂಬಿ ಲಿಂಗಸ್ಪರ್ಶನವ ಮಾಡದೆ
ಅಕ್ಕಟಾ ಸಂಸಾರ ವೃಥಾಯ ಹೋಯಿತ್ತಯ್ಯಾ.
ಅದೇತರ ಭಕ್ತಿ? ಅದೇತರ ಯುಕ್ತಿ?
ಕೂಡಿಕೋ, ಕೂಡಲಸಂಗಮದೇವಾ. || ೫೧೭ ||

೫೧೮

ಕಾಳಿದಾಸಂಗೆ ಕಣ್ಣನಿತ್ತೆ, ಓಹಿಲಯ್ಯನ ನಿಜಪುರಕ್ಕೊಯ್ದೆ,
ನಂಬಿ ಕರೆದಡೋ ಎಂದೆ,
ತೆಲುಗು ಜೊಮ್ಮಯ್ಯಂಗೆ ಒಲಿದೆ ದೇವಾ,
ಕೂಡಲಸಂಗಮದೇವಾ
ಎನ್ನನೇಕೆ ಒಲ್ಲೆಯಯ್ಯಾ? || ೫೧೮ ||

೫೧೯

ಪರ ಚಿಂತೆ ಎಮಗೇಕಯ್ಯಾ? ನಮ್ಮ ಚಿಂತೆ ನಮಗೆ ಸಾಲದೆ?
ಕೂಡಲಸಂಗಯ್ಯ ಒಲಿದಾನೊ ಒಲ್ಲನೊ ಎಂಬ ಚಿಂತೆ
ಹಾಸಲುಂಟು, ಹೊದೆಯಲುಂಟು. || ೫೧೯ ||

೫೨೦

ಕಣ್ಣ ಕೋಪಕ್ಕೆ ಮುಂದರಿಯದೆ ನುಡಿದು,
ಮನಮುಚ್ಚಿ ಮರುಳಾದೆ ನೋಡವ್ವಾ!
ಕೇಳು, ಕೇಳವ್ವಾ ಕೆಳದಿ;
ಸಖಿಯರಿಲ್ಲದೆ ಸುಖವ ಬಯಸಿದಡೆ
ದೊರಕೊಂಬುದೆ? ಹೇಳಾ.
ಎನ್ನ ಮುನಿಸು ಎನ್ನಲ್ಲೆ ಅಡಗಿತ್ತು,
ಇನ್ನು ಬಾರಯ್ಯಾ, ಕೂಡಲಸಂಗಯ್ಯಾ. || ೫೨೦ ||

೫೨೧

ಲಜ್ಜೆಗೆಟ್ಟೆನು, ನಾಣುಗೆಟ್ಟೆನು.
ಕುಲಗೆಟ್ಟೆನು, ಛಲಗೆಟ್ಟೆನು.

ಸಂಗಾ, ನಿಮ್ಮ ಪೂಜಿಸಿ ಭವಗೆಟ್ಟೆನು ನಾನಯ್ಯಾ.
ಕೂಡಲಸಂಗಮದೇವಯ್ಯಾ
ನಿಮ್ಮ ಮುಟ್ಟಿ ಹುಟ್ಟುಗೆಟ್ಟೆನು ನಾನಯ್ಯಾ. ॥ ೩೨೧ ॥

೩೨೨

ಮಾಡುವ ಭಕ್ತನ ಕಾಯ ಬಾಳೆಯ ಕಂಬದಂತಿರಬೇಕು:
ಮೆಲ್ಲಮೆಲ್ಲನೆ ಹೊರೆಯೆತ್ತಿ ನೋಡಿದಡೆ
ಒಳಗೆ ಕೆಚ್ಚಿಲ್ಲದಿರಬೇಕು.
ಮೇಲಾದ ಫಲವ ನಮ್ಮವರು ಬೀಜಸಹಿತ ನುಂಗಿದರು.
ಎನಗಿನ್ನಾವ ಭಯವಿಲ್ಲ ಕಾಣಾ,
ಕೂಡಲಸಂಗಮದೇವಾ. ॥ ೩೨೨ ॥

೩೨೩

ಜಂಗಮವ ಕೂಡಿಕೊಂಡು
ಲಿಂಗಾರ್ಚನೆಯ ಮಾಡೂದು ಲೇಸಯ್ಯಾ ಭಕ್ತಂಗೆ.
ಆ ಭಕ್ತನ ಕೂಡಿಕೊಂಡು
ಲಿಂಗಾರ್ಚನೆಯ ಮಾಡೂದು ಲೇಸಯ್ಯಾ ಜಂಗಮಕ್ಕೆ.
ಆ ಜಂಗಮದ ಕರ್ತೃತ್ವವೆ ಭಕ್ತಂಗೆ ದಾಸೋಹ,
ಆ ಭಕ್ತನ ಕಿಂಕಲವೆ ಆ ಜಂಗಮಕ್ಕೆ ದಾಸೋಹ.
ಆ ಭಕ್ತರೊಳಗೆ ಆ ಜಂಗಮವಡಗಿ,
ಆ ಜಂಗಮದೊಳಗೆ ಆ ಭಕ್ತನಡಗಿ,
ಇದನೇನೆಂದು ಹವಣಿಸುವೆನಯ್ಯಾ, ಎರಡೊಂದಾದ ಘನವ?
ಇದನೇನೆಂದುಪಮಿಸುವೆನಯ್ಯಾ, ತೆರಹಿಲ್ಲದ ಘನವ?
ಈ ಎರಡಕ್ಕೆ ಭವವಿಲ್ಲೆಂದು ಕೂಡಲಸಂಗಯ್ಯಾ,
ನಿಮ್ಮ ಶ್ರುತಿಗಳು ಹೇಳಿದವಾಗಿ,
ನಿಮ್ಮ ಕರುಣವೆನಗೆ ಆಯಿತ್ತು. ॥ ೩೨೩ ॥

೩೨೪

ಹರವ ನದಿಯ ತೆರನ ಹೋಲಬಲ್ಲಡೆ ಭಕ್ತಿ,
ಕೂಡೆ ಸಯದಾನವ ನೀಡಬಲ್ಲಡೆ ಭಕ್ತಿ,
ನೀಡಿ ಮಿಕ್ಕುದ ಕಾಯ್ದುಕೊಂಡಿರಬಲ್ಲಡೆ
ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವ. ॥ ೩೨೪ ॥

೫೨೫

ಏನ ಮಾಡುವೆ? ಎನ್ನ ಪುಣ್ಯದ ಫಲವು!
ಶಾಂತಿಯ ಮಾಡಹೋದಡೆ ಬೇತಾಳನಾಯಿತ್ತು.
ಕೂಡಲಸಂಗಮದೇವರ ಪೂಜಿಸಿಹೆನೆಂದಡೆ
ಭಕ್ತಿಯೆಂಬ ಮೃಗ ಎನ್ನನಟ್ಟಿ ಬಂದು ನುಂಗಿತ್ತಯ್ಯಾ. || ೫೨೫ ||

೫೨೬

ಭಕ್ತಿಯೆಂಬ ಪೃಥ್ವಿಯ ಮೇಲೆ, ಗುರುವೆಂಬ ಬೀಜವಂಕುರಿಸಿ,
ಲಿಂಗವೆಂಬ ಎಲೆಯಾಯಿತ್ತು.
ಲಿಂಗವೆಂಬ ಎಲೆಯ ಮೇಲೆ
ವಿಚಾರವೆಂಬ ಹೂವಾಯಿತ್ತು,
ಆಚಾರವೆಂಬ ಕಾಯಾಯಿತ್ತು.
ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ
ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ. || ೫೨೬ ||



## ಮಾಹೇಶ್ವರನ ಜ್ಞಾನಿಸ್ಥಲ

೫೨೭

ಸ್ವಾಮಿ ನೀನು, ಶಾಶ್ವತ ನೀನು,
ಎತ್ತಿದೆ ಬಿರಿದ ಜಗವೆಲ್ಲರಿಯಲು.
ಮಹಾದೇವ, ಮಹಾದೇವ,
ಇಲ್ಲಿಂದ ಮೇಲೆ ಶಬ್ದವಿಲ್ಲ.
ಪಶುಪತಿ ಜಗಕ್ಕೇಕೋದೇವ
ಸ್ವರ್ಗ ಮರ್ತ್ಯ ಪಾತಾಳದೊಳಗೆ
ಒಬ್ಬನೇ ದೇವ ಕೂಡಲಸಂಗಮದೇವ. ॥ ೧ ॥

೫೨೮

ಶ್ರುತಿಗಗಮ್ಯ ದ್ವಾದಶಾದಿತ್ಯನಪ್ರತಿಮಮಹಿಮಂಗೆ ಪ್ರತಿಯುಂಟೆ?
'ಸೋಮಃ ಪವತೇ' ಎಂಬ ಶ್ರುತಿಯನರಿತು
'ಶಿವನೇಕೋದೇವ ರುದ್ರನದ್ವಿತೀಯ'ನೆಂದು
ನಂಬೂದು ಕಾಣಿರಣ್ಣಾ.
ಕೂಡಲಸಂಗಮದೇವನಲ್ಲದೆ ಇಲ್ಲವೆಂದು ಎತ್ತಿದೆ ಬಿರಿದ,
ಜಗವೆಲ್ಲರಿಯಲು. ॥ ೨ ॥

೫೨೯

ಉಪ್ಪರಗುಡಿ ನಂದಿವಾಹನ ಸದ್ಯೋಜಾತನ ಬಾಗಿಲ ಮುಂದೆ
ಸಾರುತ್ತೈದಾವೆ, ನೋಡಾ, ಶ್ರುತಿಗಳೂ ನಾಲ್ಕು ವೇದವೂ ಹುಸಿಯವೆ.
'ಭರ್ಗೋ ದೇವಸ್ಯ ಧೀಮಹಿ' ಎಂದುದಾಗಿ,
ಕೂಡಲಸಂಗನಲ್ಲದಿಲ್ಲೆಂದುದು ವೇದ. ॥ ೩ ॥

೫೩೦

'ವೇದ ಸ್ವಯಂಭು'ವೆಂಬ ವಾದಿ ಕೇಳೆಲವೋ.
'ಏಕೋ ದೇವೋ ರುದ್ರೋ ನ ದ್ವಿತೀಯಃ'
ಎಂದು ನಂಬೂದು ಕಾಣಿರಣ್ಣಾ.

'ಚಕಿತಮಭಿಧತ್ತೇ' ಎಂದು ಶ್ರುತಿ ಸಾರುತ್ತೈದಾವೆ
ಜಗದ ಕರ್ತ ಕೂಡಲಸಂಗಮದೇವನೊಬ್ಬನೆ ಕಾಣಿರಣ್ಣಾ. ॥ ೪ ॥

೫೩೧

ಶ್ರುತಿತತಿಯ ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನ ನಾನೇನೆಂಬೆನಯ್ಯಾ?
ಘನಕ್ಕೆ ಘನಮಹಿಮನ ಮನಕ್ಕಗೋಚರನ!
'ಅಣೋರಣೀಯಾನ್ ಮಹತೋ ಮಹೀಯಾನ್'
ಮಹಾದಾನಿ ಕೂಡಲಸಂಗಮದೇವ. ॥ ೫ ॥

೫೩೨

ಸಕಳ ನಿಷ್ಕಳವ ಕೂಡಿಕೊಂಡಿಪ್ಪೆಯಾಗಿ
ಸಕಳ ನೀನೇ, ನಿಷ್ಕಳ ನೀನೇ ಕಂಡಯ್ಯಾ.
'ವಿಶ್ವತಶ್ಚಕ್ಷು' ನೀನೇ ದೇವಾ, 'ವಿಶ್ವತೋಮುಖ' ನೀನೇ ದೇವಾ,
'ವಿಶ್ವತೋಬಾಹು' ನೀನೇ ದೇವಾ, ಕೂಡಲಸಂಗಮದೇವಾ. ॥ ೬ ॥

೫೩೩

ಎತ್ತೆತ್ತ ನೋಡಿದಡತ್ತತ್ತ ನೀನೆ ದೇವಾ,
ಸಕಲವಿಸ್ತಾರದ ರೂಹು ನೀನೆ ದೇವಾ,
'ವಿಶ್ವತಶ್ಚಕ್ಷು' ನೀನೆ ದೇವಾ,
'ವಿಶ್ವತೋಮುಖ' ನೀನೆ ದೇವಾ,
'ವಿಶ್ವತೋಬಾಹು' ನೀನೆ ದೇವಾ,
'ವಿಶ್ವತಃಪಾದ' ನೀನೆ ದೇವಾ, ಕೂಡಲಸಂಗಮದೇವಾ. ॥ ೭ ॥

೫೩೪

ಜಲ ಕೂರ್ಮ ನಾಗ ಮೇದಿನಿ ಸಪ್ತಸಾಗರ
ಅಜಾಂಡ ಹರಿವಿರಂಚಿಗಳು
ನಿಮ್ಮ ಉದರದ ಕೊನೆಯ ಪ್ರಾಣಿಗಳಯ್ಯಾ.
ಕೂಡಲಸಂಗನ ಮಹಾಮನೆಯಲ್ಲಿ ಅಸ್ತಿಗ್ರಾಹಕನೆಂಬ ಗಣೇಶ್ವರನ
ಇಚ್ಛಾಮಾತ್ರದಿಂದ ಜಗಜುಗವಯ್ಯಾ. ॥ ೮ ॥

೫೩೫

ರುದ್ರ ಮುಖದಲ್ಲಿ ವಿಷ್ಣು ಭುಜದಲ್ಲಿ,
ಜಂಘೆಯಲ್ಲಿ ಅಜ ಜನನವೊ.

ಇಂದ್ರ ಪಾದದಲ್ಲಿ ಚಂದ್ರ ಮನದಲ್ಲಿ,
ಚಕ್ಷುವಿನಲ್ಲಿ ಸೂರ್ಯ ಜನನವೊ.
ಮುಖದಲ್ಲಿ ಅಗ್ನಿಯು ಪ್ರಾಣದಲ್ಲಿ ವಾಯು
ನಾಭಿಯಲ್ಲಿ ಅಂತರಿಕ್ಷವೊ.
ಸಿರದಲುದಯ ತೆತ್ತೀಸಕೋಟಿ ದೇವತೆಗಳು
ಪಾದತಳದಲ್ಲಿ ಭೂಮಿ ಜನನವೊ.
ಶ್ರೋತ್ರದಲ್ಲಿ ದಶದಿಕ್ಕುವೊ.
ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ, ಅಕ್ಷಯನಗಣಿತನು.
ಸಾಸಿರ ತಲೆ, ಸಾಸಿರ ಕಣ್ಣು, ಸಾಸಿರ ಕೈ, ಸಾಸಿರ ಪಾದ.
ಸಾಸಿರ ಸನ್ನಿಹಿತ ನಮ್ಮ ಕೂಡಲಸಂಗಯ್ಯ. ॥ ೯ ॥

೫೩೬

ವಿಶ್ವಾಧಿಕೋ ರುದ್ರನ ಹೊಗಳುವ ಶ್ರುತಿಗಳು
'ವಿಶ್ವರೂಪಾಯ ವೈ ನಮಃ'
'ಪರಮರೂಪನೆ ನಮೋ, ಪರತತ್ವನೆ ನಮೋ,
ಆದಿಯಾರೂಢಭಯಂಕರನೆ ನಮೋ,
ಪರಿಯನು ಹರಿಸಿದನೇ' ಎಂದು ಶ್ರುತಿ ಸಾರುತ್ತಿರಲು
ಸಂಹಾರಕಾರಣನೆ ನಮೋ, ನಮ್ಮ ಕೂಡಲಸಂಗ
ಮಹದ್ ಮಹದ್ಭ್ಯೋ ನಮಃ. ॥ ೧೦ ॥

೫೩೭

ಅಯ್ಯುದೇ ಬ್ರಹ್ಮನ ಕಪಾಲ ಕರದಲ್ಲಿ,
ಅಯ್ಯುದೇ ವಿಷ್ಣುವಿನ ನಯನ ಪಾದದಲ್ಲಿ,
ಅಯ್ಯುದೇ ಕಾಮನ ಸುಟ್ಟ ಭಸ್ಮ ಮೈಯ ಮೇಲೆ,
ಮುಖ ಮೂದಲೆಯೇಕಯ್ಯಾ, ಕೂಡಲಸಂಗಮದೇವಾ. ॥ ೧೧

೫೩೮

ಹರನ ಕೊರಳಲಿಪ್ಪ ಕರೋಟಿಮಾಲೆಯ
ಶಿರದ ಲಿಖಿತವ ಕಂಡು, ಮರುಳ ತಂಡಗಳು ಓದಿ ನೋಡಲು,
ಇವನಜ ಇವ ಹರಿ ಇವ ಸುರಪತಿ ಇವ ಧರಣೇಂದ್ರ
ಇವನಂತಕನೆಂದು ಹರುಷದಿಂದ ಸರಸವಾಡಿತ ಕಂಡು,
ಹರ ಮುಕುಳಿತನಾಗಿ ನಕ್ಕ, ನಮ್ಮ ಕೂಡಲಸಂಗಮದೇವ. ॥ ೧೨ ॥

೫೩೯

ಅದುರಿತು ಪಾದಾಘಾತದಿಂದ ಧರೆ,
ಬಿದಿರಿದುವು ಮಕುಟ ತಾಗಿ ತಾರಕೆಗಳು,
ಉದುರಿದುವು ಕೈ ತಾಗಿ ಲೋಕಂಗಳೆಲ್ಲಾ!
ಮಹೀಪಾದಾಘಾತಾದ್ ವ್ರಜತಿ ಸಹಸಾ ಸಂಶಯಪದಂ।
ಪದಂ ವಿಷ್ಣೋರ್ಭ್ರಾಮ್ಯದ್ ಭುಜಪರಿಘರುಗ್ಣಗ್ರಹಗಣಃ
ಮುಹುರ್ದ್ಯೌರ್ದೌಸ್ಥ್ಯಂ ಯಾತ್ಯನಿಭೃತಜಟಾತಾಡಿತತಟಾ।
ಜಗದ್ರಕ್ಷಾಯೈ ತ್ವಂ ನಟಸಿ ನನು ವಾಮೈವ ವಿಭುತಾ।
ನಮ್ಮ ಕೂಡಲಸಂಗಮದೇವನಿಂದು ನಾಂಟ್ಯವನಾಡೆ. || ೧೩ ||

೫೪೦

ಆರು ಕೋಟಿ ಬ್ರಹ್ಮರು ಮಡಿವಲ್ಲಿ
ನಾರಾಯಣಗೊಂದು ದಿನವಾಯಿತ್ತು.
ನಾರಾಯಣರೊಂದು ಕೋಟಿ ಮಡಿವಲ್ಲಿ
ರುದ್ರನ ಕಣ್ಣೆವೆ ಹಳಚಿತ್ತು.
ರುದ್ರಾವತಾರ ಹಲವಳಿವಲ್ಲಿ
ಕೂಡಲಸಂಗಮದೇವನೇನೆಂದರಿಯ. || ೧೪ ||

೫೪೧

ಯುಗ ಜುಗ ಪ್ರಳಯವಹಂದೂ ಕಾಣೆನಿಂದೂ ಕಾಣೆ!
ಧಗಿಲು ಭುಗಿಲು ಎಂದುರಿವಂದೂ ಕಾಣೆನಿಂದೂ ಕಾಣೆ!
ಕೂಡಲಸಂಗಮದೇವನಲ್ಲದೆ ತಲೆದೋರುವ
ದೈವಂಗಳನಂದೂ ಕಾಣೆನಿಂದೂ ಕಾಣೆ. || ೧೫ ||

೫೪೨

ಒಬ್ಬ ಕೆಂಚ, ಒಬ್ಬ ಕರಿಕ, ಒಬ್ಬ ಶುದ್ಧಧವಳಿತನೆಂತಯ್ಯಾ ಲಿಂಗವೆ?
ಒಬ್ಬರಿಗೊಬ್ಬರು ಘನವೆಂಬರು, ಅದೆಂತಯ್ಯಾ?
ಒಬ್ಬರಿಗೊಬ್ಬರು ಹಿರಿದೆಂಬರು, ಎಂತಯ್ಯಾ?
ಬ್ರಹ್ಮಂಗೆ ಪ್ರಳಯ, ವಿಷ್ಣುವಿಂಗೆ ಮರಣ ಉಂಟು.
ಕೂಡಲಸಂಗಂಗಿಲ್ಲ. || ೧೬ ||

೫೪೩

ಹರಿ ಹರನೊಂದೆ ಎಂದಡೆ, ಸುರಿಯವೆ ಬಾಯಲಿ ಬಾಲಹುಳುಗಳು?
ಹರಿಗೆ ಹತ್ತು ಪ್ರಳಯ, ಬ್ರಹ್ಮಂಗನಂತ ಪ್ರಳಯ,
ಹರಂಗೆ ಪ್ರಳಯ ಉಂಟೆಂಬುದ ಬಲ್ಲಡೆ ನೀವು ಹೇಳಿರೆ?
ಪ್ರಳಯ ಪ್ರಳಯ ಅಂದಂದಿಂಗೆ
ಹಳೆಯ, ನಮ್ಮ ಕೂಡಲಸಂಗಮದೇವ. ॥ ೧೭ ॥

೫೪೪

ವಿಷ್ಣು ಕರ್ಮಿ ರುದ್ರ ನಿಷ್ಕರ್ಮಿ: ಕ್ರಮವನರಿಯದೆ ನುಡಿವಿರೊ!
ವೇದಶ್ರುತಿಗಳ ತಿಳಿಯಲರಿಯದೆ ವಾದುಮಾಡುವರೆಲ್ಲ ಕೇಳಿ:
ವಿಷ್ಣು ನಾನಾಯೋನಿಯಲ್ಲಿ ಬಾರದ ಭವಂಗಳಲ್ಲಿ ಬರುತಿಪ್ಪ,
ರುದ್ರನಾವ ಯೋನಿಯಲ್ಲಿ ಬಂದನೆಂದು ನೀವು ಹೇಳಿರೊ!
ಓಂ ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ।
ಇಂದ್ರಸ್ಯ ಯುಜ್ಯಃ ಸಖಾ ॥
ತದ್ ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ।
ದಿವೀವ ಚಕ್ಷುರಾತತಂ ॥
ತದ್ ವಿಪ್ರಾಸೋ ವಿಪನ್ಯವೋ ಜಾಗೃವಾಂ ಸಃ ಸಮಿಂಧತೇ ।
ವಿಷ್ಣೋರ್ಯತ್ಪರಮಂ ಪದಂ ॥
ಎಂಬ ಶ್ರುತಿವಚನವ ತಿಳಿಯಿಂ ಭೋ!
ವರ್ಮವನೆತ್ತಿ ನುಡಿದಲ್ಲದೆ ನಿಲ್ಲಿರಿ:
ನಿಮ್ಮ ಕರ್ಮವು ಅತ್ಯತಿಷ್ಠದ್ದಶಾಂಗುಲದಿಂದತ್ತತ್ತಲೆ,
ಕೂಡಲಸಂಗಮದೇವಾ. ॥ ೧೮ ॥

೫೪೫

ಅಮೃತವತಿ ಸೋಮಶಂಭುವಿಂಗೆ ಹುಟ್ಟಿದಾತನಿಂದ್ರ.
ಸತ್ಯಋಷಿ ಜೇಷ್ಠಾದೇವಿಗೆ ಹುಟ್ಟಿದಾತ ಬ್ರಹ್ಮ.
ವಸುದೇವ ದೇವಕಿಗೆ ಹುಟ್ಟಿದಾತ ವಿಷ್ಣು.
ನಾಭಿರಾಜ ಮರುತಾದೇವಿಗೆ ಹುಟ್ಟಿದಾತನರುಹ.
ಇವರೆಲ್ಲರು ಯೋನಿಜರೆಂಬುದ ತ್ರೈಜಗ ಬಲ್ಲುದು.
ಉತ್ಪತ್ತಿ ಸ್ಥಿತಿ ಪ್ರಳಯಕ್ಕೆ ಹೊರಗಾದ ಕೂಡಲಸಂಗಮದೇವಂಗೆ
ಮಾತಾಪಿತರುಗಳುಳ್ಳಡೆ ಹೇಳಿರೊ! ॥ ೧೯ ॥

೫೪೬

ಇಬ್ಬರು ಮೂವರು ದೇವರೆಂದು ಉಬ್ಬಿ ಮಾತನಾಡಬೇಡ,
ಒಬ್ಬನೆ ಕಾಣಿರೊ, ಇಬ್ಬರೆಂಬುದು ಹುಸಿ ನೋಡಾ!
ಕೂಡಲಸಂಗಮದೇವನಲ್ಲದಿಲ್ಲೆಂದಿತ್ತು ವೇದ. || ೨೦ ||

೫೪೭

ಹುಟ್ಟಿಸುವಾತ ಬ್ರಹ್ಮನೆಂಬರು, ರಕ್ಷಿಸುವಾತ ವಿಷ್ಣುವೆಂಬರು ನೋಡಾ,
ಬ್ರಹ್ಮ ತನ್ನ ಶಿರವನೇತಕ್ಕೆ ಹುಟ್ಟಿಸಲಾರ?
ವಿಷ್ಣು ತನ್ನ ಮಗನನೇತಕ್ಕೆ ರಕ್ಷಿಸಲಾರ?
ದುಷ್ಟನಿಗ್ರಹ ಶಿಷ್ಟಪ್ರತಿಪಾಲಕ ನಮ್ಮ ಕೂಡಲಸಂಗಮದೇವ. || ೨೧ ||

೫೪೮

ಕೇಶವನಲ್ಲದೆ ಅತಃಪರದೈವವಿಲ್ಲೆಂದು
ವೇದವ್ಯಾಸಮುನಿ ಭಂಗಬಟ್ಟುದನರಿಯಿರೆ?
"ಅಹಂ ಸರ್ವಜಗತ್‌ಕರ್ತಾ ಮಮ ಕರ್ತಾ ಮಹೇಶ್ವರಃ"
ಎಂದು ವಿಷ್ಣು ಹೇಳಿದ ವಚನವ ಮರೆದಿರಲ್ಲಾ!
ಕೂಡಲಸಂಗಮದೇವನು
ದಕ್ಷನ ಯಜ್ಞವ ಕೆಡಿಸಿದುದ ಮರೆದಿರಲ್ಲಾ! || ೨೨ ||

೫೪೯

ನಾರಾಯಣನೆಂಬವನ ಕಾಣೆ, ಗೀರಾಯಣನೆಂಬವನ ಕಾಣೆ.
ಬೊಮ್ಮನೆಂಬವನ ಕಾಣೆ, ಗಿಮ್ಮನೆಂಬವನ ಕಾಣೆ.
ವಿಷವಟ್ಟಿ ಸುಡುವಲ್ಲಿ, ವೀರಭದ್ರ ಬಡಿವಲ್ಲಿ
ಕೂಡಲಸಂಗಯ್ಯಂಗೆ ಶರಣೆಂದು ಮೊರೆಯಿಟ್ಟರೆಲ್ಲರು. || ೨೩ ||

೫೫೦

ಅಮೃತವ ಕಡೆವಲ್ಲಿ, ವಿಷವಟ್ಟಿ ಸುಡುವಲ್ಲಿ,
ದೇವರೆಂಬವರೆತ್ತ ಹೋದರೇನಿಂ ಭೋ?
ಅಂದೊಮ್ಮೆ ಓಡಿಹೋಗಿ ಆ ಶಿವನ ಮರೆಯ ಹೊಗುವಂದು
ದೇವರೆಂಬವರೆತ್ತ ಹೋದರೇನಿಂ ಭೋ?
ಕೂಡಲಸಂಗಯ್ಯ ದೇವರಿಗೆ ದೇವನು,
ಇವರೆಲ್ಲ ಆಳೆಂಬುದನರಿಯಿರಿಂ ಭೋ! || ೨೪ ||

೫೫೧

ವಿಷ್ಣು ಬಲ್ಲಿದನೆಂಬೆನೆ?
ದಶಾವತಾರದಲ್ಲಿ ಭಂಗಬಟ್ಟುದಕ್ಕೆ ಕಡೆಯಿಲ್ಲ.
ಬ್ರಹ್ಮ ಬಲ್ಲಿದನೆಂಬೆನೆ?
ಶಿರ ಹೋಗಿ ನಾನಾ ವಿಧಿಯಾದ.
ವೇದ ಬಲ್ಲಿತ್ತೆಂಬೆನೆ?
ನಾನಾಮುಖದಲ್ಲಿ ಸ್ತುತಿಯಿಸಿತ್ತಲ್ಲದೆ
ಲಿಂಗದ ನಿಲುಕಡೆಯ ಕಾಣದು.
ಶಾಸ್ತ್ರ ಬಲ್ಲಿತ್ತೆಂಬೆನೆ? ಶಬ್ದಕ್ರೀ.
ಪುರಾಣ ಬಲ್ಲಿತ್ತೆಂಬೆನೆ? ಪೂರ್ವಕ್ರೀ.
ಆಗಮ ಬಲ್ಲಿತ್ತೆಂಬೆನೆ? ವಾಯು ಹೊಂದಿತ್ತು.
ಇದು ಕಾರಣ ಕೂಡಲಸಂಗಯ್ಯನೆ ನಿತ್ಯ,
ಉಳಿದ ದೈವವೆಲ್ಲ ಅನಿತ್ಯ ಕಾಣಿ ಭೋ. ॥ ೨೫ ॥

೫೫೨

ಮರೆಯಲಾಗದು ಹರಿಯ? ಮರೆಯಲಾಗದು ಬ್ರಹ್ಮನ?
ಮರೆಯಲಾಗದು ತೆತ್ತೀಸಕೋಟಿ ದೇವರ್ಕಳ?
ನಮ್ಮ ಕೂಡಲಸಂಗಮದೇವರ ಮರೆಯಲಹುದು? ॥ ೨೬ ॥

೫೫೩

ಬಿದಿರೆಲೆಯ ಮೆಲಿದಡೆ ಮೆಲಿದಂತಲ್ಲದೆ,
ರಸವ ಹಡೆಯಲು ಬಾರದು.
ಮಳಲ ಹೊಸೆದಡೆ ಹೊಸೆದಂತಲ್ಲದೆ,
ಸರವಿಯ ಹಡೆಯಲುಬಾರದು.
ನೀರ ಕಡೆದಡೆ ಕಡೆದಂತಲ್ಲದೆ,
ಬೆಣ್ಣೆಯ ಹಡೆಯಲುಬಾರದು.
ನಮ್ಮ ಕೂಡಲಸಂಗಮದೇವನಲ್ಲದೆ
ಅನ್ಯದೈವಕ್ಕೆರಗಿದಡೆ
ಹೊಳ್ಳ ಕುಟ್ಟಿ ಕೈ ಹೊಟ್ಟೆಯಾದಂತೆ ಆಯಿತ್ತಯ್ಯಾ. ॥ ೨೭ ॥

೫೫೪

ಆಗಳೂ ಲೋಗರ ಮನೆಯ ಬಾಗಿಲ ಕಾಯ್ದುಕೊಂಡಿಪ್ಪವು ಕೆಲವು ದೈವಂಗಳು.
ಹೋಗೆಂದಡೆ ಹೋಗವು,
ನಾಯಿಗಿಂದ ಕರಕಷ್ಟ ಕೆಲವು ದೈವಂಗಳು.
ಲೋಗರ ಬೇಡಿಕೊಂಡುಂಬ ದೈವಂಗಳು
ತಾವೇನ ಕೊಡುವವು ಕೂಡಲಸಂಗಮದೇವಾ? ॥ ೨೮ ॥

೫೫೫

ಗಾಡಿಗ ಡಿಂಬುಗಂಗೆ
ಚಿಕ್ಕಮುಟ್ಟಿಗೆ, ಹಸುರಂಬಲಿಮುಟ್ಟಿಗೆ, ಹುರಿಬುತ್ತಿಯ ಬೇಡಿ,
ಮನುಷ್ಯರ ಹಿಡಿದು ಪೀಡಿಸಿ, ತಮ್ಮ ಬಸುರ್ಗೆ ಕಾಣವೆ,
ಈಡಾಡಿದ ಕೂಳಂಬಲಿಯನಾಯ್ದು ಕುರುಕುವ
ಹೇಸಿ ದೈವಂಗಳ ಬೇಡಿ ಬೇಡಿ ನಿರರ್ಥ ಕೆಡಬೇಡ, ಎಲವೋ,
ಕೂಡಲಸಂಗಮದೇವರ ನೆರೆನಂಬೂದೆಲವೊ. ॥ ೨೯

೫೫೬

ಹಾಳುಮೊರಡಿಗಳಲ್ಲಿ ಊರ ದಾರಿಗಳಲ್ಲಿ
ಕೆರೆ ಬಾವಿ ಹೂಗಿಡು ಮರಂಗಳಲ್ಲಿ
ಗ್ರಾಮಮಧ್ಯಂಗಳಲ್ಲಿ ಜಲಪಥ ಪಟ್ಟಣಪ್ರವೇಶದಲ್ಲಿ
ಹಿರಿಯಾಲದ ಮರದಲ್ಲಿ ಮನೆಯ ಮಾಡಿ,
ಕರೆವೆಮ್ಮೆಯ ಹಸುಗೂಸು ಬಸುರಿ ಬಾಣತಿ
ಕುಮಾರಿ ಕೊಡಗೂಸು ಎಂಬವರ ಹಿಡಿದುಂಬ ತಿರಿದುಂಬ
ಮಾರಯ್ಯ ಬೀರಯ್ಯ ಕೇಚರಗಾವಿಲ ಅಂತರಬೆಂತರ
ಕಾಳಯ್ಯ ಮಾರಯ್ಯ ಮಾಳಯ್ಯ ಕೇತಯ್ಯಗಳೆಂಬ ನೂರು ಮಡಕೆಗೆ
ನಮ್ಮ ಕೂಡಲಸಂಗಮದೇವ ಶರಣೆಂಬುದೊಂದೆ ದಡಿ ಸಾಲದೆ? ॥ ೩೦

೫೫೭

ಅರಗು ತಿಂದು ಕರಗುವ ದೈವವನೆಂತು ಸರಿಯೆಂಬೆನಯ್ಯಾ?
ಉರಿಯ ಕಂಡಡೆ ಮುರುಟುವ ದೈವವನೆಂತು ಸರಿಯೆಂಬೆನಯ್ಯಾ?
ಅವಸರ ಬಂದಡೆ ಮಾರುವ ದೈವವನೆಂತು ಸರಿಯೆಂಬೆನಯ್ಯಾ?
ಅಂಜಿಕೆಯಾದಡೆ ಹೂಳುವ ದೈವವನೆಂತು ಸರಿಯೆಂಬೆನಯ್ಯಾ?
ಸಹಜಭಾವ ನಿಜೈಕ್ಯ ಕೂಡಲಸಂಗಮದೇವನೊಬ್ಬನೆ ದೇವ. ॥ ೩೧ ॥

೫೫೮

ಮಾರಿಕವ್ವೆಯ ನೋಂತು ಕೊರಳಲ್ಲಿ ಕಟ್ಟಿಕೊಂಬರು,
ಸಾಲಬಟ್ಟಡೆ ಮಾರಿಕೊಂಬರಯ್ಯಾ.
ಸಾಲಬಟ್ಟಡೆ ಅವರನೊತ್ತೆಯಿಟ್ಟು ಕೊಂಡುಂಬರಯ್ಯಾ.
ಮಾರುವೋಗನೊತ್ತೆಯೋಗ
ನಮ್ಮ ಕೂಡಲಸಂಗಮದೇವ. || ೩೨ ||

೫೫೯

ಉಣಲುಡಲು ಮಾರಿಯಲ್ಲದೆ, ಕೊಲಲು ಕಾಯಲು ಮಾರಿಯೆ?
ತನ್ನ ಮಗನ ಜವನೊಯ್ದಲ್ಲಿ ಅಂದೆತ್ತ ಹೋದಳು ಮಾರಿಕವ್ವೆ?
ಈವಡೆ ಕಾವಡೆ ನಮ್ಮ ಕೂಡಲಸಂಗಯ್ಯನಲ್ಲದೆ
ಮತ್ತೊಂದು ದೈವವಿಲ್ಲ. || ೩೩ ||

೫೬೦

ಮೊರನ ಗೋಟಿಲಿ ಬಪ್ಪ ಕಿರುಕುಳದೈವಕ್ಕೆ
ಕುರಿಯನಿಕ್ಕಿಹೆವೆಂದು ನಲಿನಲಿದಾಡುವರು,
ಕುರಿ ಸತ್ತು ಕಾವುದೆ ಹರ ಮುಳಿದವರ?
ಕುರಿ ಬೇಡ ಮರಿ ಬೇಡ,
ಬರಿಯ ಪತ್ರೆಯ ತಂದು ಮರೆಯದೆ ಪೂಜಿಸು
ನಮ್ಮ ಕೂಡಲಸಂಗಮದೇವನ. || ೩೪ ||

೫೬೧

ಬನ್ನಿರೇ ಅಕ್ಕಗಳು, ಹೋಗಿರೇ ಆಲದ ಮರಕ್ಕೆ.
ಕಚ್ಚುವುವೇ ನಿಮ್ಮ, ಚಿಪ್ಪಿನ ಹಲ್ಲುಗಳು.
ಬೆಚ್ಚಿಸುವುವೇ ನಿಮ್ಮ, ಬಜ್ಜಣಿಯ ರೂಹುಗಳು.
ನಮ್ಮ ಕೂಡಲಸಂಗಮದೇವನಲ್ಲದೆ
ಪರದೈವಂಗಳು ಮನಕ್ಕೆ ಬಂದವೆ?
ಬಿಕ್ಕನೆ ಬಿರಿವ ದೈವಂಗಳು. || ೩೫ ||

೫೬೨

ಮಡಕೆ ದೈವ, ಮೊರ ದೈವ, ಬೀದಿಯ ಕಲ್ಲು ದೈವ,
ಹಣಿಗೆ ದೈವ, ಬಿಲ್ಲನಾರಿ ದೈವ, ಕಾಣಿರೊ!

ಕೊಳಗ ದೈವ, ಗಿಣ್ಣಲು ದೈವ, ಕಾಣಿರೊ!
ದೈವ ದೈವವೆಂದು ಕಾಲಿಡಲಿಂಬಿಲ್ಲ,
ದೈವನೊಬ್ಬನೆ ಕೂಡಲಸಂಗಮದೇವ. ॥ ೩೬ ॥

೫೬೩

ರಿಣ ತಪ್ಪಿದ ಹೆಂಡಿರಲ್ಲಿ, ಗುಣ ತಪ್ಪಿದ ನಂಟರಲ್ಲಿ,
ಜೀವವಿಲ್ಲದ ದೇಹದಲ್ಲಿ ಫಲವೇನೊ?
ಆಳ್ದನೊಲ್ಲದಾಳಿನಲ್ಲಿ, ಸಿರಿ ತೊಲಗಿದರಸಿನಲ್ಲಿ,
ವರವಿಲ್ಲದ ದೈವದಲ್ಲಿ ಫಲವೇನೊ?
ಕಳಿದ ಹೂವಿನಲ್ಲಿ ಕಂಪನುಳಿದ ಸೂಳೆಯಲ್ಲಿ ಹೆಂಪ,
ಕೊಳಚೆಯ ನೀರಿನಲ್ಲಿ ತಂಪನರಸುವಿರಿ ಮರುಳೆ.
ವರಗುರು ವಿಶ್ವಕ್ಕೆಲ್ಲ ಗಿರಿಜಾಮನೋವಲ್ಲಭ–
ಪರಮ ಕಾರಣಿಕ ನಮ್ಮ ಕೂಡಲಸಂಗಮದೇವ. ॥ ೩೭ ॥

೫೬೪

ಲಿಂಗಶಿವಾಲಯದ ಮುಂದೆ ಸಿಂಹ ಶೂದ್ರಿಕನಲ್ಲದಿಲ್ಲ,
ನಂದಿಕೇಶ್ವರ ಭೃಂಗಿನಾಂಟ್ಯ ನಮ್ಮ ಲಿಂಗನ ಮುಂದೆ.
ಇದಕ್ಕೆ ದಿಷ್ಟದೀವಿಗೆ, ನಮ್ಮ ಲಿಂಗನ ಮುಂದೆ
ಅನ್ಯದೈವವೆಂಬುದ ತೋರಿಯೂ ಕಾಣಬಾರದು.
ನೊಸಲಕಣ್ಣ ಅಭವನೊಬ್ಬನೆ ದೈವ ಕೂಡಲಸಂಗಮದೇವ. ॥ ೩೮ ॥

೫೬೫

ಗುಡಿಯೊಳಗಿರ್ದು ಗುಡಿಯ ನೇಣ ಕೊಯಿದಡೆ,
ಗುಡಿಯ ದಡಿಗೆ ಬಿದ್ದು ಹಲ್ಲು ಹೋಹುದು, ನೋಡಾ.
ಪೊಡವಿಗೀಶ್ವರನ ಗರ್ಭವಾಸದೊಳಗಿರ್ದು ನುಡಿವರು
ಮತ್ತೊಂದು ದೈವವುಂಟೆಂದು.
ತುಡುಗುಣಿನಾಯನು ಪಿಡಿತಂದು ಸಾಕಿದಡೆ
ತನ್ನೊಡೆಯಂಗೆ ಬಗಳುವಂತೆ ಕಾಣಾ
ಕೂಡಲಸಂಗಮದೇವಾ. ॥ ೩೯ ॥

೫೬೬

ಅಸಮಾಕ್ಷಲಿಂಗಕ್ಕೆ ಅನ್ಯದೈವವ ಸರಿಯೆಂಬವನ ಬಾಯಲ್ಲಿ
ಮಸೆದ ಕೂರಲಗನಿಕ್ಕದೆ ಮಾಬನೆ?
ಹುಸಿಯಾಗಿ ನುಡಿವವನ ನಾಯಾಗಿ ಬಗುಳಿಸನೆ?
ಹಿರಿಯರುತ್ತಮರೆನ್ನದವರ ಕುದುರೆಯಾಗಿ ಕಟ್ಟಿಸನೆ?
ಗುರುಲಘುವೆನ್ನದವರ ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಬನೆ?
ಪರಸ್ತ್ರೀಗಳುಪಿದವರ ಗಾಣದಲಿಕ್ಕಿ ಹಿಳಿಯನೆ?
ಪರಧನಕ್ಕಳುಪಿದವರ ಹಿಡಿ ಖಂಡವ ಕೊಯ್ಯನೆ?
ಎಲೆ ಕೂಡಲಸಂಗಮದೇವಾ, ನಿಮ್ಮ ಹೇಳಿದ ಹೇಳಿಕೆಯಿಂದ
ಪಿಂಬೇರ ಮೈ[ಲುಗ] ಮೇಳವಾಡುತ ಇದ್ದ ಕಾಣಾ, ತ್ರೈಜಗದೊಳಗೆ. || ೪೦ ||

೫೬೭

ಶಿವಮಯ ವಿಷ್ಣುವಲ್ಲ, ವಿಷ್ಣುಮಯ ಶಿವನಲ್ಲ, ನುಡಿಯದಿರಿಂ ಭೋ!
ನಾರಾಯಣ ಹರನಲ್ಲ ನುಡಿಯದಿರಿಂ ಭೋ!
ಶಿವನು ವಿಷ್ಣುವಲ್ಲ ನುಡಿಯದಿರಿಂ ಭೋ!
ನಮ್ಮ ಕೂಡಲಸಂಗಯ್ಯನನರಿಯದ ಸೂನೆಗಾರರೆಲ್ಲ
ನುಡಿಯದಿರಿಂ ಭೋ! || ೪೧ ||

೫೬೮

ಅವಲಕ್ಷಣ ನಾಯನುಡಿಯ ನಾಲಗೆಯ ಸಡಗರ
ಡೊವಿಗೆ ಮೃತ್ಯುವಿನ ನುಡಿಗೊಳಗಾಯಿತ್ತು.
ಬೇಡವೊ ಪರವಾದಿ ಗಳುಹದಿರು.
ಬೇಡವೊ ದೂಷಕ ಬಗುಳದಿರು.
ಭಕ್ತಿಗೆಯೂ ಬೇಟಕ್ಕೆಯೂ ಜಾತಿಸೂತಕವುಂಟೆ?
ಪರುಷ ಮುಟ್ಟಲು ಕಬ್ಬುನ ಹೊನ್ನಾಯಿತ್ತು, ಕಾಣಾ.
ನಮ್ಮ ಕೂಡಲಸಂಗನ ಶರಣರನವಲಿವರೆಂದಡೆ
ಕುಂಭಿಪಾತಕ ನಾಯಕನರಕ ತಪ್ಪದು ಕಾಣಾ. || ೪೨ ||

೫೬೯

ವಿಷ್ಣುವ ಪೂಜಿಸಿ ಮುಡುಹ ಸುಡಿಸಿಕೊಂಬುದ ಕಂಡೆ,
ಜಿನನ ಪೂಜಿಸಿ ಬತ್ತಲೆಯಿಪ್ಪುದ ಕಂಡೆ,
ಮೈಲಾರನ ಪೂಜಿಸಿ ನಾಯಾಗಿ ಬಗಳೊದ ಕಂಡೆ,

ನಮ್ಮ ಕೂಡಲಸಂಗನ ಪೂಜಿಸಿ ದೇವಾ,
ಭಕ್ತರೆನಿಸಿಕೊಂಬುದ ಕಂಡೆ. ॥ ೪೨ ॥

೫೭೦

ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಗೌತಮಮುನಿಗೆ ಗೋವೇಧೆಯಾಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಬಲಿಗೆ ಬಂಧನವಾಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಕರ್ಣನ ಕವಚ ಹೋಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ದಕ್ಷಂಗೆ ಕುರಿದಲೆಯಾಯಿತ್ತು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ಪರಶುರಾಮ ಸಮುದ್ರಕ್ಕೆ ಗುರಿಯಾದನು.
ಬ್ರಾಹ್ಮಣನೆ ದೈವವೆಂದು ನಂಬಿದ ಕಾರಣ
ನಾಗಾರ್ಜುನನ ತಲೆ ಹೋಯಿತ್ತು.
ದೇವಾ, ಭಕ್ತನೆಂದು ನಂಬಿದ ಕಾರಣ
ನಮ್ಮ ಕೂಡಲಸಂಗನ ಶರಣರು ಕೈಲಾಸವಾಸಿಗಳಾದರು. ॥ ೪೪ ॥

೫೭೧

ಆದಿ ಪುರಾಣ ಅಸುರರಿಗೆ ಮಾರಿ,
ವೇದಪುರಾಣ ಹೋತಿಂಗೆ ಮಾರಿ.
ರಾಮಪುರಾಣ ರಕ್ಕಸರಿಗೆ ಮಾರಿ,
ಭಾರತಪುರಾಣ ಗೋತ್ರಕ್ಕೆ ಮಾರಿ.
ಎಲ್ಲಾ ಪುರಾಣ ಕರ್ಮಕ್ಕೆ ಮೊದಲು,
ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲ
ಕೂಡಲಸಂಗಮದೇವಾ. ॥ ೪೫ ॥

೫೭೨

ನಿಮ್ಮ ವಚನವೆನ್ನ ಪುಣ್ಯವೆಂಬುದು.
ಹುಸಿಯಾಯಿತ್ತು ನೋಡಾ ಶಾಸ್ತ್ರದ ವಚನ: ಹೋತಿಂಗೆ ಮಾರಿ,
ಎಂತು ನಂಬುವೆನಯ್ಯಾ?

ನಾನು ಕೊಲ್ಲೆನು, ನೀಇು ಕೊಂದಿತೆಂಬ ಸೂನೆಗಾರರನೇನೆಂಬೆ
ಕೂಡಲಸಂಗಮದೇವಾ. || ೪೬ ||

೫೭೩

ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು
ಎಲೆ ಹೋತೇ ಅಳು, ಕಂಡಾ!
ವೇದವನೋದಿದವರ ಮುಂದೆ ಅಳು, ಕಂಡಾ!
ಶಾಸ್ತ್ರ ಕೇಳಿದವರ ಮುಂದೆ ಅಳು, ಕಂಡಾ!
ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ. || ೪೭ ||

೫೭೪

ದಕ್ಷಯಾಗವ ನಡೆಸಲೆಂದು ಅಜಮುಖ್ಯರಾದ ಸುರರೆಲ್ಲ
ನೆರೆದು ಬಂದ ಬಾಯ ನೋಡಾ.
ಬಾಯ ತಪ್ಪಿಸಿ ಉಣಬಂದ ದೈವದ ಬೆಂದ ಬಾಯ ನೋಡಾ.
ಉಣ್ಣದೆ ಉಡದೆ ಹೊಗೆಯ ಕೈಯಲಿ ಸತ್ತ ಅಣ್ಣಗಳ ಕೇಡ ನೋಡಾ
ಕೂಡಲಸಂಗಮದೇವಾ. || ೪೮ ||

೫೭೫

ಏನಯ್ಯಾ, ವಿಪ್ರರು ನುಡಿದಂತೆ ನಡೆಯರು, ಇದೆಂತಯ್ಯಾ?
ತಮಗೊಂದು ಬಟ್ಟೆ, ಶಾಸ್ತ್ರಕೊಂದು ಬಟ್ಟೆ!
ಕೂಡಲಸಂಗಮದೇವಯ್ಯಾ, ಹೊಲೆಯರ ಬಸುರಲ್ಲಿ
ವಿಪ್ರರು ಹುಟ್ಟಿ ಗೋಮಾಂಸ ತಿಂಬರೆಂಬುದಕ್ಕೆ ಇದೆ ದೃಷ್ಟ. || ೪೯ ||

೫೭೬

ಹೊಲೆಯೊಳಗೆ ಹುಟ್ಟಿ ಕುಲವನರಸುವೆ,
ಎಲವೊ, ಮಾತಂಗಿಯ ಮಗ ನೀನು.
ಸತ್ತುದನೆಳೆವನೆತ್ತಳ ಹೊಲೆಯ?
ಹೊತ್ತು ತಂದು ನೀವು ಕೊಲುವಿರಿ.
ಶಾಸ್ತ್ರವೆಂಬುದು ಹೋತಿಂಗೆ ಮಾರಿ,
ವೇದವೆಂಬುದು ನಿಮಗೆ ತಿಳಿಯದು.
ನಮ್ಮ ಕೂಡಲಸಂಗನ ಶರಣರು

ಕರ್ಮವಿರಹಿತರು, ಶರಣಸನ್ನಿಹಿತರು, ಅನುಪಮಚಾರಿತ್ರರು.
ಅವರಿಗೆ ತೋರಲು ಪ್ರತಿಯಿಲ್ಲವೋ. ॥ ೫೦ ॥

೫೭೭

ಇಟ್ಟಿಯ ಹಣ್ಣ ನರಿ ತಿಂದು ಸೃಷ್ಟಿ ತಿರುಗಿತ್ತೆಂಬಂತೆ
ಮಟ್ಟಿಯನಿಟ್ಟ ದ್ವಿಜರ ಮಾತದೇಕೆ?
ಹಗಲುಗಾಣದ ಗೂಗೆ ಇರುಳಾಯಿತ್ತೆಂದಡೆ,
ಜಗಕ್ಕೆ ಇರುಳಪ್ಪುದೆ ಮರುಳೆ?
ಹೋಮದ ನೆವದಲ್ಲಿ ಹೋತನು ಕೊಂದು ತಿಂಬ
ಅನಾಮಿಕರೊಡನಾಡಿ ಗೆಲಿವುದೇನು?
ಕೂಡಲಸಂಗಮದೇವಾ. ॥ ೫೧ ॥

೫೭೮

ಮೀಂಬುಲಿಗನ ಹಕ್ಕಿಯಂತೆ ನೀರ ತಡಿಯಲಿದ್ದು
ಮೂಗ ಹಿಡಿದು ಧ್ಯಾನಮಾಡುವರಯ್ಯಾ.
ಬಿಟ್ಟ ಮಂಡೆವೆರಸಿ ಬಾಯ ಮಿಡುಕಿಸುತ
ಕಣ್ಣ ಮುಚ್ಚಿ ಬೆರಳನೆಣಿಸುವರಯ್ಯಾ—
[ತ]ಮ್ಮ ಕೈಯಲಿ ಕಟ್ಟಿದ ದರ್ಭೆಯ ಹುಲ್ಲು
ಕೂಡಲಸಂಗನನರಿಯದೆ ಮೊರೆಯಿಡುವಂತೆ. ॥ ೫೨ ॥

೫೭೯

ಮಾಣದೆ ಅರಳೆಯ ತಿಟ್ಟನೆ ತಿರುಗುವ ಗಾಣದೆತ್ತಿನಂತೆ,
ಪೂರ್ವಲಿಖಿತ ಮುಂದುಗಾಣಲೀಯದು.
ನೀವೆಲ್ಲ ವಾಯಕ್ಕೆ ಕೆಡಬೇಡ, ಮಾಣದೆ ಪೂಜಿಸು ಲಿಂಗವ.
ಹೆರರ ಗೋಣ ಕೊಯ್ದೆನೆಂದು ಮಂತ್ರವನೋದುವ
ನೇಣುಗಾರರ ಮೆಚ್ಚ ಕೂಡಲಸಂಗಮದೇವ. ॥ ೫೩ ॥

೫೮೦

ನೀರ ಕಂಡಲ್ಲಿ ಮುಳುಗುವರಯ್ಯಾ,
ಮರನ ಕಂಡಲ್ಲಿ ಸುತ್ತುವರಯ್ಯಾ.
ಬತ್ತುವ ಜಲವ, ಒಣಗುವ ಮರನ
ಮಚ್ಚಿದವರು ನಿಮ್ಮನೆತ್ತ ಬಲ್ಲರು?
ಕೂಡಲಸಂಗಮದೇವಾ. ॥ ೫೪ ॥

೫೮೧

ಕಣ್ಣ ಮುಚ್ಚಿ ಕನ್ನಡಿಯ ತೋರುವಂತೆ,
ಇರುಳು ಹಗಲಿನ ನಿದ್ರೆ ಸಾಲದೆ?
ಬೆರಳನೆಣಿಸಿ ಪರಮಾರ್ಥವ ಹಡೆವಡೆ
ಚೋದ್ಯವಲ್ಲವೆ? ಹೇಳಾ.
ಮೂಗ ಮುಚ್ಚಿ ಮುಕ್ತಿಯ ಬಯಸುವ
ನಾಚಿಕೆಯಿಲ್ಲದವರ ನಾನೇನೆಂಬೆ,
ಕೂಡಲಸಂಗಮದೇವಾ? || ೫೫ ||

೫೮೨

ಬ್ರಹ್ಮಸಭೆ ನೆರೆದಲ್ಲಿ ಬ್ರಹ್ಮವಿತ್ತುಗಳು ಬ್ರಹ್ಮತ್ವವಡೆದು,
ತಮ್ಮ ವಚನಬ್ರಹ್ಮರೆನಿಸಿಕೊಂಡು ನೆಮ್ಮುವರು ವಿಷ್ಣುವನು–
ತಮ್ಮ ದೈವವ ಬಿಡುವುದಾವುದುಚಿತ?
ವಿಷ್ಣು ಶಿವಭಕ್ತನಾಗಿ ನಿಷ್ಠೆಯಿಂದ ಕಣ್ಣನಿತ್ತು ಹಡೆದನು
ಶಿವಭಕ್ತಿಯಿಂದ.
ಕಷ್ಟಜಾತಿ ಜೀವಿಗಳಿಗೆ ಮಟ್ಟಿ ಎಂತು ಬಂದತ್ತೊ!
ಮುಟ್ಟರೊಂದುವನು ಮೂವಿಧಿಬಟ್ಟರೊ!
ಹುಸಿವನೆ ಹೊಲೆಯನೆಂದು ವಚನವುಂಟು ಲೋಕದಲ್ಲಿ.
ಹುಸಿದಜನ ಶಿರ ಹೋಯಿತ್ತಾದಿಯಲ್ಲಿ,
ಎಸವೋದ ಕಿರುಪಶುವನುಸರಲೀಯದೆ
ವಿ[ದಾರಿ]ಸಿ ತಿಂಬ ಜನ್ಮ ಅದಾವ ಫಲವೋ.
ದಕ್ಷಯಾಗವ ಮಾಡಿ ನಿಕ್ಷೇತ್ರ ನೆರೆದ ಅಕಟಕಟಾ,
ಕೇಳಿಯೂ ಏಕೆ ಮಾಣರೊ?
ಮಮಕರ್ತ ಕೂಡಲಸಂಗನ ಶರಣರು ಅಕ್ಷಯರಧಿಕರು,
ವಿಪ್ರರು ಕೀಳು ಜಗವೆಲ್ಲರಿಯಲು! || ೫೬ ||

೫೮೩

ಕುಲದಲ್ಲಿ ಹಾರುವನು ಬ್ರಹ್ಮೇತಿಗೆ ಸಾರುವನು:
ಆರೊ ಮಾಡಿದ ಪಾಪಕ್ಕೆ ತಾನೆ ಕೈಯಾನುವನು.
ಸರಿಯೆ ದೇವಭಕ್ತಂಗಿವನು?
ಸರಿಯೆ ಲಿಂಗಭಕ್ತಂಗಿವನು?

ಬಡಗಿ ಮಾಚಲದೇವಿಯು ಕುಲಜೆಯು ಮಾಡಿಹೆವೆಂದು
ಹೊನ್ನ ಕಪಿಲೆಯು ರವಣಶಾಖದ ಉಚ್ಛಿಷ್ಟದ ಹಾಲಿನಿಂದ
ಕೊಳನಟ್ಟುಂಬವರನೇನೆಂಬೆ
ಕೂಡಲಸಂಗಮದೇವಾ. ॥ ೫೭ ॥

೫೮೪

ನರಜನ್ಮದಲ್ಲಿ ಹುಟ್ಟಿ ಲಿಂಗಮುಖವನರಿಯದೆ
ಉದಮದ ಸೊಕ್ಕಿ ತಲೆಗೇರಿತ್ತೆ ಅಯ್ಯಾ?
'ಜೀವ್ರೋ ಜೀವೇನ ಭಕ್ಷ್ಯತೇ': ಕರ್ಮಾಕರ್ಮದಲಿಪ್ಪೆಯಯ್ಯಾ.
ಅಂದೊಮ್ಮೆ ದಕ್ಷನು ಹೋತನ ಕೊಂದಲ್ಲಿ
ಘೋಳಿಡಲಿ ಘೋಳಿಡಲಿ ತಂದಿಕ್ಕಿತ್ತೆ ವೇದ?
ಶಾಸ್ತ್ರಂಗಳು ಮೂರುತಿಗೊಂಡಲ್ಲಿ
ಚತುರ್ವೇದಿಗಳಿಗೊಮ್ಮೆ ಅಕ್ಕಿತ್ತೆ ಅಯ್ಯಾ!
ನಮ್ಮ ಕೂಡಲಸಂಗಮದೇವನನರಿಯದ ಕಾರಣ
ನಾಯಕನರಕದಲ್ಲಿಕ್ಕಿತ್ತಯ್ಯಾ. ॥ ೫೮ ॥

೫೮೫

ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರ ಮನೆಯಲು
ಕಿಚ್ಚೆದ್ದು ಸುಡುವಾಗ
ಬಚ್ಚಲ ನೀರ, ಬೀದಿಯ ದೂಳ ಹೊಯ್ದು
ಬೊಬ್ಬಿಟ್ಟೆಲ್ಲರ ಕರೆವರಯ್ಯಾ.
ಕೂಡಲಸಂಗಮದೇವಾ,
ವಂದನೆಯ ಮರೆದು ನಿಂದಿಸುತ್ತಿದ್ದರು. ॥ ೫೯ ॥

೫೮೬

ವೇದವನೋದಿದ ವಿಪ್ರರು ಹೊಸಲಲ್ಲಿ ಹೋದ ಕೇಡ ನೋಡಿರೇ!
'ಭರ್ಗೋ ದೇವಸ್ಯ ಧೀಮಹಿ' ಎಂಬರು,
ಒಬ್ಬರಿಗಾಗಿ ವಿಚಾರವಿಲ್ಲ, ನೋಡಿರೇ
ಕೂಡಲಸಂಗಮದೇವಾ. ॥ ೬೦ ॥

೫೮೭

ಎನಿಸನೋದಿದಡೇನು? ಎನಿಸ ಕೇಳಿದಡೇನು?
ಚತುರ್ವೇದಪಾಠ ತೀವ್ರವಾದಡೇನು?
ಲಿಂಗಾರ್ಚನೆ ಹೀನವಾದಡೆ, ಶಿವಶಿವಾ!
ಬ್ರಾಹ್ಮಣನೆಂಬೆನೆ? ಎನಲಾಗದು.
ಜನ್ಮನಾ ಜಾಯತೇ ಶೂದ್ರಃ ಕರ್ಮಣಾ ದ್ವಿಜ ಉಚ್ಯತೇ।
ಶ್ರುತೇನ ಶ್ರೋತ್ರಿಯಶ್ಚೈವ ಬ್ರಹ್ಮ ಚರತಿ ಬ್ರಾಹ್ಮಣಾ॥ ಎಂದುದಾಗಿ.
ಬ್ರಹ್ಮನಾಸ್ತಿ ಶ್ವಪಚರಧಮರೆಂದುದಾಗಿ,
ಇದು ಕಾರಣ ಕೂಡಲಸಂಗಮದೇವಾ
'ವೇದಭಾರಭರಾಕ್ರಾಂತಾ ಬ್ರಾಹ್ಮಣಾಃ ಗರ್ದಭಾಃ' ಎಂಬೆನು. ॥ ೬೧ ॥

೫೮೮

ನಿಮ್ಮನರಿಯದ ಕಾರಣ ಕೈಯಲ್ಲಿ ಹುಲ್ಲು!
ನಿಮಗೆರಗದ ಕಾರಣ ಕೊರಳಲ್ಲಿ ನೇಣು!
ಹಿಂಡಲೇಕೋ? ತೊಳೆಯಲೇಕೋ!
ಮುಳುಗಿ ಮುಳುಗಿ ಮೂಗ ಹಿಡಿಯಲೇಕೋ!
ಕೂಡಲಸಂಗನ ಶರಣರಲ್ಲಿ
ಡೋಹರ ಕಕ್ಕಯ್ಯನಾವ ತೊರೆಯಲಿ ಮಿಂದ? ॥ ೬೨ ॥

೫೮೯

ವ್ಯಾಸ ಬೋವಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ,
ಮಂಡೋದರಿ ಕಪ್ಪೆಯ ಮಗಳು.
ಕುಲವನರಸದಿರಿಂ ಭೋ! ಕುಲದಿಂದ ಮುನ್ನೇನಾದಿರಿಂ ಭೋ!
ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದುರ್ವಾಸ ಮುಚ್ಚಿಗ, ಕಶ್ಯಪ ಕಮ್ಮಾರ,
ಕೌಂಡಿನ್ಯನೆಂಬ ಋಷಿ ಮೂರು ಭುವನವರಿಯೆ ನಾವಿದ ಕಾಣ ಭೋ!
ನಮ್ಮ ಕೂಡಲಸಂಗನ ವಚನವಿಂತೆಂದುದು:
ಶ್ವಪಚೋಪಿಯಾದಡೇನು, ಶಿವಭಕ್ತನೆ ಕುಲಜಂ ಭೋ! ॥ ೬೩ ॥

೫೯೦

ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ.
ಜಲ-ಬಿಂದುವಿನ ವ್ಯವಹಾರ ಒಂದೇ,
ಆಶೆಯಾಮಿಷರೋಷಹರುಷ ವಿಷಯಾದಿಗಳೆಲ್ಲಾ ಒಂದೇ.

ಏನನೋದಿ, ಏನ ಕೇಳಿ, ಏನು ಫಲ?
ಕುಲಜನೆಂಬುದಕ್ಕೆ ಆವುದು ದೃಷ್ಟ?
ಸಪ್ತಧಾತುಸಮಂ ಪಿಂಡಂ ಸಮಯೋನಿಸಮುದ್ಭವಂ ।
ಆತ್ಮಜೀವಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ॥ ಎಂದುದಾಗಿ,
ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ,
ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ.
ಕರ್ಣದಲ್ಲಿ ಜನಿಸಿದರುಂಟೆ ಜಗದೊಳಗೆ?
ಇದು ಕಾರಣ ಕೂಡಲಸಂಗಮದೇವಾ,
ಲಿಂಗಸ್ಥಲವನರಿದವನೆ ಕುಲಜನು. ॥ ೬೪ ॥

೫೯೧

ಕೊಲುವನೇ ಮಾದಿಗ, ಹೊಲಸು ತಿಂಬವನೇ ಹೊಲೆಯ.
ಕುಲವೇನೊ ಆವದಿರ ಕುಲವೇನೊ?
ಸಕಲಜೀವಾತ್ಮರಿಗೆ ಲೇಸನೆ ಬಯಸುವ
ನಮ್ಮ ಕೂಡಲಸಂಗನ ಶರಣರೆ ಕುಲಜರು. ॥ ೬೫ ॥

೫೯೨

ಹಾರುವನ ಭಕ್ತಿ ಓಡಿನೊಳಗೆ ಆಗೆಯ ಹೊಯ್ದಂತೆ:
ಕೆಳಯಿಂಕೆ ಬೇರೂರದು, ಮೇಲೆ ಫಲವಾಗದು.
ಪ್ರಾಣಲಿಂಗದ ಪ್ರಸಾದವ ಮುಂದಿಟ್ಟುಕೊಂಡು
'ಪ್ರಾಣಾಯ ಸ್ವಾಹಾ, ಅಪಾನಾಯ ಸ್ವಾಹಾ, ವ್ಯಾನಾಯ ಸ್ವಾಹಾ,
ಉದಾನಾಯ ಸ್ವಾಹಾ, ಸಮಾನಾಯಾ ಸ್ವಾಹಾ' ಎಂಬ
ಕರ್ಮಿಗಳನೇನೆಂಬೆ, ಕೂಡಲಸಂಗಮದೇವಾ. ॥ ೬೬ ॥

೫೯೩

'ನಾನು ಭಕ್ತ, ನಾನು ಪ್ರಸಾದಿ' ಎಂದು
ವಿಪ್ರಕರ್ಮವ ಮಾಡುವೆ ಕರ್ಮೀ:
ಲಿಂಗದೇವನ ಮುಟ್ಟಿ ಮಜ್ಜನಕ್ಕೆರೆವ ಕೈಯಲು
ವಿಪ್ರನ ಕಾಲ ತೊಳೆವಡೆ
ಲಿಂಗೋದಕ ಹೃದಯದಲ್ಲಿ,
ವಿಪ್ರನ ಕಾಲ ತೊಳೆದ ನೀರು ಮಂಡೆಯ ಮೇಲೆ!

ಶ್ರುತ್ಯುತ್ಕಟ ದುರಾಚಾರೀ ಯಜ್ಞಕೂಪಸಘಾತಕಃ।
ಉದ್ರೇಕೇಣ ಕೃತೇ ಶಾಂತೇ ವಿಪ್ರರೂಪೇಣ ರಾಕ್ಷಸಃ॥
ಇದು ಕಾರಣ ಕೂಡಲಸಂಗಮದೇವಾ,
ಇಂತಪ್ಪ ದುರಾಚಾರಿಗಳ ಮುಖವ ನೋಡಲಾಗದು. ॥ ೬೭ ॥

೫೯೪

ಹೊನ್ನ ನೇಗಿಲಲುತ್ತು ಎಕ್ಕೆಯ ಬೀಜವ ಬಿತ್ತುವರೆ?
ಕರ್ಪೂರದ ಮರನ ತರಿದು ಕಳ್ಳಿಗೆ ಬೇಲಿಯನಿಕ್ಕುವರೆ?
ಶ್ರೀಗಂಧದ ಮರನ ತರಿದು ಬೇವಿಂಗೆ ಅಡೆಯನಿಕ್ಕುವರೆ?
ನಮ್ಮ ಕೂಡಲಸಂಗನ ಶರಣರಿಗಲ್ಲದೆ ಬೇರೆ ಇಚ್ಛಾಭೋಜನವನಿಕ್ಕಿದಡೆ
ಕಿಚ್ಚಿನೊಳಗೆ ಉಚ್ಚೆಯ ಹೊಯಿದು ಹವಿಯ ಬೇಳ್ದಂತಾಯಿತ್ತು. ॥ ೬೮ ॥

೫೯೫

ಜಾತಿವಿಡಿದು ಸೂತಕವನರಸುವೆ:
ಜ್ಯೋತಿವಿಡಿದು ಕತ್ತಲೆಯನರಸುವೆ!
ಇದೇಕೊ ಮರುಳುಮಾನವಾ? ಜಾತಿಯಲ್ಲಿ ಅಧಿಕನೆಂಬೆ!
ವಿಪ್ರ ಶತಕೋಟಿಗಳಿದ್ದಲ್ಲಿ ಫಲವೇನೊ?
'ಭಕ್ತನೆ ಶಿಖಾಮಣಿ' ಎಂದುದು ವಚನ.
ನಮ್ಮ ಕೂಡಲಸಂಗನ ಶರಣರ ಪಾದಪರುಷವ ನಂಬು,
ಕೆಡಬೇಡ ಮಾನವಾ. ॥ ೬೯ ॥

೫೯೬

ಹೊಲೆಯ ಮಾದಿಗ ಭಕ್ತನಾದಡೆ ಆತನ ಮನೆಯ ಶೊಣಗಂಗೆ
ಪಂಚಮಹಾವಾದ್ಯದಲಿ ಸನ್ಮಾನವ ಮಾಡೆನೆ?
ನೆಲನನುಗ್ಘಡಿಸಿ ಉಘೇ ಚಾಂಗು ಭಲಾ ಎಂಬು!
ಕುಲಕಧಿಕ ಹಾರುವಂಗೆ ಸಿದ್ಧಿಗೆ ಎಯಿಸಲೆ!
ನಿಮ್ಮ ಶರಣರ ಮಹಿಮೆ ಘನಕ್ಕೆ ಘನ.
ಎಲೆ ಎಲೆ ಕೂಡಲಸಂಗಮದೇವಾ, ನಿಮ್ಮ ನಂಬದವ ಹೊಲೆಯ. ॥ ೭೦ ॥

೫೯೭

ಕುರಿವಿಂಡು ಕಬ್ಬಿನ ಉಲಿವ ತೋಟವ ಹೊಕ್ಕು–
ತೆರನನರಿಯದೆ ತನಿರಸದ–

ಹೊರಗಣ ಎಲೆಯನೆ ಮೇಲಿದುವು!
ನಿಮ್ಮನರಿವ ಮದಕರಿಯಲ್ಲದೆ
ಕುರಿ ಬಲ್ಲುದೆ ಕೂಡಲಸಂಗಮದೇವಾ? || ೭೧ ||

೫೯೮

ಪ್ರಣವನುಚ್ಚರಿಸುವ ಅಪ್ರಮಾಣಿಕರೆಲ್ಲರೂ
ಪ್ರಣವಮಂತ್ರಾರ್ಥವನೋದಿ ಮಂತ್ರಾರ್ಥವನರಿಯರು.
'ಪ್ರಣವ ಓಂ ನಮಃ ಶಿವಾಯ, ಪ್ರಣವ ಓಂ ನಮಃ ಶಿವಾಯ,
ಪ್ರಣವ ಓಂ ನಮಃ ಶಿವಾಯ' ಎಂದುವು ಶ್ರುತಿಗಳೆಲ್ಲಾ.
'ಪ್ರಣವ ಓಂ ಭರ್ಗೋ ದೇವ' ಎಂದುವು ಶ್ರುತಿಗಳೆಲ್ಲಾ.
ಕೂಡಲಸಂಗಯ್ಯನನರಿಯದ ದ್ವಿಜರೆಲ್ಲಾ ಭ್ರಮಿತರು. || ೭೨ ||

೫೯೯

ವೇದವನೋದಿದಡೇನು? ಶಾಸ್ತ್ರವ ಕೇಳಿದಡೇನಯ್ಯಾ?
ಜಪವ ಮಾಡಿದಡೇನು? ತಪವ ಮಾಡಿದಡೇನಯ್ಯಾ?
ಏನ ಮಾಡಿದಡೇನು
ನಮ್ಮ ಕೂಡಲಸಂಗಯ್ಯನ ಮನಮುಟ್ಟದನ್ನಕ್ಕ? || ೭೩ ||

೬೦೦

ನೀವು ಹಿರಿಯರೆಂಬಿರಿ, ಕರ್ಮಿಗಳು, ನೀವು ಕೇಳಿರಿ:
ನಿಮ್ಮ ವೇದಶಾಸ್ತ್ರಂಗಳು ಆರ ಹೊಗಳುತ್ತಿದ್ದಾವು?
'ಓಂ ದ್ಯಾವಾ ಭೂಮೀ ಜನಯನ್ ದೇವ ಏಕೋ ದೇವ'
ಎಂದು ಶ್ರುತಿ ಸ್ಮೃತಿಗಳು ಸಾರುತ್ತಿದ್ದಾವು.
'ವರ್ಣಾನಾಂ ಬ್ರಾಹ್ಮಣೋ ಗುರುಃ' ಎಂಬುದು ಹುಸಿ,
'ವರ್ಣಾನಾಂ ಗುರುಃ' ನಮ್ಮ ಕೂಡಲಸಂಗನ ಶರಣರು. || ೭೪ ||

೬೦೧

ನಿಜಭಾವ ಲಕ್ಷ್ಮಿ ಸರಸ್ವತಿ ಒಲಿದಡೆ ಕುಲವನರಸಲದೇಕೆ?
ಆ ದೇವನೊಲಿದ ಭಕ್ತಂಗೆ ಇನ್ನಾವ ಮಂತ್ರವೇಕೆಯೊ?
ಕಾಮಧೇನು ಮನೆಯಲಿರಲು ಬೇರೆ ಹಯನನರಸಲೇಕೆ?
ಮೋಹವುಳ್ಳ ಠಾವಿನಲ್ಲಿ ಲಜ್ಜೆಯನರಸಬೇಕೆಯೊ?
ಮಹಾದಾನಿ ಕೂಡಲಸಂಗಯ್ಯನೊಲಿದು

ಮಾದಾರ ಚೆನ್ನಯ್ಯನ ಮನೆಯಲುಂಡ.
ವೇದವನೋದಿದವರು ಲಿಂಗವನೊಲಿಸಿ ತೋರಿರೋ. ॥ ೭೫ ॥

೬೦೨

ಆದ್ಯರಿಗಲ್ಲದೆ ವೇದ್ಯವಾಗದು: ಮಾಣೆ ಭೋ, ಮಾಣೆ ಭೋ!
ಶಿವಭಕ್ತನೇ ಕುಲಜ,
ಕೈವರ್ತಗರ್ಭಸಂಭೂತಮಾರ್ಕಂಡೇಯಮಹಾಮುನೇಃ।
ತಪಸಾ ಜಾಯತೇ ವಿಪ್ರಕುಲಂ ಜಾತಿರ್ನವಿದ್ಯತೇ॥
ಜಾತನಲ್ಲ ಅಜಾತನಲ್ಲ,
ಕೂಡಲಸಂಗನ ಶರಣರು ನಿಸ್ಸೀಮರಯ್ಯಾ. ॥ ೭೬ ॥

೬೦೩

ಎಮ್ಮವರು ಅಧಿಕರು, ಎಲ್ಲರಿಂದವೂ ಅಧಿಕರು:
ಪಾಕವ ಮಾಡುವ ಭಾಂಡ ಸೊಣಗನ ಡೊಪಿಗೆಯಯ್ಯಾ!
ಕೆರಹಿನಲ್ಲಿ ಮುಚ್ಚೊದು ಆವ ಆಗಮವಯ್ಯಾ?
ಕೂಡಲಸಂಗಮದೇವಾ, ನಿಮ್ಮ ವಚನವಿಂತೆಂದುದು:
'ಭವಿ ನೋಡಿದ ಓಗರ ಲಿಂಗಾರ್ಪಿತವಾಗದೆ'ಂದೂ. ॥ ೭೭ ॥

೬೦೪

ನಿಮ್ಮ ಶರಣರ ಚಮ್ಮಾವುಗೆಗೆ ಪೃಥ್ವಿ ಸಮಬಾರದು:
ಸರಿಯಲ್ಲ, ನೋಡಾ.
ಕೂಡಲಸಂಗಮದೇವಾ,
ನಿಮ್ಮ ಶರಣರ ಚಮ್ಮಾವುಗೆಗೆ! ॥ ೭೮ ॥

೬೦೫

ದೇವಾ, ನಿಮ್ಮ ಪೂಜಿಸಿ ಚೆನ್ನನ ಕುಲ ಚೆನ್ನಾಯಿತ್ತು,
ದೇವಾ, ನಿಮ್ಮ ಪೂಜಿಸಿ ದಾಸನ ಕುಲ ದೇಸೆವಡೆಯಿತ್ತು,
ದೇವಾ, ನಿಮ್ಮಡಿಗೆರಗಿದ ಮಡಿವಾಳ ಮಾಚಯ್ಯನಿಮ್ಮಡಿಯಾದ.
ನೀನೊಲಿದ ಕುಲಕೆ, ನೀನೊಲ್ಲದ ಹೊಲೆಗೆ ಮೇರೆಯುಂಟೆ ದೇವಾ?
ಶ್ವಪಚೋಽಪಿ ಮುನಿಶ್ರೇಷ್ಠೋ ಯಸ್ತು ಲಿಂಗಾರ್ಚನೇ ರತಃ।
ಲಿಂಗಾರ್ಚನವಿಹೀನೋಽಪಿ ಬ್ರಾಹ್ಮಣಃ ಶ್ವಪಚಾಧಮಃ॥ ಎಂದುದಾಗಿ,
ಜಾತಿ-ವಿಜಾತಿಯಾದಡೇನು ಅಜಾತಂಗೆ ಶರಣೆಂದೆನ್ನದವನು?
ಆತನೇ ಹೊಲೆಯ, ಕೂಡಲಸಂಗಮದೇವಾ. ॥ ೭೯ ॥

೬೦೬

ಚತುರ್ವೇದಿಯಾದಡೇನು? ಲಿಂಗವಿಲ್ಲದವನೆ ಹೊಲೆಯ!
ಶ್ವಪಚನಾದಡೇನು ಲಿಂಗವಿದ್ದವನೆ ವಾರಣಾಸಿ!
ಆತನ ನುಡಿಗಡಣ ಲೇಸು, ಆತ ಜಗಕ್ಕೆ ಪಾವನ,
ಆತನ ಪ್ರಸಾದವೆನಗೆ ಅಮೃತಸೇವನೆ.
ನ ಮೇ ಪ್ರಿಯಶ್ಚತುರ್ವೇದೀ ಮದ್ಭಕ್ತಃ ಶ್ವಪಚೋऽಪಿ ವಾ|
ತಸ್ಯ ದೇಯಂ ತತೋ ಗ್ರಾಹ್ಯಂ ಸ ಚ ಪೂಜ್ಯೋ ಯಥಾಹ್ಯಹಂ|| ಎಂದುದಾಗಿ
ಕೂಡಲಸಂಗಮದೇವರನರಿದು ಪೂಜಿಸಿದಾತ
ಷಡುದರುಶನಕ್ಕಧಿಕ, ಜಗಕ್ಕೆ ಪಾವನ ನೋಡಾ. || ೮೦ ||

೬೦೭

ಭಕ್ತಿಹೀನನ ದಾಸೋಹವ ಸದ್ಭಕ್ತರು ಸವಿಯರು:
ಬೇವಿನ ಹಣ್ಣು ಕಾಗೆಗೆ ಇನಿದಲ್ಲದೆ ಕೋಗಿಲೆಗೆ ಮೆಲಬಾರದು.
ಲಿಂಗಸಂಬಂಧವಿಲ್ಲದವರ ನುಡಿ
ಕೂಡಲಸಂಗನ ಶರಣರಿಗೆ ಸಮನಿಸದು. || ೮೧ ||

೬೦೮

ಬಂದು ಬಲ್ಲಹ ಬಿಡಲು ಹೊಲೆಗೇರಿ ಎಂಬ ಹೆಸರೊಳವೆ ಅಯ್ಯಾ?
ಲಿಂಗವಿದ್ದವರ ಮನೆ ಕೈಲಾಸವೆಂದು ನಂಬಬೇಕು,
ಚಾಂಡಾಲ ವಾಟಿಕಾಯಾಂ ವಾ ಶಿವಭಕ್ತಃ ಸ್ಥಿತೋ ಯದಿ|
ತತ್‌ಶ್ರೇಣೀ ಶಿವಲೋಕಸ್ಯ ತದ್ ಗೃಹಂ ಶಿವಮಂದಿರಮ್|| ಎಂದುದಾಗಿ,
ಲೋಕದ ಡಂಬಕರ ಮಾತು ಬೇಡ,
ಕೂಡಲಸಂಗನಿದ್ದುದೇ ಕೈಲಾಸ. || ೮೨ ||

೬೦೯

ಲಿಂಗವಿಲ್ಲದೆ ನಡೆವವರ, ಲಿಂಗವಿಲ್ಲದೆ ನುಡಿವವರ
–ಲಿಂಗವಿಲ್ಲದೆ ಉಗುಳ ನುಂಗಿದಡೆ
ಅಂದಂದಿಗೆ ಕಿಲ್ಬಿಷವಯ್ಯಾ–
ಏನೆಂಬೆನೇನೆಂಬೆನಯ್ಯಾ?
ಲಿಂಗವಿಲ್ಲದೆ ನಡೆವವರ ಅಂಗ ಲೌಕಿಕ: ಮುಟ್ಟಲಾಗದು.
ಲಿಂಗವಿಲ್ಲದೆ ನುಡಿವವರ ಶಬ್ದ ಸೂತಕ: ಕೇಳಲಾಗದು.

ಲಿಂಗವಿಲ್ಲದೆ ಗಮಿಸಿದಡೆ ಆ ನಡೆನುಡಿಗೊಮ್ಮೆ ವ್ರತಗೇಡಿ
ಕೂಡಲಸಂಗಮದೇವಾ. || ೮೩ ||

೬೧೦

ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ,
ಗ್ರಹಣ–ಸಂಕ್ರಾಂತಿಯಿಂದ ವೆಗ್ಗಳ,
ಏಕಾದಶಿ–ವ್ಯತೀಪಾತದಿಂದ ವೆಗ್ಗಳ,
ಸೂಕ್ಷ್ಮ ಶಿವಪಥವನರಿದಂಗೆ
ಹೋಮ–ನೇಮ–ಜಪ–ತಪದಿಂದ ವೆಗ್ಗಳ,
ಕೂಡಲಸಂಗಮದೇವಾ ನಿಮ್ಮ ಮಾಣದೆ ನೆನೆವಂಗೆ. || ೮೪ ||

೬೧೧

ಅಶ್ವಮೇಧಯಾಗವಂತಿರಲಿ,
ಅಜಪೆ ಉಪದೇಶ ಸಮಾಧಿಯಂತಿರಲಿ, ಹೋ!
ಗಾಯತ್ರಿಯ ಜಪವಂತಿರಲಿ, ಹೋ!
ಜನಮೋಹನ ಮಂತ್ರವಂತಿರಲಿ, ಹೋ!
ಕೂಡಲಸಂಗನ ಶರಣರ ನುಡಿಗಡಣ
ಎಲ್ಲಕ್ಕಧಿಕ ನೋಡಾ. || ೮೫ ||

೬೧೨

ವೇದಶಾಸ್ತ್ರದವರ ಹಿರಿಯರೆನ್ನೆ,
ಮಾಯಾಭ್ರಾಂತಿ ಕವಿದ ಗೀತಜ್ಞರ ಹಿರಿಯರೆನ್ನೆ,
ಇವರು ಹಿರಿಯರುಗಳೇ?
ಯಾಗನಟ್ಟುವಿಗಪಾಣರು, ಇವರಿಂದಧಿಕವ ಸಾಧಿಸುವರೇನು ಹಿರಿಯರೆ?
ಇಂತು ವಿದ್ಯೆ ಗುಣ ಜ್ಞಾನ ಧರ್ಮ ಆಚಾರ ಶೀಲಂಗಳ,
ನಮ್ಮ ಕೂಡಲಸಂಗನ ಶರಣರು ಸಾಧಿಸಿದ ಸಾಧನೆಯನೆ
ಸಾಧಿಸೂದು. || ೮೬ ||

೬೧೩

ಹಾರುವರೆಲ್ಲರೂ ನೆರೆದು ಶೂದ್ರನ ಹಾರುವನ ಮಾಡುವಲ್ಲಿ
ಸಂದಿಮುಖವಿಲ್ಲದೆ ಮತ್ತೇನನೂ ಮಾಡಲಾಗದು.
ವಿಭೂತಿ[ಯಿ]ಲ್ಲದೆ ಮತ್ತೇನನೂ ಮಾಡಲಾಗದು.

'ಭರ್ಗೋದೇವ' ಎಂಬ ಮಂತ್ರ[ವಿ]ಲ್ಲದೆ ಮತ್ತೇನನೂ ಮಾಡಲಾಗದು.
ನಿಮ್ಮಿಂದ ಕುಲಜರಾಗಿ ಮತ್ತೆ ಅನ್ಯದೈವಕ್ಕೆರಗುವ
ಜಗದನ್ಯಾಯಿಗಳನೇನೆಂಬೆ, ಕೂಡಲಸಂಗಮದೇವಾ! ॥ ೮೭ ॥

೬೧೪

ದೇವನೊಬ್ಬ, ನಾಮ ಹಲವು,
ಪರಮಪತಿವ್ರತೆಗೆ ಗಂಡನೊಬ್ಬ.
ಮತ್ತೊಂದಕ್ಕೆರಗಿದಡೆ ಕಿವಿ–ಮೂಗ ಕೊಯ್ವನು.
ಪಲವು ದೈವದ ಎಂಜಲ ತಿಂಬವರನೇನೆಂಬೆ,
ಕೂಡಲಸಂಗಮದೇವಾ! ॥ ೮೮ ॥

೬೧೫

ಕರ್ತಾರನ ಪೂಜಿಸಿ ಕುಚಿತ ದೈವಕ್ಕೆರಗುವವ
ಕತ್ತೆ ಕುದುರೆಗೆ ಹುಟ್ಟಿದ ವೇಸರನಂತೆ.
ಭಕ್ತರೆಂತೆಂಬೆ, ಭೃತ್ಯರೆಂತೆಂಬೆ, ಶರಣರೆಂತೆಂಬೆನವರ?
ಎರಡುಳ್ಳ ಪ್ರಪಂಚಿಗಳ ಮೆಚ್ಚ
ಕೂಡಲಸಂಗಮದೇವ. ॥ ೮೯ ॥

೬೧೬

ಕಂಡಕಂಡವರೆಲ್ಲ ಗಂಡನೆಂದೆಂಬ
ಮುಂಡೆಯುನವಳ ಸಜ್ಜ[ನ] ಎಂದೆನ್ನಬಹುದೆ?
ಲಿಂಗಪ್ರಸಾದವನುಂಡು ಅನ್ಯದೈವಂಗಳ ಕೊಂಡಾಡುವವರ–
ನಮ್ಮ ಕೂಡಲಸಂಗಮದೇವನು
ಆ ಭಂಡರಿಗೆ ಮಾಡಿದ ಹುಳುಗೊಂಡವ! ॥ ೯೦ ॥

೬೧೭

ನಂಬಿದ ಹೆಂಡತಿಗೆ ಗಂಡನೊಬ್ಬನೆ ಕಾಣಿರೋ,
ನಂಬಬಲ್ಲ ಭಕ್ತಂಗೆ ದೇವನೊಬ್ಬನೆ ಕಾಣಿರೋ.
ಬೇಡ ಬೇಡ, ಅನ್ಯದೈವದ ಸಂಗ ಹೊಲ್ಲ!
ಬೇಡ ಬೇಡ, ಪರದೈವದ ಸಂಗ ಹೊಲ್ಲ!
ಬೇಡ ಬೇಡ, ಅನ್ಯದೈವವೆಂಬುದು ಹಾದರ ಕಾಣಿರೋ,
ಕೂಡಲಸಂಗಮದೇವ ಕಂಡಡೆ ಮೂಗ ಕೊಯ್ವ ಕಾಣಿರೊ. ॥ ೯೧ ॥

೬೧೮

ಊಡುವ ಉಡಿಸುವ ಗಂಡನಿದ್ದಂತೆ
ಜೋಡೆ, ಮಿಂಡಂಗೆ ಕಣ್ಣ ಚೆಲ್ಲುವಳ
ಕೇಡಿಂಗೆ ಬೆರಗಾದೆ ನಾನು.
ಕೂಡಲಸಂಗಮದೇವನು
ಸಿಂಗಾರದ ಮೂಗ ಬಣ್ಣಿಸಿ, ಹಲುಮೋರೆ ಕೊಯ್ವ. ॥ ೯೨ ॥

೬೧೯

ಅಷ್ಟಮಿ ನವಮಿ ಎಂಬ ಕಲ್ಪಿತವೇಕೋ ಶರಣಂಗೆ?
ತಪ್ಪಿತ್ತು ಗಣಪದವಿ,ಲಿಂಗಕ್ಕೆ ದೂರ.
ಒಬ್ಬರಿಗಾಳಾಗಿ,ಒಬ್ಬರನೋಲೈಸುವ
ನಿರ್ಬುದ್ಧಿ ಮನುಜರನೇನೆಂಬೆ,
ಕೂಡಲಸಂಗಮದೇವಾ! ॥ ೯೩ ॥

೬೨೦

ಎಲವೋ, ಎಲವೋ ಪಾಪಕರ್ಮವ ಮಾಡಿದವನೇ,
ಎಲವೋ ಎಲವೋ ಬ್ರಹ್ಮಹತಿಯ ಮಾಡಿದವನೇ,
ಒಮ್ಮೆ ಶರಣೆನ್ನೆಲವೋ.
ಒಮ್ಮೆ ಶರಣೆಂದಡೆ ಪಾಪಕರ್ಮ ಓಡುವವು.
ಸರ್ವಪ್ರಾಯಶ್ಚಿತ್ತಕ್ಕೆ ಹೊನ್ನ ಪರ್ವತಂಗಳೈದವು.
ಒಬ್ಬಗೆ ಶರಣೆನ್ನು, ನಮ್ಮ ಕೂಡಲಸಂಗಮದೇವಂಗೆ. ॥ ೯೪ ॥

೬೨೧

ಹಲವು ಕೊಂಬಿಂಗೆ ಹಾಯಲುಬೇಡ,
ಬಿರುಕಾಯಕ್ಕೆ ನೀಡಲುಬೇಡ,
ಲೋಗರಿಗೆ ಕೊಟ್ಟು ಭ್ರಮಿತನಾಗಿರಬೇಡ.
ಆಚಾರವೆಂಬುದು ಹಾವಸೆಗಲ್ಲು,
ಭಾವತಪ್ಪಿದ ಬಳಿಕ ಹಿಗ್ಗೈದವಾಗದು.
ಅಂಜದಿರು, ಅಳುಕದಿರು, ಪರದ್ರವ್ಯಕ್ಕೆರಗದಿರು,
ಕೂಡಲಸಂಗಯ್ಯನ ಕೈಯಲು ಈಸೂದೆನ್ನ ಭಾರ. ॥ ೯೫ ॥

೬೨೨

ದ್ವಿಜರಿಗೆ ಕೊಟ್ಟು ಹಲಬರು ಕೆಟ್ಟರು,
ಉದ್ಧರಿಸುವನೊಬ್ಬ, ಶಿವಶರಣ ಸಾಲದೆ?
ನಾರಾಯಣ ವೃದ್ಧಬ್ರಾಹ್ಮಣನಾಗಿ ಬಂದು ಬಲಿಯ ಭೂಮಿಯ ಬೇಡಿದ,
ಕೊಟ್ಟ ಬಲಿ ಬಂಧನಕ್ಕೆ ಸಿಕ್ಕಿದ.
ಈಶ ಭಕ್ತನಾಗಿ ಬಂದು ದಾಸನ ವಸ್ತ್ರವ ಬೇಡಿದ,
ಕೊಟ್ಟ ದಾಸ ತವನಿಧಿಯ ಪಡೆದ.
ಕಪಟದಿಂದ ನಾರಾಯಣ ಹಾರುವನಾಗಿ ಬಂದು ಕರ್ಣನ ಕವಚವ ಬೇಡಿದ,
ಕೊಟ್ಟ ಕರ್ಣ ಕಳದಲ್ಲಿ ಮಡಿದ.
ಕಾಮಾರಿ ಜಂಗಮವಾಗಿ ಬಂದು ಸಿರಿಯಾಳನ ಮಗನ ಬೇಡಿದ,
ಕೊಟ್ಟ ಸಿರಿಯಾಳಸೆಟ್ಟಿ ಕಂಚಿಯಪುರ ಕೈಲಾಸಕ್ಕೊಯ್ದ.
ನಾರಾಯಣ ಹಾರುವನಾಗಿ ಬಂದು ನಾಗಾರ್ಜುನನ ಶಿರವ ಬೇಡಿದ,
ಕೊಟ್ಟ ನಾಗಾರ್ಜುನನ ಶಿರಹೋಯಿತ್ತು.
ಶಿವನು ಜಂಗಮವಾಗಿ ಬಂದು ಸಿಂಧುಬಲ್ಲಾಳ ವಧುವ ಬೇಡಿದ,
ಕೊಟ್ಟ ಸಿಂಧುಬಲ್ಲಾಳ ಸ್ವಯಲಿಂಗವಾದ.
ಇದು ಕಾರಣ ಇಲ್ಲಿಯೂ ಲೇಸು, ಅಲ್ಲಿಯೂ ಲೇಸು:
ಕೊಡಿರೇ, ನಮ್ಮ ಕೂಡಲಸಂಗನ ಶರಣರಿಗೆ. ॥ ೯೬ ॥

೬೨೩

ಎಚ್ಚು ಬಾಲಿಯ ಕೊಂದ, ಕಟ್ಟಿದನು ಶರಧಿಯನು,
ಹತ್ತು ತಲೆಯ ರಾವಳನ ಒಂದೆ ಅಂಬಿನಲ್ಲಿ ಮಡಿಹಿದ,
ಛಲದಿ ಲಂಕಾದ್ವೀಪವ ನೆಲೆವಣ್ಣ ಮಾಡಿದ,
ಕಲಿ ವಿಭೀಷಣಂಗೆ ಪಟ್ಟವ ಕಟ್ಟಿದ ರಾಮನ ತೋರಾ.
ಮಾಯದ ಸಂಸಾರವ ನಚ್ಚಿ, ಕೆಟ್ಟು
ಬರುದೊರೆವೊಗಬೇಡ.
ಕರ್ತು ಕೂಡಲಸಂಗಂಗೆ ಶರಣೆನ್ನಿರಯ್ಯಾ. ॥ ೯೭ ॥

೬೨೪

ವಿಪ್ರರ ಕರೆದು "ನೃಪರುಗಳು ಇಪ್ಪರೆ
ತಮ್ಮ ಓಲಯಿನೊಡನೆ"ಂದು ಬೆಸಗೊಂಡಡೆ,
"ಇಪ್ಪರು, ಇಪ್ಪರು, ತಾವು ಬಿತ್ತಿದ ಫಲಂಗಳ ತಾವು ಉಣ್ಣದವರುಂಟೆ?"
ಎಂದು ಕಣ್ಣ ಕಾಣದೆ ಹೇಳಿದರು, ಅಣ್ಣಗಳು, ಕರ್ಮದ ಬಟ್ಟೆಯನು.

ಅಂತೆಂದ ಮಾತ ಶಿಶು ಕೇಳಿ,
ಕೆಟ್ಟೋಡಿ ಬಂದು, ಲಿಂಗದ ಹೊಟ್ಟೆಯ ಹೊಗಲು,
ಅಟ್ಟಿಬಂದು ಖಂಡೆಯವ ಕಳೆದುಕೊಂಡು ಮಂಡೆಯನೊಡೆಯಲು,
ಮಂಡೆ ಒಡೆದು ಭೂಮಂಡಲವರಿಯೆ ನಾಲ್ಕು ಪುರವಾಗಲು,
ಘಟಸರ್ಪನ ತುಡುಕಿ ನಾಗನಾಥನಾಗಿ,
ಇಪ್ಪತ್ತೇಳು ಬಸದಿಯನೊಡೆಯನೆ?
ಆಗಳಂತೆ ಎನ್ನ ಮಾಡಿದ ಕರ್ಮ ನಿಮ್ಮ ಕೈಯಲು ಕೆಡಿಸುವರು.
ಮುನ್ನೊಬ್ಬ ಕೆಡಿಸಿಹನೆಂದು ಬಂದು ತುತ್ತನಿಟ್ಟು
ಮರಳಿ ಕೈಯಿಡ ಹೋದಡೆ ತುತ್ತು ಹುಳುಗುಪ್ಪೆಯಾಗದೆ?
ಶಿವಧರ್ಮವ ಕೆಡಿಸಿದವನು ಅಧರ್ಮಕ್ಕೆಳಿವನು.
ಕೂಡಲಸಂಗಮದೇವ ಸಾಕ್ಷಿಯಾಗಿ
ಮಕರಭೋಜನವಾಗನೆ ವಿನಾಶಕ್ತಿರಾಯನು. ॥ ೯೮ ॥

೬೨೫

ಅರಸು ವಿಚಾರ, ಸಿರಿಯು, ಶೃಂಗಾರ, ಸ್ಥಿರವಲ್ಲ ಮಾನವಾ.
ಕೆಟ್ಟಿತ್ತು ಕಲ್ಯಾಣ, ಹಾಳಾಯಿತ್ತು ನೋಡಾ.
ಒಬ್ಬ ಜಂಗಮದ ಅಭಿಮಾನದಿಂದ
ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು,
ಸಂದಿತ್ತು, ಕೂಡಲಸಂಗಮದೇವಾ ನಿಮ್ಮ ಕವಳಿಗೆಗೆ. ॥ ೯೯ ॥

೬೨೬

ಬೇವಿನ ಬೀಜವ ಬಿತ್ತಿ, ಬೆಲ್ಲದ ಕಟ್ಟೆಯ ಕಟ್ಟಿ,
ಆಕಳ ಹಾಲನೆರೆದು, ಜೇನತುಪ್ಪವ ಹೊಯ್ದಡೆ,
ಸಿಹಿಯಾಗಬಲ್ಲುದೆ, ಕಹಿಯಹುದಲ್ಲದೆ?
ಶಿವಭಕ್ತರಲ್ಲದವರ ಕೂಡೆ ನುಡಿಯಲಾಗದು,
ಕೂಡಲಸಂಗಮದೇವಾ. ॥ ೧೦೦ ॥

೬೨೭

ಕರ್ತನನರಿಯದವನು ವಿಪ್ರನಾದಡೇನು? ಚತುರ್ವೇದಿಯಾದಡೇನು?
ಭುಕ್ತಿಕಾರಣ ಲೋಕದ ಇಚ್ಚೆಗೆ ನುಡಿದು ನಡೆವರಯ್ಯಾ!
ಭವಿಮಾಡಿದ ಪಾಕವ ತಂದು,
ಲಿಂಗಕ್ಕರ್ಪಿಸುವ ಕಷ್ಟರ ಕಂಡು ನಾಚಿತ್ತೆನ್ನ ಮನವು,
ಕೂಡಲಸಂಗನ ಶರಣರ ಒಕ್ಕುದ ಕೊಂಡು

ಅನ್ಯವನಾಚರಿಸಿದಡೆ ತಪ್ಪದು
ಸೂಕರ ಶುಚಿಭ್ರೂಣತತೆಯ ಪ್ರಾಣಿಯಂತೆ. ॥ ೧೦೧ ॥

೬೨೮

ಉಂಬಲ್ಲಿ ಉಡುವಲ್ಲಿ ಕ್ರೀಯಳಿಯಿತ್ತೆಂಬರು,
ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು,
ಎಂತಯ್ಯಾ ಅವರ ಭಕ್ತರೆಂತೆಂಬೆ?
ಎಂತಯ್ಯಾ ಅವರ ಯುಕ್ತರೆಂತೆಂಬೆ?
ಕೂಡಲಸಂಗಮದೇವಾ ಕೇಳಯ್ಯಾ,
ಹೊಲತಿ ಶುದ್ಧ ನೀರ ಮಿಂದಂತಾಯಿತ್ತಯ್ಯಾ. ॥ ೧೦೨ ॥

೬೨೯

ಭಕ್ತರನಲ್ಲದೆ ಒಲ್ಲೆವೆಂದೆಂಬಿರಿ,
ಭಕ್ತರಿಗಲ್ಲದೆ ಕೈಯಾನೆವೆಂಬಿರಿ,
ಇದೇನ ಮಾಡುವಿರಿ? ಇದೆಲ್ಲಿಗೊಯ್ಯುವಿರಿ?
ಪಾವನವಾದುದನು ಲಿಂಗಕ್ಕೆ ಮಾಡೂದೆ ಆಚಾರ.
ವಿಷಯಕ್ಕೆ ಇಕ್ಕಿ, ಅಸುಗತಿಗಿಳಿಯದಿರಿ
ಕೂಡಲಸಂಗನಶರಣರ ಒಡೆವೆಯು. ॥ ೧೦೩ ॥

೬೩೦

ಮಾರಿ ಮಸಣಿಯೆಂಬವು ಬೇರಿಲ್ಲ ಕಾಣಿರೋ.
ಮಾರಿಯೆಂಬುದೇನು?
ಕಂಗಳು ತಪ್ಪಿ ನೋಡಿದಡೆ ಮಾರಿ,
ನಾಲಗೆ ತಪ್ಪಿ ನುಡಿದಡೆ ಮಾರಿ,
ನಮ್ಮ ಕೂಡಲಸಂಗಮದೇವನ ನೆನಹ ಮರೆದಡೆ ಮಾರಿ. ॥ ೧೦೪ ॥

೬೩೧

ಆಯುಧವಿಕ್ಕಿದವಂಗೆ ವೀರದ ಮಾತೇಕೆ?
ಲಿಂಗವು ಅಂತರಿಸಿದವಂಗೆ ಒಳುನುಡಿ ಏಕೆ?
ಐದೆ ಅಣಚಿಯಿಲ್ಲದವಳಿಗೆ ಸೌಭಾಗ್ಯದ ಹೂವಿನ ಬೊಟ್ಟೇಕೆ?
ಸತ್ಯವಿಲ್ಲದವಂಗೆ ನಿತ್ಯನೇಮವೇಕೆ?
ಕರ್ತಾರ, ನಿಮ್ಮ ಒಲವಿಲ್ಲದವಂಗೆ ಶಂಭುವಿನ ಬಂಧುಗಳೇಕೆ?

ಕೂಡಲಸಂಗಮದೇವಯ್ಯಾ,
ನೀವಿಲ್ಲದವಂಗೆ ಶಿವಾಚಾರದ ಮಾತೇಕೆ? ॥ ೧೦೫ ॥

೬೩೨

ಇರುಳೆಂದೇನೋ ಕುರುಡಂಗೆ, ಹಗಲೆಂದೇನೋ ಕುರುಡಂಗೆ!
ತಾಳವ ಬಾರಿಸಿದಡೇನೋ, ಪಂಚಮಹಾಶಬುದವ ಬಾರಿಸಿದಡೇನೋ ಕಿವುಡಂಗೆ!
ಕೂಡಲಸಂಗಮದೇವಯ್ಯನ
ಪಥವಿನ್ನಾವುದೆಂದರಿಯದವಂಗೆ! ॥ ೧೦೬ ॥

೬೩೩

ಸಿಂಗದ ನಡು ಮುರಿಯಲಾ ಸಿಂಗವೇನು ಬಾತೆ?
ಸುಂಡಿಲು ಮುರಿಯಲು ಗಜವೇನು ಬಾತೆ?
ಸಂಗ್ರಾಮದಲ್ಲಿ ವೀರನುಳಿಯಲದೇನು ಬಾತೆ?
ಶೃಂಗಾರದ ಮೂಗು ಹೋದಡೆ ಶೃಂಗಾರವೇನು ಬಾತೆ?
ನಿಜ ತುಂಬಿದ ಭಕ್ತಿ ತುಳುಕಾಡದವರ ಸಂಗವೇನು ಬಾತೆ?
ಕೂಡಲಸಂಗಮದೇವಾ. ॥ ೧೦೭ ॥

೬೩೪

ಮುನ್ನಿನ ಆದ್ಯರ ಪಥಂಗಳು ಇನ್ನಾರಿಗೂ ಅಳವಡವು ನೋಡಾ.
ಬಲ್ಲೆನಾಗಿ ಒಲ್ಲೆನು ಅವರ, ಸಲ್ಲರು ಶಿವಪಥಕ್ಕೆ.
ಒಳ್ಳಿಹ ಮೈಲಾರನ ಸಿಂಗಾರದಂತೆ,
ವೇಶಿಯ ಬಾಯ ಎಂಜಲನುಂಬ ದಾಸಿಯ ಸುಸಾರದಂತೆ,
ಕೂಡಲಸಂಗನ ಶರಣರನರಿಯದೆ ಉಳಿದ ಭಂಗಿತರ. ॥ ೧೦೮ ॥

೬೩೫

ಗೀಜಗನ ಗೂಡು, ಕೋಡಗದಣಲ ಸಂಚ,
ಬಾದುಮನ ಮದುವೆ, ಬಾವಲ ಬಿದ್ದಿಸಂತೆ ಜೂಜುಗಾರನ ಮಾತು.
ಬೀದಿಯ ಗುಂಡನ ಸೊಬಗು
ಓಡಿನೊಳಗಗೆಯ ಹೊಯ್ದಂತೆ ಕಾಣಿರೋ.
ಶಿವನಾದಿ ಅಂತುವನರಿಯದವನ ಭಕ್ತಿ
ಸುಖಶೋಧನೆಗೆ ಮದ್ದ ಕೊಂಡಂತೆ, ಕೂಡಲಸಂಗಮದೇವಾ. ॥ ೧೦೯ ॥

೬೩೬

ತ್ರೊತ್ತಿನ ಕೊರಳಲ್ಲಿ ಹೊಂಬಿತ್ತಾಳೆಯ ಸಿಂಗಾರವ ಮಾಡಿದಂತೆ
ಕುಚಿತರ ಸಂಗ, ಸುಸಂಗಿಗೆ ಸಂಗಡವಿಲ್ಲ!
ಗುರುಗುಂಜಿ ಮಾಣಿಕಕ್ಕೆ ಸರಿಯಪ್ಪುದೆ,
ಕೂಡಲಸಂಗಮದೇವಾ? ॥ ೧೧೦ ॥

೬೩೭

ಕೆಂಚ ಕರಿಕನ ನೆನೆದಡೆ ಕರಿಕನಾಗಬಲ್ಲನೆ?
ಕರಿಕ ಕೆಂಚನ ನೆನೆದಡೆ ಕೆಂಚನಾಗಬಲ್ಲನೆ?
ದರಿದ್ರನು ಸಿರಿವಂತನ ನೆನೆದಡೆ ಸಿರಿವಂತನಾಗಬಲ್ಲನೆ?
ಸಿರಿವಂತ ದರಿದ್ರನ ನೆನೆದಡೆ ದರಿದ್ರನಾಗಬಲ್ಲನೆ?
ಮುನ್ನಿನ ಪುರಾತರ ನೆನೆದು ಧನ್ಯನಾದೆಹೆನೆಂಬ
ಮಾತಿನ ರಂಜಕರನೇನೆಂಬೆ ಕೂಡಲಸಂಗಮದೇವಾ. ॥ ೧೧೧ ॥

೬೩೮

ಆನೆಯನೇರಿಕೊಂಡು ಹೋದಿರೇ ನೀವು,
ಕುದುರೆಯನೇರಿಕೊಂಡು ಹೋದಿರೇ ನೀವು,
ಕುಂಕುಮ ಕಸ್ತೂರಿಯ ಹೂಸಿಕೊಂಡು ಹೋದಿರೇ ಅಣ್ಣಾ!
ಸತ್ಯದ ನಿಲವನರಿಯದೆ ಹೋದಿರಲ್ಲಾ,
ಸದ್ಗುಣವೆಂಬ ಫಲವ ಬಿತ್ತದೆ ಬೆಳೆಯದೆ ಹೋದಿರಲ್ಲಾ!
ಅಹಂಕಾರವೆಂಬ ಸದಮದಗಜವೇರಿ
ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ!
ನಮ್ಮ ಕೂಡಲಸಂಗಮದೇವರನರಿಯದೆ
ನರಕಕ್ಕೆ ಭಾಜನವಾದಿರಲ್ಲಾ! ॥ ೧೧೨ ॥

೬೩೯

ಇಂದ್ರಿಯ ನಿಗ್ರಹವ ಮಾಡಿದಡೆ ಹೊಂದುವವು ದೋಷಂಗಳು,
ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು.
ಸತಿಪತಿರತಿಸುಖವ ಬಿಟ್ಟರೆ ಸಿರಿಯಾಳ ಚಂಗಳೆಯವರು?
ಸತಿಪತಿರತಿಸುಖಭೋಗೋಪಭೋಗವ, ವಿಳಾಸವ
ಬಿಟ್ಟನೆ ಸಿಂಧುಬಲ್ಲಾಳನು?
ನಿಮ್ಮ ಮುಟ್ಟಿ ಪರಧನ–ಪರಸತಿಯರಿಗೆಳಸಿದಡೆ
ನಿಮ್ಮಾಚಾರಕ್ಕೆ ದೂರ, ಕೂಡಲಸಂಗಮದೇವಾ. ॥ ೧೧೩ ॥

೬೪೦

ಲಿಂಗ ಜಂಗಮ ಒಂದೆ ಎಂದು ನಂಬಿದ ಬಳಿಕ
ಅವರಂಗನೆಯರು ಲಿಂಗದ ರಾಣಿವಾಸ.
ಅಲ್ಲಿಯೂ ಮೇಳ, ಇಲ್ಲಿಯೂ ಮೇಳ, ಚೌಡೇಶ್ವರಿಯಲ್ಲಿಯೂ ಮೇಳವೇ?
ಮೊಲೆಯುಂಬ ಭಾವ ತಪ್ಪಿ ಅಪ್ಪಿದವರ
ತಲೆಯ ಕೊಂಬ ಕೂಡಲಸಂಗಮದೇವ. ॥ ೧೧೪ ॥

೬೪೧

ಒಡೆಯರು ತಮ್ಮ ಮನೆಗೆ ಒಡಗೊಂಡು ಹೋದಡೆ,
ತುಡುಗುಣಿತನದಲ್ಲಿ ಪರವಧುವ ನೋಡುವ ಸರಸ ಬೇಡ.
ಕಾಣಿರಣ್ಣಾ! ಒಡೆಯನರಸಿಯ ಸರಸಬೇಡ.
ಕೊಳ ಸೊಕ್ಕು ತಲೆಗೇರಿ ರಾಣಿವಾಸದೊಡನೆ ಸರಸ ಬೇಡ.
ಕೂಡಲಸಂಗಮದೇವ ಕರ ಸಿತಗನಯ್ಯಾ. ॥ ೧೧೫ ॥

೬೪೨

ನೋಡಲಾಗದು ನುಡಿಸಲಾಗದು ಪರಸ್ತ್ರೀಯ, ಬೇಡ ಕಾಣಿರೋ.
ತಗರ ಬೆನ್ನಲಿ ಹರಿವ ಸೊಣಗನಂತೆ, ಬೇಡ ಕಾಣಿರೋ.
ಒಂದಾಸೆಗೆ ಸಾಸಿರ ವರುಷ ನರಕದಲದ್ದುವ
ಕೂಡಲಸಂಗಮದೇವ. ॥ ೧೧೬ ॥

೬೪೩

ತೊರೆಯ ಮೀವ ಅಣ್ಣಗಳಿರಾ, ತೊರೆಯ ಮೀವ ಸ್ವಾಮಿಗಳಿರಾ
ತೊರೆಯಿಂ ಭೋ, ತೊರೆಯಿಂ ಭೋ
ಪರನಾರಿಯರ ಸಂಗವ ತೊರೆಯಿಂ ಭೋ!
ಪರಧನದಾಮಿಷವ ತೊರೆಯಿಂ ಭೋ!
ಇವ ತೊರೆಯದೆ ಹೋಗಿ ತೊರೆಯ ಮಿಂದಡೆ
ಬರುದೊರೆ ಹೋಹುದು, ಕೂಡಲಸಂಗಮದೇವಾ. ॥ ೧೧೭ ॥

೬೪೪

ಸತ್ಯ ಶೌಚ ನಿತ್ಯನೇಮವ ತಪ್ಪದೆ ಮಾಡಬಲ್ಲಡೆ ಅದು ಲೇಸು.
ಮತ್ಸ್ಯ ಕೂರ್ಮ ಮಂಡೂಕ ಜಲದೊಳಗಿರ್ದಲ್ಲಿ ಫಲವೇನು?

ಚಿತ್ತಮಂತರ್ಗತಂ ದೃಷ್ಟ್ವಾ ತೀರ್ಥಸ್ನಾನೇನ ಶುಧ್ಯತಿ।
ಶತಕುಂಭಜಲೇ ಶೌಚಂ ಸುರಾಭಾಂಡಮಿವಾ ಶುಚಿಃ॥
ಆಗಡವ ಮಾಡಿ ಮಾಗುಡವ ಮಿಂದಡೆ,
ತಾ ಕೊಡಬಲ್ಲನೆ ಕೂಡಲಸಂಗಮದೇವ? ॥ ೧೧೮ ॥

೬೪೫

ಕುಳ್ಳಿರ್ದು ಲಿಂಗವ ಪೂಜಿಸಿ ಅಲ್ಲದಾಟವನಾಡುವರಯ್ಯಾ:
ಬೆಳ್ಳಿ ಎತ್ತಿನ ಮರೆಯಲಿರ್ದು ಹುಲ್ಲೆಗಂಬ ತೊಡುವಂತೆ.
ಕಳ್ಳ ಹಾದರಿಗರ ಕೈಯಲು ಪೂಜೆಯ ಕೊಳ್ಳ
ನಮ್ಮ ಕೂಡಲಸಂಗಮದೇವ. ॥ ೧೧೯ ॥

೬೪೬

ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದಡೆ
ಹಿಡಿದಿರ್ದ ಲಿಂಗವು ಘಟಸರ್ಪನಯ್ಯಾ.
ನುಡಿಯಲೂ ಬಾರದು, ನಡೆಯಲೂ ಬಾರದು,
ಲಿಂಗದೇವನೆ ದಿಬ್ಯವೊ ಅಯ್ಯಾ.
ಬಡವನ ಕೋಪವು ಅವುಡಿಗೆ ಮೃತ್ಯುವಾದಂತೆ
ಕಡೆಗೆ ದಾಂಟದು ಕಾಣಾ, ಕೂಡಲಸಂಗಮದೇವಾ. ॥ ೧೨೦ ॥

೬೪೭

ತನು ಶುಚಿಯಿಲ್ಲದವನ ದೇಹಾರವೇಕೆ?
ದೇವರು ಕೊಡನೆಂಬ ಭ್ರಾಂತದೇಕೆ?
ಮನಕ್ಕೆ ಮನವೆ ಸಾಕ್ಷಿ, ಸಾಲದೆ ಲಿಂಗ ತಂದೆ?
ಹೇಂಗೆ ಮನ ಹಾಂಗೆ ಘನ ತಪ್ಪದು,
ಕೂಡಲಸಂಗಮದೇವಾ. ॥ ೧೨೧ ॥

೬೪೮

ಶರಣ, ನಿಚ್ಚನಿಚ್ಚ ಪೂಜಿಸುವಂಗೆ ಇವಕ್ಕಿವೆ ದೃಷ್ಟದೀವಿಗೆ–
ಪಾದೋದಕ: ಕೋಶಪಾನವಲ್ಲದೆ ಏನೂ ಇಲ್ಲವಯ್ಯಾ.
ಮಜ್ಜನಕ್ಕೆರೆವುದು ಲಿಂಗ: ಕರಸ್ಥಲದಿಬ್ಯ.
ಗುರುವಚನ: ಭಾಷಾಪತ್ರ ಶಿವಕರದಲ್ಲಿ.

ಸತ್ಯದಿಂದ ನಡೆವಂಗೆ ನಿತ್ಯನೇಮವಾಗಿ ಸಲಿಸುವನಲ್ಲದೆ
ಹುಸಿವಂಗೆ ಮಡಿಲ ಕಿಚ್ಚಾಗಿ ಸುಡುವ.
ಲಿಂಗವ ಪೂಜಿಸಿ ಮರಳಿ ಅನ್ಯಾಯಕ್ಕೆರಗಿದಡೆ
ಕೂಡಲಸಂಗಮದೇವನವರ ಹಲ್ಲ ಕಳೆವ. ॥ ೧೨೨ ॥

೬೪೯

ಪಾಪಿಗೆ ಕೋಪಿಗೆ ಭಕ್ತಿಯಾಗೆಂದಡಪ್ಪುದೆ?
ನಾರಿವಾಣವಕ್ಕೂದೆ ನಾಯಿಗೆ?
ಕೂಡಲಸಂಗಮದೇವಾ,
ನಿಮ್ಮ ನಂಬಿಯೂ ನಂಬದ ಡಂಭಕರಿಗೆ. ॥ ೧೨೩ ॥

೬೫೦

ಕೋಪಿ ಮಜ್ಜನಕ್ಕೆರೆದಡೆ ರಕ್ತದ ಧಾರೆ,
ಪಾಪಿ ಪೂವನೇರಿಸಿದಡೆ ಮಸೆದಹ್ರಾಯುಧದ ಗಾಯ.
ಕೂಪವರನಾರನೂ ಕಾಣೆನು ಮಾದಾರ ಚೆನ್ನಯ್ಯನಲ್ಲದೆ,
ಕೂಪವರನಾರನೂ ಕಾಣೆನು ಡೋಹರ ಕಕ್ಕಯ್ಯನಲ್ಲದೆ,
ವ್ಯಾಪ್ತಿಯುಳ್ಳವ ನಮ್ಮ ಮಡಿವಾಳ ಮಾಚಯ್ಯ-
ನಿನ್ನಾಪತ್ತಿಗರಿವರಯ್ಯಾ, ಕೂಡಲಸಂಗಯ್ಯಾ. ॥ ೧೨೪ ॥

೬೫೧

ಸದಾಚಾರ ಸದ್ಭಕ್ತಿಯಿಲ್ಲದವರನೊಲ್ಲನಯ್ಯಾ,
ಅವರಾರಾಧನೆ ದಂಡ.
ನಿಚ್ಚ ನಿಚ್ಚ ಪ್ರಾಯಶ್ಚಿತ್ತರನು ಒಲ್ಲ
ಕೂಡಲಸಂಗಮದೇವ, ಭೂಮಿಭಾರಕರ. ॥ ೧೨೫ ॥

೬೫೨

ನೂರನೋದಿ ನೂರ ಕೇಳಿ ಏನು?
ಆಸೆ ಬಿಡದು, ರೋಷ ಹರಿಯದು.
ಮಜ್ಜನಕ್ಕೆರೆದು ಫಲವೇನು?
ಮಾತಿನಂತೆ ಮನವಿಲ್ಲದ ಜಾತಿ [ಡಂ]ಬರ ನೋಡಿ
ನಗುವ ನಮ್ಮ ಕೂಡಲಸಂಗಮದೇವ. ॥ ೧೨೬ ॥

೬೫೭

ತಂದೆ ಮಕ್ಕಳಿಗೆ ಬುದ್ಧಿಯ ಹೇಳುವಲ್ಲಿ
ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ.
ಲಿಂಗವಂತನು ಲಿಂಗವಂತರಿಗೆ ಬುದ್ಧಿಯ ಹೇಳುವಲ್ಲಿ
ಅವಗುಣಕ್ಕೆ ಮುನಿವನಲ್ಲದೆ ಲಾಂಛನಕ್ಕೆ ಮುನಿಯ.
ಲಿಂಗಭಕ್ತನು ಲಿಂಗಪಥವ ಹೇಳಿದಡೆ
ಮುಕ್ಕುರಿಸುವರ ಮೆಚ್ಚ ಕೂಡಲಸಂಗಮದೇವ. ॥ ೧೨೭ ॥

೬೫೮

ಗುರು ಉಪದೇಶ ಮಂತ್ರವೈದ್ಯ, ಜಂಗಮ ಉಪದೇಶ ಶಸ್ತ್ರವೈದ್ಯ ನೋಡಾ,
ಭವರೋಗವ ಕಳೆವ ಪರಿಯ ನೋಡಾ.
ಕೂಡಲ ಸಂಗನ ಶರಣರ ಅನುಭಾವ
ಮಡಿವಾಳನ ಕಾಯಕದಂತೆ. ॥ ೧೨೮ ॥

೬೫೯

ಕೇಳಿರೆ ಕೇಳಿರೆ ಹಿರಿಯರು, ಗುರುವಿನ ಉಪದೇಶವನು :
ಒಂದು ಗೀಜಗನ ಉಪದೇಶದಿಂದ
ಪೌಲಸ್ತ್ಯನಂದು ಹಡೆಯನೆ ದಶಮುಖನ?
ಶಿರವ ಹರಿದಿಕ್ಕೆ ಪರಮನಿದ್ದಡೆಯು ಕಾಣದೇನಿಳೆಯಲ್ಲಿ?
ಕರುಳ ತಂತಿಯ ಉಪದೇಶದಿಂದ
ಅಸುರನಂದು ಹಡೆಯನೆ ಸುರಪದವ?
ತರುಣಿ ಹರಿಣಿಯ ಹಿತೋಪದೇಶದಿಂದ ಗತಿಮುಕ್ತಿಯ ಪಡೆದು
ಬಟ್ಟೆಯ ಹತ್ತನೆ ವಿನಾಶಕ್ತಿರಾಯನು?
ರಂಭೆಯ ಉಪದೇಶದಿಂದ
ಶಂಭುವಿನೋಲಗದಲ್ಲಿ ಕುಳ್ಳಿರನೆ ಶ್ವೇತನು?
ನಮ್ಮ ಕೂಡಲಸಂಗನ ಶರಣರ ಉಪದೇಶವ ಕೇಳಿದವರಿಗೆ
ದುರಿತ ಪಾಪಂಗಳು ಬಿಟ್ಟುಹೋಗಿ,
ಮನ ನಿರುತರಾಗಿಪ್ಪರಾ ಲಿಂಗದಲ್ಲಿ. ॥ ೧೨೯ ॥

೬೫೬

ಶಿವಚಿಂತೆ ಶಿವಜ್ಞಾನ ಭ್ರಮೆ ತಿಳಿದವಂಗಲ್ಲದೆ
ಆಚಾರ ಶಿವಚಾರ ತಮತಮಗೆ ಸೂರೆಯೆ?
ಕೂಡಲಸಂಗಮದೇವನ ಪೂಜಿಸಿದವಂಗಲ್ಲದೆ. ॥ ೧೬೦ ॥

೬೫೭

ಶ್ವಪಚನಾದಡೇನು? ಲಿಂಗಭಕ್ತನೇ ಕುಲಜನು.
ನಂಬಿ ನಂಬದಿದ್ದಡೆ ಸಂದೇಹಿ, ನೋಡಾ.
ಕಟ್ಟಿದಡೇನು, ಮುಟ್ಟಿದಡೇನು, ಹೂಸಿದಡೇನು ಮನಮುಟ್ಟದನ್ನಕ್ಕ?
ಭಾವಶುದ್ಧವಿಲ್ಲದವಂಗೆ ಭಕ್ತಿ ನೆಲೆಗೊಳ್ಳದು,
ಕೂಡಲಸಂಗಮದೇವ ಒಲಿದಂಗಲ್ಲದೆ. ॥ ೧೨೦ ॥

೬೫೮

ಅವರ ನಡೆಯೊಂದು ನುಡಿಯೊಂದಾದಡೆ
ಶಿವಾಚಾರಕ್ಕವರು ಸಲ್ಲರಯ್ಯಾ!
ಬಲ್ಲನು, ಸಾತ್ವಿಕರಲ್ಲದವರನೊಲ್ಲನು.
ಶಿವಾಚಾರವ ಬಲ್ಲನು, ಅಲ್ಲಿ ನಿಲ್ಲನು.
ಪ್ರಪಂಚಿಯ ಮನವನೊಲ್ಲನು ಕೂಡಲಸಂಗಮದೇವನು. ॥ ೧೬೨ ॥

೬೫೯

ನಿಧಾನವನರಸಿಹೆನೆಂದು ಹೋದಡೆ, ವಿಘ್ನ ಬಪ್ಪುದು ಮಾಬುದೆ?
ಸದಾಶಿವನೆಂದಡೆ, ಬೆದರಟ್ಟಿ ಸುಡುವುದು ಮಾಬುದೆ?
ಹದುಳಿಗನಾಗಿ ಉಳಿದಡೆ ಪದವನೀವ ಕಾಣಾ
ಕೂಡಲಸಂಗಮದೇವ. ॥ ೧೨೨ ॥

೬೬೦

ಅಡಿಗಡಿಗೆ ದೇವರಾಣೆ, ಅಡಿಗಡಿಗೆ ಭಕ್ತರಾಣೆ,
ಅಡಿಗಡಿಗೆ ಗುರುವಿನಾಣೆ ಎಂಬ ವಚನವೆ ಹೊಲ್ಲ!
ಮುಂದೆ ಪಥಕ್ಕೆ ಸಲ್ಲರು.
ಆದಿಯಿಂದ ಬಂದ ವಚನವೆಂದು ಶರಣರ ಕೂಡೆ ಸರಸವಾಡಿದವರು,
ನಗುತಲಿರಿದುಕೊಂಡಡೆ ಅಲಗು ನೆಡದಿಹುದೆ
ಕೂಡಲಸಂಗಮದೇವಾ? ॥ ೧೬[illegible] ॥

೬೬೧

ಅರಗಿನ ಪ್ರತ್ಥಳಿಯುಸುರಿಯ ನಾಲಗೆ ಹೊಯಿದು
ಮಾತಾಡುವ ಸರಸ ಬೇಡ!
ಬೆಣ್ಣೆಯ ಬೆಸಕಂಗೆ ಕೆಂಡದುಂಡಲಿಗೆಯ ಮಾಡಿ
ಚಲ್ಲವಾಡಿದಡೆ ಹಲ್ಲು ಹೋಹುದು!
ಕೂಡಲಸಂಗನ ಶರಣರೊಡನೆ ಸರಸವಾಡಿವಡೆ
ಅದು ವಿರಸ ಕಾಣಿರಯ್ಯಾ. ॥ ೧೩೫ ॥

೬೬೨

ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸುವಂತೆ,
ಉರಿಯ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ,
ಹುಲಿಯ ಮೀಸೆಯ ಹಿಡಿದುಕೊಂಡು ಒಲಿದುಯ್ಯಲನಾಡುವಂತೆ,
ಕೂಡಲಸಂಗನ ಶರಣರೊಡನೆ ಮರೆದು ಸರಸವಾಡಿದಡೆ
ಸುಣ್ಣಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ. ॥ ೧೩೬ ॥

೬೬೩

ಉರಿವ ಕೊಳ್ಳಿಯ ಮಂಡೆಯಲಿಕ್ಕಿದಡುರಿವುದು ಮಾಬುದೆ?
ಕಲ್ಲು ಗುಗ್ಗರಿಯ ಮೆಲಿದಡೆ ಹಲ್ಲು ಹೋಹುದು ಮಾಬುದೆ?
ಶರಣರೊಡನೆ ಸರಸವಾಡಿದಡೆ ನರಕ ತಪ್ಪದು ಕಾಣಾ
ಕೂಡಲಸಂಗಮದೇವಾ. ॥ ೧೩೭ ॥

೬೬೪

ಕೋಣನ ಹೇರಿಂಗೆ ಕುನ್ನಿ ಬಸುಕುತ್ತ ಬಡುವಂತೆ
ತಾವೂ ನಂಬರು, ನಂಬುವರನೂ ನಂಬಲೀಯರು,
ತಾವೂ ಮಾಡರು, ಮಾಡುವರನೂ ಮಾಡಲೀಯರು.
ಮಾಡುವ ಭಕ್ತರ ಕಂಡು ಸೈರಿಸಲಾರದವರ,
ಕೂಗಿಡೆ ಕೂಗಿಡೆ, ನರಕದಲ್ಲಿಕ್ಕುವ ಕೂಡಲಸಂಗಮದೇವ. ॥ ೧೩೮ ॥

೬೬೫

ಜೇಳಿಂಗೆ ಬಸುರಾಯಿತ್ತೆ ಕಡೆ! ಬಾಳೆಗೆ ಫಲವಾಯಿತ್ತೆ ಕಡೆ!
ರಣರಂಗದಲ್ಲಿ ಕಾದುವ ಓಲೆಕಾರಂಗೆ ಓಸರಿಸಿತ್ತೆ ಕಡೆ!

ಮಾಡುವ ಭಕ್ತಂಗೆ ಮನಹೀನವಾದಡೆ ಅದೇ ಕಡೆ
ಕೂಡಲಸಂಗಮದೇವಾ. ॥ ೧೩೯ ॥

೬೬೬

ಹುಲಿಯ ಹಾಲು ಹುಲಿಗಲ್ಲದೆ ಹೊಲದ ಹುಲ್ಲೆಗುಣಬಾರದು,
ಕಲಿಯ ಕಾಲ ತೊಡರು ಛಲದಾಳಿಗಲ್ಲದೆ ಇಕ್ಕಬಾರದು.
ಅಳಿಮನದಾಸೆಯವರ ಮೂಗ ಹಲುದೋರೆ ಕೊಯ್ವ
ಕೂಡಲಸಂಗಮದೇವ. ॥ ೧೪೦ ॥

೬೬೭

"ಅರ್ಥ ಪ್ರಾಣ ಅಭಿಮಾನ ನಿಮ್ಮದೆಂ"ಬಿರಿ,
ಒತ್ತಿ ನೋಡಿದಡೆ ಮುಟ್ಟಲೀಯಿರಿ.
ಮುಟ್ಟೆ ಬಂದಲ್ಲಿ ಕಠಾರಿಯ ಕಾಳಗವ ನೀವಾಡಿಸುವಿರಲ್ಲದೆ
ಲಿಂಗಜಂಗಮವಂತನಾಗಬಾರದು.
ಕೂಡಲಸಂಗಮದೇವಾ, ವೇಷಡಂಭಕರಿಗೆ ಭಕ್ತಿ ಎಂತಪ್ಪುದಯ್ಯಾ. ॥ ೧೪೧ ॥

೬೬೮

ಅಲಗಲಗು ಮೋಹಿಸಿದಲ್ಲದೆ ಕಲಿತನವ ಕಾಣಬಾರದು.
ನುಡಿದ ನುಡಿ ಜಾರಿದಡೆ ಮನಕ್ಕೆ ಮನ ನಾಚಬೇಕು,
ಶಬ್ದ ಲೊಟ್ಟೆಯತನದಲ್ಲಿ ಎಂತಪ್ಪುದಯ್ಯಾ ಭಕ್ತಿ,
ಪಾಪಿಯ ಕೂಸನೆತ್ತಿದಂತೆ.
ಕೂಡಲಸಂಗಮದೇವರ ಭಕ್ತಿ
ಅಳಿಮನದವರಿಗೆ ಅಳವಡದಯ್ಯಾ. ॥ ೧೪೨ ॥

೬೬೯

ಪರಬೀಜವಾದಡೆ ಹಂದೆ ತಾನಪ್ಪನೆ?
ಒರೆಗಟ್ಟಿ ಇರಿಯದವರ ಲೋಕ ಮೆಚ್ಚೂದೆ?
ಉಟ್ಟ ಚಲ್ಲಣ ಕೈಯ ಪಟ್ಟೆಯವಿಡಿದು,
ಗರುಡಿಯ ಕಟ್ಟಿ ಶ್ರವವ ಮಾಡುವಂತೆ
ತನ್ನ ತಪ್ಪಿಸಿಕೊಂಡಡೆ ಶಿವ ಮೆಚ್ಚುವನೆ?
ಅರಿಯದವಂಗೆ ಒಳ್ಳೆ ಹೆಡೆಯನೆತ್ತಿಯಾಡುವಂತೆ
ಬೊಳ್ಳೆಗನ ಭಕ್ತಿ ಕೂಡಲಸಂಗಮದೇವಾ. ॥ ೧೪೩ ॥

೬೭೦

ಮೊನೆ ತಪ್ಪಿದ ಬಳಿಕ ಅಲಗೇನ ಮಾಡೂದು?
ವಿಷ ತಪ್ಪಿದ ಬಳಿಕ ಹಾವೇನ ಮಾಡೂದು?
ಭಾಷೆ ತಪ್ಪಿದ ಬಳಿಕ ದೇವಾ, ಬಲ್ಲಿದ ಭಕ್ತನೇನ ಮಾಡುವನಯ್ಯಾ?
ಭಾಷೆ ತಪ್ಪಿದ ಬಳಿಕ ಪ್ರಾಣದಾಸೆಯಾಸು ಹಾರಿದಡೆ
ಮೀಸಲನು ಸೊಣಗ ಮುಟ್ಟಿದಂತೆ
ಕೂಡಲಸಂಗಮದೇವಾ. || ೧೪೪ ||

೬೭೧

ಶರಣ ಸಂಬಂಧವನರಿದ ಬಳಿಕ
ಮರಳಿ ಭವಿಯ ಬೆರಸಲಾಗದು.
ಬ್ರಹ್ಮೇತಿ ಭ್ರೂಣಹತ್ಯ ವೈತರಣಿ ದುರ್ಗತಿ
ಪಂಚಮಹಾಪಾತಕದಿಂದಧಿಕ ನೋಡಾ.
ಅಳುಪಿ ಭವಿಯೊಡನುಂಡಡೆ ಭಕ್ತನಲ್ಲ
ಕೂಡಲಸಂಗಮದೇವಾ. || ೧೪೫ ||

೬೭೨

ವೀರವ್ರತಿ ಭಕ್ತನೆಂದು ಹೊಗಳಿಕೊಂಬಿರಿ ಕೇಳಿರಯ್ಯಾ:
ವೀರನಾದಡೆ ವೈರಿಗಳು ಮೆಚ್ಚಬೇಕು,
ವ್ರತಿಯಾದಡೆ ಅಂಗನೆಯರು ಮೆಚ್ಚಬೇಕು,
ಭಕ್ತನಾದಡೆ ಜಂಗಮವೆ ಮೆಚ್ಚಬೇಕು.
ಈ ನುಡಿಯೊಳಗೆ ತನ್ನ ಬಗೆಯಿರೆ
ಬೇಡಿದ ಪದವಿಯನೀವ ಕೂಡಲಸಂಗಮದೇವ. || ೧೪೬ ||

೬೭೩

ಕಲಿತನ ತನಗುಳ್ಳಡೆ ಸೂಜಿ ಬಾಳು ಮೊದಲಾಗಿ ಕಾದಲೆಬೇಕು.
ಶರಣಪಥ ತನಗುಳ್ಳಡೆ ಶಿವಭಕ್ತರ ಮನೆಯಲ್ಲಿ ಶಿವರಸವ
ಪಂಚಾಮೃತವ ಮಾಡಿಕೊಳ್ಳಬೇಕು.
ಭ್ರಾಂತುವಿಡಿದು ಲಿಂಗಕ್ಕೋಗರವನರಸುವ
ಪಾತಕರ ಮೆಚ್ಚ ಕೂಡಲಸಂಗಮದೇವ. || ೧೪೭ ||

೬೭೪

ಕಟ್ಟಿ ಬಿಡುವನೆ ಶರಣನು? ಬಿಟ್ಟು ಹಿಡಿವನೆ ಶರಣನು?
ನಡೆದು ತಪ್ಪುವನೆ ಶರಣನು? ನುಡಿದು ಹುಸಿವನೆ ಶರಣನು?
ಸಜ್ಜನಿಕೆ ತಪ್ಪಿದಡೆ, ಕೂಡಲಸಂಗಯ್ಯ
ಮೂಗ ಹಲುದೋರೆ ಕೊಯ್ವ. ॥ ೧೪೮

೬೭೫

ಹುಟ್ಟುವಲ್ಲಿ ಭವಿ, ಮರಳಿ ಭಕ್ತನ ಮಾ[ಡೆ], ಪೂರ್ವಾಶ್ರಯವ ಕಳೆದು,
ಹೋಹುವಲ್ಲಿ ಭವಿಯಾಗಿ ಹೋದರ ಮುಟ್ಟಲಾಗದು.
ಅವನ ಮುಟ್ಟಿದವ ಮುನ್ನವೆ ವ್ರತಗೇಡಿ.
ಅವನ ಶ್ರಾದ್ಧಕಾಲವೆ ಶ್ವಾನಮಾಂಸ,
ಕ್ರಿಯಾಕಾಲವೆ ಕ್ರಿಮಿಗಳು, ತದ್ದಿನವೆ ಮದ್ಯಮಾಂಸ.
ಇದು ಕಾರಣ, ಕೂಡಲಸಂಗಮದೇವಾ,
ಅವನ ಮನೆಯ ವಿಚಾರಿಸದೆ ಹೊಕ್ಕವಂಗೆ ನಾಯಕನರಕ. ॥ ೧೪೯ ॥

೬೭೬

ಒಡನೆ ಹುಟ್ಟಿದುದಲ್ಲ, ಒಡನೆ ಬೆಳೆದುದಲ್ಲ,
ಎಡೆಯಲಾದ ಒಂದು ಉಡುಗೆಯನುಟ್ಟು
ಸಡಿಲಿದಡೆ ಲಜ್ಜೆ ನಾಚಿಕೆಯಾಯಿತ್ತೆಂಬ ನುಡಿ
ದಿಟವಾಯಿತ್ತು ಲೌಕಿಕದಲ್ಲಿ.
ಪಡೆದ ಗುರುಕರುಣವ, ಒಡನೆ ಹುಟ್ಟಿದ ನೇಮವನು ಬಿಡಗಿರಲಪ್ಪ.
ಬಿಟ್ಟಡೆ ಕಷ್ಟ, ಕೂಡಲಸಂಗಮದೇವನಡಸಿ
ಕೆಡಹುವ ನಾಯಕನರಕದಲ್ಲಿ. ॥ ೧೫೦

೬೭೭

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ,
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ,
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ,
ಛಲಬೇಕು ಶರಣಂಗೆ ಲಿಂಗಜಂಗಮವನೊಂದೆಂಬ,
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ,
ಛಲವಿಲ್ಲದವರ ಮೆಚ್ಚ ಕೂಡಲಸಂಗಮದೇವ. ॥ ೧೫೧ ॥

೬೭೮

ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ
ಕೇಳಿರಯ್ಯಾ ಎರಡಾಳಿನ ಭಾಷೆಯು:
ಕೊಲುವೆನೆಂಬ ಭಾಷೆ ದೇವನದು, ಗೆಲುವೆನೆಂಬ ಭಾಷೆ ಭಕ್ತನದು.
ಸತ್ಯವೆಂಬ ಕೂರಲಗನೆ ಕಳೆದುಕೊಂಡು
ಸದ್ಭಕ್ತರು ಗೆದ್ದರು ಕಾಣಾ, ಕೂಡಲಸಂಗಮದೇವಾ. || ೧೫೨ ||

೬೭೯

ಮುನ್ನಿನ ಕಲಿ ವೀರಧೀರರು ಕಾದಿದ ರಣಗಳನು
ಪರಿಪರಿಯಲಿ ಬಣ್ಣಿಸಿ ಹೇಳಲುಬಹುದಲ್ಲದೆ
ಆ ದಳವಿದಿರಾದಲ್ಲಿ ಬಿರಿದ ಪಚಾರಿಸಿ, ಕಾದಿ ತೋರಲುಬಾರದು.
ಮುನ್ನಿನ ಪುರುಷಸ್ತ್ರೀಯರು ಒಲಿಸಿದ ಆಯತವ
ಪರಿಪರಿಯಲು ಬಣ್ಣಿಸಲು ಬಹುದಲ್ಲದೆ
ಪುರುಷನಿರ್ವಾಣಕ್ಕುರಿವಗ್ನಿಯ
ಬಂದು ಪೊಕ್ಕು ತೋರಲುಬಾರದು.
ಮುನ್ನಿನ ಪುರಾತನರೆಲ್ಲರು ತನುಮನಧನವನಿತ್ತು
ಮಾಡಿ, ನೀಡಿ ಲಿಂಗವ ಕೂಡಿದ ಪರಿಗಳನು
ಅನುಭವದಲರ್ಥೈಸಿ ಹೇಳಬಹುದಲ್ಲದೆ
ಮಾಡಿ, ನೀಡಿ ತೋರಲುಬಾರದು.
ಇಂತೀ ಅರೆಬಿರಿದಿನ ಬಂಟರು, ಪುರುಷಸ್ತ್ರೀಯರು, ಪುರಾತನರು
ಬರಿಯ ಮಾತನಾಡಿ ಹೊರಗೆ ಮೆರೆವರಲ್ಲಾ!.
ಪರೀಕ್ಷೆಯುಂಟಾಗಿಯಿದ್ದಡೆ ಒಳಗಿನವರ ಹೆಸರ ಹಿಡಿದು
ಪರಿಪರಿಯಲು ಹೊಗಳುವರು.
ಶರೀರಮರ್ಥಪ್ರಾಣ ಗುರುಲಿಂಗಜಂಗಮಕ್ಕೆ ಪರೀಕ್ಷೆಯುಂಟಾಗಿಯೆ
‘ಶತ ಮಹೇಶ್ವರ ಪುರಾತವಳಿ’ಯೆಂಬ
ಪರಮಬಂಧುಗಳಾತನ ನೆನೆನೆನೆದು ಬದುಕುವರು.
ಇಂತೀ ಅನುಭಾವವನೋದಿ, ಅಕ್ಷರಾಭ್ಯಾಸವ ಸಾಧಿಸಿ
ತರ್ಕಿಸಿ ನಿಂದಿಸಲಾಗದು.
ಕೂಡಲಸಂಗನ ಶರಣರಿಗಲ್ಲದನುಭಾವವಿಲ್ಲ. || ೧೫೩ ||

೬೮೦

ಕಬ್ಬಿನ ಹಣೆದವನಾಡುವರಲ್ಲದೆ, ಕಾಯದ ಹಣೆದವನಾಡುವರೆ?
ಮೇಲೊಡ್ಡವಾಯಿತ್ತೆಂದು ಕೂಡಲಸಂಗಮದೇವಾ,
ನೀನಿಕ್ಕಿದ ಜೂಜಿಂಗೆ ಹೊಯಿದು ಗೆದ್ದ ಸಿರಿಯಾಳ. || ೧೫೪ ||

೬೮೧

ಅರ್ಥ ಪ್ರಾಣ ಅಭಿಮಾನವ ಕೊಟ್ಟೆನೆಂಬರಲ್ಲದೆ
ಕೊಟ್ಟ ಭಕ್ತರನಾರನೂ ಕಂಡುದಿಲ್ಲ:
ದಾಸ ತನ್ನ ವಸ್ತ್ರವ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ,
ಸಿರಿಯಾಳ ತನ್ನ ಮಗನ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ,
ಬಲ್ಲಾಳ ತನ್ನ ವಧುವ ಕೊಟ್ಟನಲ್ಲದೆ ತನ್ನ ಕೊಟ್ಟುದಿಲ್ಲ.
ಇವೆಲ್ಲ ಹೊರಗಣ ಮಾತು,
ಕೂಡಲಸಂಗಮದೇವರಲ್ಲಿ ತನ್ನ ಕೊಟ್ಟ ಸಿಂಧುಮರಾಳ. || ೧೫೫ ||

೬೮೨

ಒಂದು ಮಾತೆನ್ನಬಹುದೆ ಶಬ್ದಸಾರಾಯವನು?
ಒಂದು ಮಾತೆನ್ನಬಹುದೆ ಶರಣಸಂಬಂಧವನು?
ಕೂಡಲಸಂಗಮದೇವರು
ನಂಬಿಗೆ ಓ ಎಂದುದನೊಂದು ಮಾತೆನ್ನಬಹುದೆ? || ೧೫೬ ||

೬೮೩

ಭಕ್ತರೇ ಸಮರ್ಥರು. ಅಸಮರ್ಥರೆಂದೆನಲುಂಟೆ?
ಚೆನ್ನನೆತ್ತ, ಚೋಳನೆತ್ತ?
ಚೆನ್ನನೊಡನುಂಡ ಶಿವ ಆಹಾ! ಅಯ್ಯಾ!.
ಚೆನ್ನ, ಚೋಳನ ಮನೆಯ ಕಂಪಣಿಗನಯ್ಯಾ!
ಕೂಡಲಸಂಗಮದೇವ ಭಕ್ತಿಲಂಪಟನಯ್ಯಾ! || ೧೫೭ ||

೬೮೪

ನಿಸ್ಸೀಮ ಗುಗ್ಗುಳವನಿಕ್ಕಿದವನೊಬ್ಬ ಶರಣ,
ಉಘೇ ಚಾಂಗು ಭಲಾ ಎಂಬ ಹೊಗೆ ಗಗನವ ತೀವೆ.
ಓಹಿಲನ ಮೆರೆದ ಸೌರಾಷ್ಟ್ರಮಂಡಲದಲ್ಲಿ,
ಕೂಡಲಸಂಗಮದೇವ ಭಕ್ತಿವತ್ಸಲನಾಗಿ. || ೧೫೮ ||

೬೮೫

ಲಿಂಗವಶದಿಂದ ಬಂದ ನಡೆಗಳು, ಲಿಂಗವಶದಿಂದ ಬಂದ ನುಡಿಗಳು,
ಲಿಂಗವಂತರು ತಾವು ಅಂಜಲದೇಕೆ?
ಲಿಂಗವಿರಿಸಿದಂತಿಪ್ಪುದಲ್ಲದೆ,
ಕೂಡಲಸಂಗಮದೇವ ಭಕ್ತರಭಿಮಾನ ತನ್ನದೆಂಬನಾಗಿ. ॥ ೧೫೯ ॥

೬೮೬

ಶಿವಭಕ್ತನಾಗಿ ತನ್ನ ಹಿಡಿದೆಹೆನೆಂದು ಹೋದಡೆ:
ನುಗ್ಗು ಮಾಡುವ, ನುಸಿಯು ಮಾಡುವ,
ಮಣ್ಣು ಮಾಡುವ, ಮಸಿಯು ಮಾಡುವ.
ಕೂಡಲಸಂಗಮದೇವರ ನೆರೆ ನಂಬಿದನಾದಡೆ:
ಕಡೆಗೆ ತನ್ನಂತೆ ಮಾಡುವ. ॥ ೧೬೦ ॥

೬೮೭

ಅರೆವನಯ್ಯಾ ಸಣ್ಣವಹನ್ನಕ್ಕ,
ಒರೆವನಯ್ಯಾ ಬಣ್ಣಗಾಬನಕ್ಕ.
ಅರೆದಡೆ ಸಣ್ಣವಾಗಿ, ಒರೆದಡೆ ಬಣ್ಣವಾದಡೆ
ಕೂಡಲಸಂಗಮದೇವನೊಲಿದು ಸಲಹುವನು. ॥ ೧೬೧ ॥

೬೮೮

ಅಂಜಿದಡೆ ಮಾಣದು, ಅಳುಕಿದಡೆ ಮಾಣದು,
ವಜ್ರಪಂಜರದೊಳಗಿದ್ದಡೆ ಮಾಣದು, ತಪ್ಪದುಪ್ಪೋ ಲಲಾಟಲಿಖಿತ.
ಕಕ್ಕುಲತೆಗೆ ಬಂದಡೆ ಆಗದು ನೋಡಾ.
ಧೃತಿಗೆಟ್ಟು, ಮನ ಧಾತುಗೆಟ್ಟಡೆ ಅಪ್ಪುದು ತಪ್ಪದು,
ಕೂಡಲಸಂಗಮದೇವಾ. ॥ ೧೬೨ ॥

೬೮೯

ಹುಟ್ಟಿದ ಬಳಿಕ ಕೊಟ್ಟ ಭೋಗಂಗಳ ತಪ್ಪಿಸಿಹೆನೆಂದಡೆ
ತಪ್ಪದು ನೋಡಯ್ಯಾ.
ಎನಗಿನ್ನೆಂತೊ, ಎನಗಿನ್ನೆಂತೊ, ಎನಗಿನ್ನೆಂತೆಂವೆನಬೇಡಯ್ಯಾ.
'ನಾ ಭುಕ್ತಂ ಕ್ಷೀಯತೇ ಕರ್ಮ' ಎಂಬ ಶ್ರುತಿ ತಪ್ಪದು,
ಕೂಡಲಸಂಗಮದೇವಾ. ॥ ೧೬೩ ॥

೬೯೦

ಆಯುಷ್ಯ ತೀರಿದಲ್ಲದೆ ಮರಣವಿಲ್ಲ,
ಭಾಷೆ ತಪ್ಪಿದಲ್ಲದೆ ದಾರಿದ್ರ್ಯವಿಲ್ಲ.
ಅಂಜಲದೇಕೋ ಲೋಕ ವಿಗರ್ಭಣೆಗೆ?
ಅಂಜಲದೇಕೋ, ಕೂಡಲಸಂಗಮದೇವಾ ನಿಮ್ಮಾಳಾಗಿ. ॥ ೧೭೪ ॥

೬೯೧

ಮನಕ್ಕೆ ಮನ ಒಂದಾಗಿ, ಧನಕ್ಕೆ ಧನ ಒಂದಾಗಿ
ನಚ್ಚಿದ ಮಚ್ಚು ಅಚ್ಚೊತ್ತಿದಂತಿರಬೇಕು.
ಪ್ರಾಣಕ್ಕೆ ಪ್ರಾಣ ಒಂದಾಗಿ, ಶುಭಸೂಚನೆ ಒಂದಾಗಿರದ
ನಚ್ಚು ಮಚ್ಚು ಪಾರವೈದೂದೆ?
ಶಿರ ಹರಿದಡೇನು, ಕರುಳು ಕುಪ್ಪಳಿಸಿದಡೇನು?
ಇಂತಪ್ಪ ಸಮಸ್ತವಸ್ತುವೆಲ್ಲವೂ ಹೋದಡೇನು?
ಚಿತ್ತ ಮನ ಬುದ್ಧಿ ಒಂದಾದ ಮಚ್ಚು, ಬಿಚ್ಚಿ ಬೇರಾಗದಿದ್ದಡೆ
ಮೆಚ್ಚುವ ನಮ್ಮ ಕೂಡಲಸಂಗಮದೇವ. ॥ ೧೭೫ ॥

## ಮಾಹೇಶ್ವರನ ಮಾಹೇಶ್ವರಸ್ಥಲ

೬೯೨

ಎನಿಸೆನಿಸೆಂದಡೆ ನಾ ಧೃತಿಗೆಡೆನಯ್ಯಾ.
ಎಲುದೋರಿದಡೆ, ನರ ಹರಿದಡೆ, ಕರುಳು ಕುಪ್ಪಳಿಸಿದಡೆ
ನಾ ಧೃತಿಗೆಡೆನಯ್ಯಾ.
ಶಿರಹರಿದು ಅಟ್ಟೆ ನೆಲಕ್ಕೆ ಬಿದ್ದಡೆ
ನಾಲಗೆ ಕೂಡಲಸಂಗಾ ಶರಣೆನುತ್ತಿದ್ದಿತ್ತಯ್ಯಾ. ॥ ೧೮೬ ॥

೬೯೩

ಒಣಗಿಸಿ ಎನ್ನ ಘಣಘಣಲನೆ ಮಾಡಿದರೆಂದೆನು.
ಮರಣವೃಕ್ಷಕ್ಕ ನಿಮ್ಮ ಚರಣವ ನೆನೆವುದ ಮಾಣೆ, ಮಾಣೆ.
ಶರಣೆಂಬುದ ಮಾಣೆ, ಮಾಣೆ.

ಕೂಡಲಸಂಗಮದೇವಯ್ಯಾ, ಎನ್ನ ಹೆಣನ ಮೇಲೆ
ಕಂಚಿಟ್ಟುಂಡಡೆಯೂ ಮಾಣೆ, ಮಾಣೆ. ॥ ೧೬೭ ॥

೬೯೪

ಜಾಗ್ರಸ್ವಪ್ನಸುಷುಪ್ತಿಯಲ್ಲಿ ಮತ್ತೊಂದ ನೆನೆದಡೆ ತಲೆದಂಡ, ತಲೆದಂಡ!
ಹುಸಿಯಾದಡೆ, ದೇವಾ ತಲೆದಂಡ, ತಲೆದಂಡ!
ಕೂಡಲಸಂಗಮದೇವಾ,
ನೀವಲ್ಲದ ಅನ್ಯವ ನೆನೆದಡೆ ತಲೆದಂಡ, ತಲೆದಂಡ! ॥ ೧೬೮ ॥

೬೯೫

ಸುಖ ಬಂದಡೆ ಪುಣ್ಯದ ಫಲವೆನ್ನೆನು,
ದುಃಖ ಬಂದಡೆ ಪಾಪದ ಫಲವೆನ್ನೆನು.
ನೀ ಮಾಡಿದಡಾಯಿತ್ತೆಂದೆನ್ನೆನು,
ಕರ್ಮಕೆ ಕರ್ತುವೆ ಕಡೆಯೆಂದೆನ್ನೆನು,
ಉದಾಸೀನವಿಡಿದು ಶರಣೆನ್ನೆನು.
ಕೂಡಲಸಂಗಮದೇವಾ, ನೀ ಮಾಡಿದುಪದೇಶವು ಎನಗೀ ಪರಿಯಲ್ಲಿ–
ಸಂಸಾರವ ಸವೆಯೆ ಬಳಸುವೆನು. ॥ ೧೬೯ ॥

೬೯೬

ಕಾಯುವ ಕಳವಳಕ್ಕಂಜಿ, 'ಕಾಯಯ್ಯಾ' ಎನ್ನೆನು,
ಜೀವನೋಪಾಯಕ್ಕೆ 'ಈಯಯ್ಯಾ' ಎನ್ನೆನು.
'ಯದ್ ಭಾವಂ ತದ್ ಭವತಿ': ಉರಿ ಬರಲಿ, ಸಿರಿ ಬರಲಿ
ಬೇಕು ಬೇಡೆನ್ನೆನಯ್ಯಾ.
ಆ ನಿಮ್ಮ ಹಾರೆನು, ಮಾನವರ ಬೇಡೆನು.
ಆಣೆ ನಿಮ್ಮಾಣೆ, ಕೂಡಲಸಂಗಮದೇವಾ. ॥ ೧೭೦ ॥

೬೯೭

ನಾಳೆ ಬಪ್ಪುದು ನಮಗಿಂದೆ ಬರಲಿ,
ಇಂದು ಬಪ್ಪುದು ನಮಗೀಗಲೆ ಬರಲಿ,
ಇದಕಾರಂಜುವರು, ಇದಕಾರಳುಕುವರು?
'ಜಾತಸ್ಯ ಮರಣಂ ಧ್ರುವಂ' ಎಂದುದಾಗಿ
ನಮ್ಮ ಕೂಡಲಸಂಗಮದೇವರು ಬರೆದ ಬರೆಹವ ತಪ್ಪಿಸುವಡೆ
ಹರಿಬ್ರಹ್ಮಾದಿಗಳಿಗಳವಲ್ಲ. ॥ ೧೭೧ ॥

೬೯೮

ಕಳಹೋದಡೆ ಕನ್ನದುಳಿಯ ಹಿಡಿವೆ,
ಬಂದಿವಿಡಿದಡೆ ನಿಮ್ಮಿಂದ ಮುಂದೆ ನಡೆವೆನು.
ಮನಭೀತಿ ಮನಶಂಕೆಗೊಂಡೆನಾದಡೆ
ನಿಮ್ಮಾಣೆ, ನಿಮ್ಮ ಪುರಾತನರಾಣೆ.
ಆಳ್ದರ ನಡೆ ಸದಾಚಾರವೆನ್ನದಿರ್ದಡೆ,
ಕಟ್ಟಾಳು ಶಿಷ್ಟತನಕ್ಕೆ ಹೋಹ ಕಷ್ಟವ ನೋಡಾ,
ಕೂಡಲಸಂಗಮದೇವಾ. || ೧೭೨ ||

೬೯೯

ಜೋಳವಾಳಿಯಾನಲ್ಲ, ವೇಳೆವಾಳಿಯವ ನಾನಯ್ಯಾ.
ಹಾಳುಗೆಟ್ಟೋಡುವ ಆಳು ನಾನಲ್ಲವಯ್ಯಾ.
ಕೇಳು, ಕೂಡಲಸಂಗಮದೇವಾ,
ಮರಣವೆ ಮಹಾನವಮಿ. || ೧೭೩ ||

೭೦೦

ಕರ್ಮವೆಂಬ ಅಂಕದೊಡನೆ ತೊಡರಿದೆ.
ಬಿನ್ನಪ ಅವಧಾರು! ನಿಮ್ಮಾಳಿನ ಭಾಷೆಯ :
ಕಡೆಗಳಕ್ಕೆ ನೂಂಕುವೆ, ಕೆಡಹುವೆನಂಕವ.
ಕರೆದಡೋ ಎನಿಸದಡೆ ನಿಮ್ಮಾಳಲ್ಲ.
ಶಿವಶರಣೆಂಬ ದಂಡೆಯ ಹೂಡಿ
ಗಣಮೇಳಾಪವೆಂಬ ಅಲಗಿನಿಂದಿರಿವೆ, ಕೂಡಲಸಂಗಮದೇವಾ. || ೧೭೪ ||

೭೦೧

ಕಟ್ಟಿದೆನೊರೆಯ, ಬಿಟ್ಟೆ ಜನ್ನಿಗೆಯುರ,
ಮುಟ್ಟಿ ಬಂದಿರಿದಡೆ ಓಸರಿಸುವನಲ್ಲ.
ಓಡದಿರು ಓಡದಿರು,
ನಿಮ್ಮ ಶರಣರ ಮನೆಯ ಬಿರಿದಿನ ಅಂಕಕಾರ.
ಓಡದಿರು, ಓಡದಿರು, ಎಲೆ ಎಲೆ ದೇವಾ,
ಎಲೆ ಎಲೆ ಸ್ವಾಮಿ, ಎಲೆ ಎಲೆ ಹಂದೆ
ಕೂಡಲಸಂಗಮದೇವಾ. || ೧೭೫ ||

೭೦೨

ಗರುಡಿಯ ಕಟ್ಟಿ ಅರುವತ್ತುನಾಲ್ಕು ಕೋಲ ಅಭ್ಯಾಸವ ಮಾಡಿದೆನಯ್ಯಾ.
ಇರಿವ ಘಾಯ, ಕಂಡೆಯ ಭೇದವಿನ್ನೂ ತಿಳಿಯದು.
ಪ್ರತಿಗರುಡಿಕಾರ ಬಿರಿದ ಪಾಡಿಂಗೊದ[ಗೆ]
ವೀರಪ[ಟ್ಟವ] ಕಟ್ಟಿ, ತಿಗುರನೇರಿಸಿಕೊಂಡು,
ಗುರು ಕಳಸನೇರಿ, ಕಠಾರಿಯ ಕೊಂಡಲ್ಲಿ
'ಹೋಯಿತ್ತು ಗಳೆ' ಎಂದಡೆ
ಎನ್ನ ನಿನ್ನಲ್ಲಿ ನೋಡು, ಕೂಡಲಸಂಗಮದೇವಾ. ॥ ೧೭೬ ॥

೭೦೩

ಶರಣರೊಡನೆ ಶ್ರವವ ಮಾಡಿ, ಮಾರುಗೋಲ ಬಿಡುವೆನಯ್ಯಾ.
ತಾಗಲಿ, ತಪ್ಪಲಿ ಗೆಲವೆನ್ನದೆಂಬೆನಯ್ಯಾ.
ಕಳನಿಂದ ಕಡೆಗಳಕ್ಕೆ ಓಡುವೆ,
ಕೂಡಲಸಂಗಯ್ಯಾ. ॥ ೧೭೭ ॥

೭೦೪

ಎಲೆ ಗಂಡುಗೂಸೆ ನೀ ಕೇಳಾ, ನಿನಗೊಬ್ಬಗೆಂದುಟ್ಟೆ ಗಂಡುಡಿಗೆಯನು.
ಮತ್ತೊಮ್ಮೆ ಆನು ಗಂಡಪ್ಪೆನಯ್ಯಾ,
ಮತ್ತೊಮ್ಮೆ ನಾನು ಹೆಣ್ಣಪ್ಪೆನಯ್ಯಾ.
ಕೂಡಲಸಂಗಮದೇವಾ,
ನಿಮ್ಮಡಿಗೆ ವೀರನಪ್ಪೆ, ನಿಮ್ಮ ಶರಣರಿಗೆ ವಧುವಪ್ಪೆ. ॥ ೧೭೮ ॥

# ಮಾಹೇಶ್ವರನ ಭಕ್ತಸ್ಥಲ

೭೦೫

ಕಟ್ಟುವೆನುಪ್ಪರಗುಡಿಯ ಜಗವರಿಯೆ:
ಮಾಡುವೆನೆನ್ನ ಕಾಯ ಕೆಡೆವನ್ನಕ್ಕ,
ಬೇಡೂದೆನ್ನ ತನುಮನಧನವ.
ಬೇಡಲಾರದ ಹಂದೇ, ನೀ ಕೇಳಾ,
ಈ ಬಿರಿದು ಸಂದಿತ್ತು, ಕೂಡಲಸಂಗಮದೇವಾ. ॥ ೧೭೯ ॥

೭೦೬

ಹುಟ್ಟುತ್ತ ದ್ರವ್ಯವನರಿಯದವಂಗೆ ಐಶ್ವರ್ಯವಂತ ಮಗನಾದಡೆ
ಲಕ್ಷಸಂಖ್ಯೆಯ ಹಿರಣ್ಯವ ತಂದು ಸಂತೋಷ ಪಡಿಸುವಂತೆ,
ಕಾಳೆಗಮುಖವಾವುದೆಂದರಿಯದ ಹಂದೆ ನೃಪಂಗೆ
ಒಬ್ಬ ಕ್ಷತ್ರಿಯಸಹ ಕುಮಾರ ಹುಟ್ಟಿ, ಕಿಗ್ಗಡಲ ರಕ್ತದ ಹೊನಲಲ್ಲಿ
ಕಡಿದು ಮುಳುಗಾಡುವ ಕೊಳುಗುಳವ ಕಂಡು ಪರಿಣಾಮಿಸುವಂತೆ
ಆನು ಪರಿಣಾಮಿಸುವೆನಯ್ಯಾ, ಕೂಡಲಸಂಗಮದೇವಾ
ನೀವು ಬಂದೆನ್ನ ಬೇಡಿದಡೆ. ॥ ೧೮೦ ॥

೭೦೭

ಅರ್ಥವನರ್ಥವ ಮಾಡಿ ಕೋಳಾಹಳಂಗೆಯ್ಯುತ್ತಿರಲಿ,
ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿವುತ್ತಿರಲಿ,
ಮುಟ್ಟುವ ಸ್ತ್ರೀಯ ಕಣ್ಣ ಮುಂದೆ
ಅಭಿಮಾನಂಗೊಂಡು ನೆರೆವುತ್ತಿರಲಿ,
ಇಂತೀ ತ್ರಿವಿಧವೂ ಹೊರಗಣವು.
ಇನ್ನೆನ್ನಂಗದ ಮೇಲೆ ಬರಲಿ, ಹಿಡಿಖಂಡವ ಕೊಯ್ಯಲಿ,
ಇಕ್ಕುವ ಶೂಲ ಪ್ರಾಪ್ತಿಸಲಿ,
ಹಾಕೊಂದೆಸೆ ಹನ್ನೊಂದೆಸೆಯಾಗಿ ಮಾಡುತ್ತಿರಲಿ.
ಮತ್ತೆಯೂ ಲಿಂಗಾರಾಧನೆಯ ಮಾಡುವೆ,
ಜಂಗಮಾರಾಧನೆಯ ಮಾಡುವೆ, ಪ್ರಸಾದಕ್ಕೆ ತಪ್ಪೆ.
ಇಂತಪ್ಪ ಭಾಷೆ ಕಿಂಚಿತ್ತು ಹುಸಿಯಾದಡೆ
ನೀನಂದೆ ಮೂಗ ಕೊಯಿ, ಕೂಡಲಸಂಗಮದೇವಾ. ॥ ೧೮೧ ॥

೭೦೮

ತನುವ ಬೇಡಿದಡೀವೆ, ಮನವ ಬೇಡಿದಡೀವೆ, ಧನವ ಬೇಡಿದಡೀವೆ,
ಬೇಡು, ಬೇಡೆಲೆ ಹಂದೆ.
ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ,
ಕೂಡಲಸಂಗಮದೇವಾ, ನಿಮಗಿತ್ತು ಶುದ್ಧನಾಗಿಪ್ಪೆ,
ನಿಮ್ಮ ಪುರಾತರ ಮನೆಯಲ್ಲಿ. ॥ ೧೮೨ ॥

೭೦೯

ನಾನು ಆರಂಬವ ಮಾಡುವೆನಯ್ಯಾ, ಗುರುಪೂಜೆಗೆಂದು,
ನಾನು ಬೆವಹಾರವ ಮಾಡುವೆನಯ್ಯಾ, ಲಿಂಗಾರ್ಚನೆಗೆಂದು,
ನಾನು ಪರಸೇವೆಯ ಮಾಡುವೆನಯ್ಯಾ, ಜಂಗಮದಾಸೋಹಕ್ಕೆಂದು.
ನಾನಾವಾವ ಕರ್ಮಂಗಳ ಮಾಡಿದಡೆಯು
ಆ ಕರ್ಮಫಲಭೋಗವ ನೀ ಕೊಡುವೆ ಎಂಬುದ ನಾನು ಬಲ್ಲೆನು.
ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ಮಾಡೆನು,
ನಿಮ್ಮ ಸೊಮ್ಮಿಂಗೆ ಸಲಿಸುವೆನು.
ನಿಮ್ಮಾಣೆ ಕೂಡಲಸಂಗಮದೇವಾ. ||೧೮೩ ||

೭೧೦

ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ,
ಎನ್ನ ಒಡಲಿಂಗೆ, ಎನ್ನ ಒಡವೆಗೆಂದು ಎನ್ನ ಮಡದಿ–ಮಕ್ಕಳಿಗೆಂದು,
ಕುದಿದೆನಾದಡೆ ಎನ್ನ ಮನಕ್ಕೆ ಮನವೆ ಸಾಕ್ಷಿ.
ಆಸನೇ ಶಯನೇ ಯಾನೇ ಸಂಪರ್ಕೇ ಸಹಭೋಜನೇ ।
ಸಂಚರಂತಿ ಮಹಾಘೋರೇ ನರಕೇ ಕಾಲಮಕ್ಷಯಂ ॥
ಎಂಬ ಶ್ರುತಿಯ ಬಸವಣ್ಣನೋದುವನು,
ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು
ಓಲೈಸಿಹನೆಂದು ನುಡಿವರಯ್ಯಾ ಪ್ರಮಥರು.
ಕೊಡುವೆನೆ ಉತ್ತರವನವರಿಗೆ? ಕೊಡಲಮ್ಮೆ.
ಹೊಲೆಹೊಲೆಯರ ಮನೆಯ ಹೊಕ್ಕಾದಡೆಯೂ,
ಸಲೆ ಕೈಕೂಲಿಯ ಮಾಡಿಯಾದಡೆಯೂ,
ನಿಮ್ಮ ನಿಲವಿಂಗೆ ಕುದಿವೆನಲ್ಲದೆ, ಎನ್ನ ಒಡಲವಸರಕ್ಕೆ ಕುದಿದೆನಾದಡೆ
ತಲೆದಂಡ ಕೂಡಲಸಂಗಮದೇವಾ! || ೧೮೪ ||

೭೧೧

ದೇವ, ದೇವಾ ಬಿನ್ನಹ ಅವಧಾರು:
ವಿಪ್ರ ಮೊದಲು, ಅಂತ್ಯಜ ಕಡೆಯಾಗಿ
ಶಿವಭಕ್ತರಾದವರನೆಲ್ಲನೊಂದೆ ಎಂಬೆ.
ಹಾರುವ ಮೊದಲು,ಶ್ವಪಚ ಕಡೆಯಾಗಿ
ಭವಿಯಾದವರನೆಲ್ಲರನೊಂದೆ ಎಂಬೆ.
ಹೀಂಗೆಂದು ನಂಬೂದೆನ್ನ ಮನ.

ಈ ನುಡಿದ ನುಡಿಯೊಳಗೆ ಎಳ್ಳ ಮೊನೆಯಷ್ಟು ಸಂದೇಹವುಳ್ಳಡೆ
ಹಲುದೋರೆ ಮೂಗ ಕೊಯಿ, ಕೂಡಲಸಂಗಮದೇವಾ. ॥ ೧೮೫ ॥

೭೧೨

ಒಲ್ಲೆನಯ್ಯಾ, ಒಲ್ಲೆನಯ್ಯಾ, ನಿಮ್ಮವರಲ್ಲದವರ,
ಒಲ್ಲೆನಯ್ಯಾ, ಒಲ್ಲೆನಯ್ಯಾ, ಜಗವೆಲ್ಲರಿಯಲು,
ಒಲ್ಲೆನಯ್ಯಾ, ಒಲ್ಲೆನಯ್ಯಾ, ನೀ ಮುನಿದಡೆ ಮುನಿ.
ಕೂಡಲಸಂಗಮದೇವಾ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ॥ ೧೮೬ ॥

೭೧೩

ಆದಿಯಲಾಗಲಿ, ವೇದದಲಾಗಲಿ, ಶಾಸ್ತ್ರದಲಾಗಲಿ, ಸಮಯದಲಾಗಲಿ,
ಎನ್ನವರೆನ್ನೆನು, ಎನ್ನವೆನ್ನೆನು.
ಎನ್ನವರೆಂದಡೆ ಸಂಗಾ ನಿಮ್ಮಲ್ಲಿಗೆ ದೂರ.
ಎನ್ನವರೆಂದಡೆ ಜನ್ನಕ್ಕೆ ನಡೆವರೆ?
ಎನ್ನವರಲ್ಲ, ಕೂಡಲಸಂಗಾ ನಿಮ್ಮಾಣೆ. ॥ ೧೮೭ ॥

೭೧೪

ಅಣ್ಣ, ತಮ್ಮ, ಹೆತ್ತಯ್ಯ ಗೋತ್ರವಾದಡೇನು?
ಲಿಂಗಸಾಹಿತ್ಯರಲ್ಲದವರ ಎನ್ನವರೆನ್ನೆನಯ್ಯಾ.
ನಂಟುಭಕ್ತಿ ನಾಯಕನರಕ,
ಕೂಡಲಸಂಗಮದೇವಾ. ॥ ೧೮೮ ॥

೭೧೫

ಒಡೆಯರಿಲ್ಲದ ಮನೆಯ ತುಡುಗುಣಿ ನಾಯಿ ಹುಗುವಂತೆ,
ನೀನಿಲ್ಲದವರ ಮನೆಯ ಹೊಗೆನು, ಸಂಗಯ್ಯಾ.
ಶ್ವಪಚಕೋಪಿಗಳಾಗಲಿ, ಕೂಡಲಸಂಗಯ್ಯಾ
ನೀನಿದ್ದವನೆ ಕುಲಜನು. ॥ ೧೮೯ ॥

೭೧೬

ಹೊನ್ನು ಹೆಣ್ಣು ಮಣ್ಣೆಂಬ ಕರ್ಮದ ಬಲೆಯಲ್ಲಿ ಸಿಲುಕಿ,
ವೃಥಾಯು ಬರುದೊರೆ ಹೋಹ ಕೆಡುಕ ಮಾನವ ನಾನಲ್ಲ.

ಹಾರುವನೆಯ್ಯಾ ಭಕ್ತರ ಬರವ ಗುಡಿಗಟ್ಟಿ,
ಹಾರುವನೆಯ್ಯಾ ಶರಣರ ಬರವ ಗುಡಿಗಟ್ಟಿ,
ಕೂಡಲಸಂಗಮದೇವನು ವಿಪ್ರಕರ್ಮವ ಬಿಡಿಸಿ,
ಅಶುದ್ಧನ ಶುದ್ಧನ ಮಾಡಿದನಾಗಿ. ॥ ೧೯೦ ॥

೭೧೭

ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ,
ತರ್ಕದ ಬೆನ್ನ ಬಾರನೆತ್ತುವ, ಆಗಮದ ಮೂಗ ಕೊಯಿವೆ, ನೋಡಯ್ಯಾ.
ಮಹಾದಾನಿ ಕೂಡಲಸಂಗಮದೇವಾ,
ಮಾದಾರ ಚೆನ್ನಯ್ಯನ ಮನೆಯ ಮಗ ನಾನಯ್ಯಾ. ॥ ೧೯೧ ॥

೭೧೮

ಆವ ಕುಲವಾದಡೇನು? ಶಿವಲಿಂಗವಿದ್ದವನೆ ಕುಲಜನು,
ಕುಲವನರಸುವರೆ ಶರಣರಲ್ಲಿ, ಜಾತಿಸಂಕರನಾದ ಬಳಿಕ?
ಶಿವಧರ್ಮಕುಲೇಜಾತಃ ಪುನರ್ಜನ್ಮ ವಿವರ್ಜಿತಃ ।
ಉಮಾ ಮಾತಾ ಪಿತಾ ರುದ್ರ ಐಶ್ವರಂ ಕುಲಮೇವ ಚ ॥ ಎಂದುದಾಗಿ,
ಒಕ್ಕುದ ಕೊಂಬೆನವರಲ್ಲಿ, ಕೂಸ ಕೊಡುವೆ.
ಕೂಡಲಸಂಗಮದೇವಾ, ನಂಬುವೆ ನಿಮ್ಮ ಶರಣರನು. ॥ ೧೯೨ ॥

೭೧೯

ಕಳ್ಳ, ಬಂದಿಕಾರ, ಹಾವಡಿಗ, ಹಾದರಿಗ,
ಬಂಟನೋಲೆಯಕಾರನೆಂದೆನಾದಡೆ,
ನೀ ಮುಂತಾಗಿ ಬಂದ ಭಕ್ತರ ನೀನೆಂದೆನ್ನದಿದ್ದಡೆ ಅದೇ ದ್ರೋಹ.
ನಡೆನುಡಿ ಹುಸಿಯುಂಟಾದಡೆ,
ಕೂಡಲಸಂಗನ ತೋರಿದ ಚೆನ್ನಬಸವಣ್ಣನಾಣೆ. ॥ ೧೯೩ ॥

೭೨೦

ಎಡದ ಕೈಯಲಿ ಕತ್ತಿ, ಬಲದ ಕೈಯಲಿ ಮಾಂಸ,
ಬಾಯಲಿ ಸುರೆಯ ಗಡಿಗೆ, ಕೊರಳಲಿ ದೇವರಿರಲು
ಅವರ ಲಿಂಗನೆಂಬೆ, ಸಂಗನೆಂಬೆ,
ಕೂಡಲಸಂಗಮದೇವಾ, ಅವರ ಮುಖಲಿಂಗಿಗಳೆಂಬೆನು. ॥ ೧೯೪ ॥

೭೨೧

ಗುಮ್ಮಡಿಯಂತಪ್ಪ ತಾಯಿ ನೋಡೆನಗೆ,
ಕಲಕೇತನಂತಪ್ಪ ತಂದೆ ನೋಡೆನಗೆ.
ಪೋಟನಂತಪ್ಪ ಗಂಡ ನೋಡೆನಗೆ,
ಮರಗಾಲಲಟ್ಟಟ್ಟಿ ಸದೆದ ನೋಡಯ್ಯಾ.
ಇಂದೆನ್ನ ಒಕ್ಕತನ ಹೋದಡೆ ಹೋಗಲಿ
ಮರಗಾಲ ಬಿಟ್ಟಡೆ, ಸಂಗಾ ನಿಮ್ಮಾಣೆ. ॥ ೧೯೫ ॥

೭೨೨

ತನುವ ಬಂದು ಅಲೆವರಯ್ಯಾ ಎನ್ನ,
ಮನವ ಬಂದು ನೋಡುವರಯ್ಯಾ ಎನ್ನ,
ಧನವ ಬಂದು ಸೂರೆಗೊಂಬರಯ್ಯಾ ಜಂಗಮುವನವರತ.
ಕೂಡಲಸಂಗಮದೇವಾ,
ನಿಮ್ಮ ಬಯ್ಕೆಯ ಭಂಡಾರಕ್ಕೆ ನಾನು ಶುದ್ಧನಯ್ಯಾ. ॥ ೧೯೬ ॥

೭೨೩

ಒಡೆಯರೊಡವೆಯ ಕೊಂಡಡೆ ಕಳ್ಳಂಗಳಲಾಯಿತ್ತೆಂಬ
ಗಾದೆ ಎನಗಿಲ್ಲಯ್ಯಾ.
ಇಂದೆನ್ನ ವಧುವ, ನಾಳೆನ್ನ ಧನವ,
ನಾಡಿದ್ದೆನ್ನ ತನುವ ಬೇಡರೇಕಯ್ಯಾ?
ಕೂಡಲಸಂಗಮದೇವಾ, ಆನು ಮಾಡಿದುದಲ್ಲದೆ
ಬಯಸಿದ ಬಯಕೆ ಸಲುವುದೆ ಅಯ್ಯಾ. ॥ ೧೯೭ ॥

೭೨೪

ಕಲಿ ಕರುಳ ತಕ್ಕೈರ್ಸಿ ಹರಿಯಬಲ್ಲನಲ್ಲದೆ
ಕಾಯ ಕಾದಿಸುವಡೆ, ಎಡೆಗೋಲನಿಕ್ಕುವಡೆ, ದಾತಾರನಾಧೀನವಲ್ಲದೆ.
ಕೂಡಲಸಂಗಮದೇವಾ ನೀ ಮಾಡಿದಂತಹುದಯ್ಯಾ,
ತನುಮನಧನದಲ್ಲಿ ವಂಚನೆಯ
ನೆನು ಬಯಸಿದಡೆಂತಹುದಯ್ಯಾ? ॥ ೧೯೮ ॥

೭೨೫

ಬಾಲಾಭ್ಯಾಸವ ಮಾಡಹೋದಡೆ ಎನ್ನ ಸುರಗಿ ಎನ್ನ ನಟ್ಟಿತು,
ಎಂತಯ್ಯಾ ಕಲಿಯೊಡನೆ ಶ್ರವವ ಮಾಡುವೆನು?
ರಾಯ ರಾಜಗುರು ಜಗದ ಬಿನ್ನಾಣಿಯ ತೊಡಕ ಬಿಡಿಸಬಾರದು.
ಸರಸದ ಮೇಲೆ ಹಿಡಿಯ ಹೋದಡೆ
ಚದುರಂಗದ ಮೇಲೆ ಮಸಿಯ ತೋರಿದ ಕೂಡಲಸಂಗಮದೇವ. ॥ ೧೯೯ ॥

೭೨೬

ಸಮಚಿತ್ತವೆಂಬ ನೇಮದ ಹಲಗೆಯ ಹಿಡಿದು,
ಶಿವಚಿತ್ತವೆಂಬ ಕೂರಲಗ ಕೊಂಡು,
ಶರಣಾರ್ಥಿಯೆಂಬ ಶ್ರವಗಲಿತಡೆ,
ಆಳುತನಕ್ಕೆ ದೆಸೆಯಪ್ಪೆ ನೋಡಾ.
ಮಾರಂಕ ಜಂಗಮ ಮನೆಗೆ ಬಂದಲ್ಲಿ ಇದಿರೆತ್ತಿ ನಡೆವುದು,
ಕೂಡಲಸಂಗಮದೇವನನೊಲಿಸುವಡಿದು ಚಿಹ್ನ! ॥ ೨೦೦ ॥

೭೨೭

ಅಟ್ಟಟ್ಟಿಕೆಯ ಮಾತನಾಡಲದೇಕೋ?
ಮುಟ್ಟಿ ಬಂದುದಕ್ಕಂಜಲದೇಕೋ?
ಕಾದಿದಲ್ಲದೆ ಮಾಣೆನು, ಓಡಿದಡೆ ಭಂಗ ಹಿಂಗದಾಗಿ,
ಕೂಡಲಸಂಗಮದೇವಾ, ಎನ್ನ ಭಂಗ ನಿಮ್ಮದಾಗಿ. ॥ ೨೦೧ ॥

೭೨೮

ಲಿಂಗಕ್ಕಲ್ಲದೆ ಮಾಡೆನೀ ಮನವನು,
ಜಂಗಮಕ್ಕಲ್ಲದೆ ಮಾಡೆನೀ ಧನವನು,
ಪ್ರಸಾದಕ್ಕಲ್ಲದೆ ಮಾಡೆನೀ ತನುವನು,
ಲಿಂಗಜಂಗಮಪ್ರಸಾದಕ್ಕಲ್ಲದೆ ಬಾಯ್ದೆರೆಯೆನೆಂಬುದೆನ್ನ ಭಾಷೆ.
ಅನರ್ಪಿತವಾದಡೆ ತಪ್ಪೆನ್ನದು,
ಮೂಗ ಕೊಯಿ, ಕೂಡಲಸಂಗಮದೇವಾ. ॥ ೨೦೨ ॥

## ಮಾಹೇಶ್ವರನ ಪ್ರಸಾದಿಸ್ಥಲ

೭೨೯

ಅಂಕ ಕಂಡಾ, ಕೋಲಾಸೆ ಮತ್ತೇಕಯ್ಯಾ?
ಲೆಂಕ ಕಂಡಾ, ಪ್ರಾಣದಾಸೆ ಮತ್ತೇಕಯ್ಯಾ?
ಭಕ್ತ ಕಂಡಾ, ತನುಮನಧನದಾಸೆ ಮತ್ತೇಕಯ್ಯಾ?
ನಿಮ್ಮ ಅಂಕೆಗೆ ಝಂಕೆಗೆ ಶಂಕಿತನಾದಡೆ
ಎನ್ನ ಲೆಂಕತನಕ್ಕೆ ಹಾನಿ, ಕೂಡಲಸಂಗಮದೇವಾ. ॥ ೨೦೩ ॥

೭೩೦

ನೀವಿರಿಸಿದ ಮನದಲ್ಲಿ ನಾನಂಜೆನಯ್ಯಾ,
ಮನವು ಮಹಾಘನಕ್ಕೆ ಶರಣಾಗತಿವೊಕ್ಕುದಾಗಿ.
ನೀವಿರಿಸಿದ ಧನದಲ್ಲಿ ನಾನಂಜೆನಯ್ಯಾ,
ಧನವು ಸತಿಸುತಮಾತಾಪಿತರಿಗೆ ಸವೆಯದಾಗಿ.
ನೀವಿರಿಸಿದ ತನುವಿನಲ್ಲಿ ನಾನಂಜೆನಯ್ಯಾ,
ತನುವು ಸರ್ವಾರ್ಪಿತದಲ್ಲಿ ನಿಯತಪ್ರಸಾದಭೋಗಿಯಾಗಿ.
ಇದು ಕಾರಣ, ವೀರಧೀರಸಮಗ್ರನಾಗಿ
ನಿಮಗಾನಂಜೆ, ಕೂಡಲಸಂಗಮದೇವಾ. ॥ ೨೦೪

೭೩೧

ಹಲ್ಲು ಹತ್ತಿ ನಾಲಗೆ ಹೊರಳದಿದ್ದಲ್ಲಿ
ಮನವೆರಡಾದಡೆ ಆಣೆ, ನಿಮ್ಮಾಣೆ.
ಮಾಡುವ ನೇಮಕ್ಕೆ ಛಲವಿಲ್ಲದಿದ್ದಡೆ ಆಣೆ, ನಿಮ್ಮಾಣೆ.
ಕೂಡಲಸಂಗಮದೇವ ಎನ್ನ ಘನವ ನೋಡಲೆಂದಟ್ಟಿದಡೆ
ಪ್ರಸಾದವಲ್ಲದೆ ಕೊಂಡೆನಾದಡೆ ಆಣೆ, ನಿಮ್ಮಾಣೆ! ॥ ೨೦೫ ॥

೭೩೨

ಹೊಕ್ಕಲ್ಲಿ ಹೊಕ್ಕು ನಿಮ್ಮೊಕ್ಕುದನುಂಬವನ ಕುಲವೇನೋ!
ದೇವಾ ನೀನೊಲಿದವನ, ಸ್ವಾಮಿ ನೀ ಹಿಡಿದವನ ಕುಲವೇನೋ!
ಕುಲಕ್ಕೆ ತಿಲಕ ನಮ್ಮ ಮಾದಾರ ಚೆನ್ನಯ್ಯ,
ನಿಮ್ಮಿಂದಧಿಕ ಕೂಡಲಸಂಗಮದೇವಾ. ॥ ೨೦೬ ॥

೭೩೩

ಹುಟ್ಟಿದ ಮಕ್ಕಳೆಲ್ಲ ಅರ್ಥ ಪ್ರಾಣ ಅಭಿಮಾನಕ್ಕೆ
ಒಡೆಯರಾದ ಪರಿಯ ನೋಡಾ.
ಅಟ್ಟ ಅಡಿಗೆಯ ವಿಷವನು ನಿಮಗೆ ಕೊಟ್ಟಲ್ಲದೆ ಉಣ್ಣೆನೆಂಬ ಭಾಷೆ!
ಕೂಡಲಸಂಗಮದೇವಯ್ಯಾ, ನಿಮಗೆಂದಟ್ಟಡಿಗೆಯ
ನೀಡ ಕಲಿಸಿದಾತ ಕೆಂಭಾವಿಯ ಭೋಗಯ್ಯ. ॥ ೨೦೭ ॥

೭೩೪

ಅಂಗದ ಮೇಲಣ ಲಿಂಗ ಹಿಂಗಿ ಬಂದ ಸುಖವನಾರಿಗರ್ಪಿಸುವೆ?
ಹಿಂಗಲಾಗದು, ಭಕ್ತಿಪಥಕ್ಕೆ ಸಲ್ಲದಾಗಿ,
ಹಿಂಗಲಾಗದು, ಶರಣಪಥಕ್ಕೆ ಸಲ್ಲದಾಗಿ.
ಕೂಡಲಸಂಗಮದೇವರ ಹಿಂಗಿ ನುಂಗಿದುಗುಳು ಕಿಲ್ಬಿಷ. ॥ ೨೦೮ ॥

೭೩೫

ಛತ್ತೀಸಾಯುಧದಲಿ ಅಭ್ಯಾಸವ ಮಾಡಿದಡೇನು?
ಹಗೆಯ ಕೊಲುವಡೆ, ಒಂದಲಗು ಸಾಲದೆ?
ಲಿಂಗವ ಗೆಲುವಡೆ, 'ಶರಣಸತಿ ಲಿಂಗಪತಿ'ಯೆಂಬಲಗು ಸಾಲದೆ?
ಎನಗೆ ನಿನಗೆ ಜಂಗಮಪ್ರಸಾದವೆಂಬ ಅಲಗು ಸಾಲದೆ?
ಕೂಡಲಸಂಗಮದೇವಾ. ॥ ೨೦೯ ॥

## ಮಾಹೇಶ್ವರನ ಪ್ರಾಣಲಿಂಗಿಸ್ಥಲ

೭೩೬

ಕೊಲ್ಲೆನಯ್ಯಾ ಪ್ರಾಣಿಗಳ, ಮೆಲ್ಲೆನಯ್ಯಾ ಬಾಯಿಚ್ಚೆಗೆ,
ಒಲ್ಲೆನಯ್ಯಾ ಪರಸತಿಯರ ಸಂಗವ,
ಬಲ್ಲೆನಯ್ಯಾ ಮುಂದೆ ತೊಡಕುಂಟೆಂಬುದ.
ಬಳ್ಳದ ಬಾಯಂತೆ ಒಂದೆ ಮನ ಮಾಡಿ
ನಿಲ್ಲೆಂದು ನಿಲಿಸಯ್ಯಾ, ಕೂಡಲಸಂಗಮದೇವಾ. ॥ ೨೧೦ ॥

೭೩೭

ಆನೆ ಅಂಕುಶಕ್ಕೆ ಅಂಜೂದೆ ಅಯ್ಯಾ?
ಮಾಣದೆ ಸಿಂಹದ ನಖವೆಂದು ಅಂಜೂದಲ್ಲದೆ.
ಆನೀ ಬಿಜ್ಜಳಂಗಂಜುವೆನೆ ಅಯ್ಯಾ?
ಕೂಡಲಸಂಗಮದೇವಾ,
ನೀನು ಸರ್ವಜೀವದಯಾಪಾರಿಯಾದ ಕಾರಣ
ನಿನಗಂಜುವೆನಲ್ಲದೆ. ॥ ೨೧೧ ॥

೭೩೮

ಬಂದೆಹೆನೆಂದು ಬಾರದೆ ಇದ್ದಡೆ, ಬಟ್ಟೆಗಳ ನೋಡುತ್ತಿದ್ದೇನಯ್ಯಾ.
ಇನ್ನಾರನಟ್ಟುವೆ, ಇನ್ನಾರನಟ್ಟುವೆ, ಇನ್ನಾರ ಪಾದವ ಹಿಡಿವೆನಯ್ಯಾ?
ಕೂಡಲಸಂಗನ ಶರಣರು ಬಾರದಿದ್ದಡೆ
ಅಟ್ಟುವೆನೆನ್ನ ಪ್ರಾಣವನು. ॥ ೨೧೨ ॥

## ಮಾಹೇಶ್ವರನ ಶರಣಸ್ಥಲ

೭೩೯

ಅರಸರು ಮಂಚಕ್ಕೆ ಬರಿಸಿ, ಎನ್ನ ಬೆರಸಿದ ಬಳಿಕ
ಆನು ಅಂಜುವಳೆ? ಆನು ಸಿರಿಯಕ್ಕನೇ.
ಪರುಷ ಮುಟ್ಟಿದ ಬಳಿಕ ಲೋಹವೇ?
ಕೂಡಲಸಂಗಮದೇವ, ಎನ್ನನೊಲ್ಲದಡಾನು ಬದುಕುವೆನೆ? ॥ ೨೧೩ ॥

೭೪೦

ಎಲ್ಲಿ ಹೊಕ್ಕಲ್ಲಿ ನಿನ್ನ ವಿಕಾರವ ಬಿಡೆ, ಮಾಣೆ, ಗರುವತನವೆ?
ದಾಸನವಸ್ತ್ರವ ಸೀಳುವುದೊಂದು ಗರುವತನವೆ?
ಸಿರಿಯಾಳನ ಮಗನ ಬೇಡೂದೊಂದು ಗರುವತನವೆ?
ಬಲ್ಲಾಳನ ವಧುವ ಬೇಡೂದೊಂದು ಗರುವತನವೆ?
ಕೋಡಗವ ಹುಲ್ಲಲಿ ಮುಸುಕಿದಂತೆ
ಕೂಡಲಸಂಗಮದೇವಾ, ನಿನ್ನ ಪರಿ. ॥ ೨೧೪ ॥

೭೪೧

ಸಿರಿಯಾಳನ ಮಗನ ಬಾಣಸವ ಮಾಡಿಸಿ ಉಣಲೊಲ್ಲದೆ, ಕಾಡಿದೆ.
ಚೋಳನ ಮನೆಯಲು ಉಣಲೊಲ್ಲದೆ, ಚೆನ್ನನ ಮನೆಯಲುಂಡೆ.
ಒಬ್ಬರಿಗೊಂದು ಪರಿಯ ಮಾಡಿದೆ, ಕೂಡಲಸಂಗಮದೇವಾ. ॥ ೨೧೫ ॥

೭೪೨

ಒಬ್ಬನ ಮನೆಯಲುಂಡು ಹೊತ್ತುಗಳೆದೆ,
ಒಬ್ಬನ ಮನೆಯಲುಡಲೊಂದ ಗಳಿಸಿದೆ,
ಗರ್ವ ಬೇಡ ಬೇಡ ನಿನಗೆ.
ಚೆನ್ನಯ್ಯನ ಮನೆಯಲಂಬಲಿಯನುಂಡು ಬದುಕಿದೆ.
ಗರ್ವ ಬೇಡ ಬೇಡ.
ಕೂಡಲಸಂಗಯ್ಯಾ, ಸಿರಿಯಾಳನಿಂದ ಮಾನಿಸಲೋಕಗಂಡೆ. ॥ ೨೧೬ ॥

೭೪೩

ಹರಿಯಜ ಮುನಿಗಳೆಲ್ಲರು, ನಿಚ್ಚ ನಿಮ್ಮ ಬಾಗಿಲ ಕಾಯ್ದಿಹರು,
ಏನು ಕಾರಣ ನೀವು ಬಾಣನ ಬಾಗಿಲ ಕಾಯ್ದಿರಿ?
ಡಿಂಗರಿಗನ ಮನೆಗೆ ಅಂಗಜಾಪವಕ್ಕೆ ಹೋಗಿ ಇದ್ದವರೊಳರೆ
ಕೂಡಲಸಂಗಮದೇವಾ? ॥ ೨೧೭ ॥

೭೪೪

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ,
ಪಾತಾಳದಿಂದವೆ ಅತ್ತತ್ತ ನಿಮ್ಮ ಶ್ರೀಚರಣ,
ಬ್ರಹ್ಮಾಂಡದಿಂದವೆ ಅತ್ತತ್ತ ನಿಮ್ಮ ಶ್ರೀಮಕುಟ.
ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ, ಕೂಡಲಸಂಗಮದೇವಯ್ಯಾ,
ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ. ॥ ೨೧೮ ॥

೭೪೫

ಗೋತ್ರನಾಮವ ಬೆಸಗೊಂಡಡೆ
ಮಾತುಸೂತಕದ ಸುಮ್ಮನಿದ್ದಿರಿದೇನಯ್ಯಾ?
ತಲೆಯ ಕುತ್ತಿ ನೆಲನ ಬರೆವುತ್ತಿದ್ದಿರಿದೇನಯ್ಯಾ?
ಗೋತ್ರನಾಮ, ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯನೆಂಬುವೇನು,
ಕೂಡಲಸಂಗಯ್ಯಾ. ॥ ೨೧೯ ॥

೭೪೬

ನಿಷ್ಠೆಯಿಂದ ಲಿಂಗವ ಪೂಜಿಸಿ
ಮತ್ತೊಂದು ಪಥವನರಿಯದ ಶರಣರು
ಸರ್ಪನ ಹೆಡೆಯ ಮಾಣಿಕದಂತೆ ಇಪ್ಪರು, ಭೂಷಣರಾಗಿ!
ದರ್ಪಣದೊಳಗಣ ಪ್ರತಿಬಿಂಬದಂತೆ ಹಿಂಗದಿಪ್ಪರು
ಕೂಡಲಸಂಗಮದೇವಾ, ನಿಮ್ಮ ಶರಣರು. ॥ ೨೨೦ ॥

೭೪೭

ಶಿವಲೋಕಕ್ಕೆ ಸರಿ ಬೇರೆ ಲೋಕವಿಲ್ಲ,
ಶಿವಮಂತ್ರಕ್ಕೆ ಸರಿ ಬೇರೆ ಮಂತ್ರವಿಲ್ಲ.
ಜಗಕ್ಕೆ ಇಕ್ಕಿದೆ ಮುಂಡಿಗೆಯನೆತ್ತಿಕೊಳ್ಳಿ:
ಕೂಡಲಸಂಗಯ್ಯನೊಬ್ಬನೆ ದೈವವೆಂದು. ॥ ೨೨೧ ॥

೭೪೮

'ಈಶ್ವರಸದ್ಭಾವೇ ಕಿಂ ಪ್ರಮಾಣಂ'
ಎಂಬ ಮೀಮಾಂಸಕನ ಮೂಗಿನ ಕೊನೆಯನು
ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ।
ವಿಶ್ವತೋ ಬಾಹುರುತ ವಿಶ್ವತಃ ಪಾತ್॥
ಸಂ ಬಾಹುಭ್ಯಾಂ ಧಮತಿ ಸಂ ಪತತ್ರೈಃ।
ದ್ಯಾವಾಭೂಮೀ ಜನಯನ್ ದೇವ ಏಕಃ॥
ಎಂಬ ಸುರಗಿಯಲ್ಲಿ ಅರಿದು, ವೈಶೇಷಿಕವೆಂಬ ಇಟ್ಟಿಗೆಯಲೊರಸಿ,
ಕೂಡಲಸಂಗಯ್ಯನೆಂಬ ಕನ್ನಡಿಯ ತೋರುವೆನು. ॥ ೨೨೨ ॥

೭೪೯

ಪಂಚಬ್ರಹ್ಮವ ಕೆಡಿಸಿತ್ತು, ಪ್ರಣವಮಂತ್ರವನೀಡಾಡಿತ್ತಲ್ಲಾ.
ಕರ್ಮಂಗಳನೆ ಕಳೆಯಿತ್ತು, ಕ್ರೀಗಳನೆ ಮೀರಿತ್ತಲ್ಲಾ.
ಆಗಮದ ಹಲ್ಲನೆ ಕಳೆಯಿತ್ತು
ಕೂಡಲಸಂಗಯ್ಯನ ಭಕ್ತಿಗಜ ಹೋ! ॥ ೨೨೩ ॥

೭೫೦

ವೇದ ನಡನಡುಗಿತ್ತು, ಶಾಸ್ತ್ರವಗಲಿ ಕೆಲಕ್ಕೆ ಸಾರಿದ್ದಿತಯ್ಯಾ!
ತರ್ಕ ತರ್ಕಿಸಲರಿಯದೆ ಮೂಗುವಟ್ಟಿದ್ದಿತಯ್ಯಾ!

ಆಗಮ ಹೆರತೊಲಗಿ ಅಗಲಿದ್ದಿತಯ್ಯಾ!
ನಮ್ಮ ಕೂಡಲಸಂಗಯ್ಯನು
ಮಾದಾರ ಚೆನ್ನಯ್ಯನ ಮನೆಯಲುಂಡ ಕಾರಣ. ॥ ೨೨೮ ॥

೭೫೧

ಚಿಕ್ಕ ಒಂದು ಹೊತ್ತಗೆ, ಬೆನಕನ ಕರಡಗೆಯಯ್ಯಾ,
ನೀ ಡುಂಡುಟಿ ಗೊರವನಯ್ಯಾ.
ಪುಣ್ಯವೇನಾದಡಾಗಲಿ ಡಕ್ಕೆಯ ಮೇಲೆ ಅಕ್ಕಿಯ ತಳಿದೆನು.
ನಮ್ಮ ಕೂಡಲಸಂಗಮದೇವನಲ್ಲದೆ
ಅನ್ಯದೈವ ಉಂಟೆನ್ನದಿರು ಕಂಡಾ! ॥ ೨೨೫ ॥

೭೫೨

ನೀನಲ್ಲದನ್ಯದೈವವುಂಟೆಂಬವನ ಬಾಯ,
ಕೆನ್ನೆವಾರೆ ಸೀಳಿದಲ್ಲದೆ ಎನ್ನ ಮುನಿಸು ಹೋಗದಯ್ಯಾ.
ಎನ್ನ ಕೋಪವಡಗದಯ್ಯಾ.
ಎನ್ನ ಬಿನ್ನಪವನವಧರಿಸು ಕೂಡಲಸಂಗಮದೇವಾ. ॥ ೨೨೬ ॥

೭೫೩

ಆರು ಮುನಿದು ನಮ್ಮನೇನ ಮಾಡುವರು?
ಊರು ಮುನಿದು ನಮ್ಮನೆಂತು ಮಾಡುವರು?
ನಮ್ಮ ಕುನ್ನಿಗೆ ಕೂಸ ಕೊಡಬೇಡ.
ನಮ್ಮ ಸೊಣಗಂಗೆ ತಳಿಗೆಯಲಿಕ್ಕಬೇಡ.
ಆನೆಯ ಮೇಲೆ ಹೋಹವನ ಶ್ವಾನ ಕಚ್ಚಬಲ್ಲುದೆ,
ನಮಗೆ ನಮ್ಮ ಕೂಡಲಸಂಗನುಳ್ಳನ್ನಕ್ಕ? ॥ ೨೨೭ ॥

೭೫೪

ನ್ಯಾಯನಿಷ್ಠುರಿ: ದಾಕ್ಷಿಣ್ಯಪರ ನಾನಲ್ಲ,
ಲೋಕವಿರೋಧಿ: ಶರಣನಾರಿಗಂಜುವನಲ್ಲ,
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ. ॥ ೨೨೮ ॥

೭೫೫

ಊರ ಮುಂದೆ ಹಾಲ ಹಳ್ಳ ಹರಿವುತ್ತಿರಲು,
ಒರೆಯಾವಿನ ಬೆನ್ನ ಹರಿಯಲದೇಕಯ್ಯಾ?
ಲಜ್ಜೆಗೆಡಲೇಕೆ? ನಾಣುಗೆಡಲೇಕೆ?
ಕೂಡಲಸಂಗಮದೇವನುಳ್ಳನ್ನಕ್ಕ
ಬಿಜ್ಜಳನ ಭಂಡಾರವೆನಗೇಕಯ್ಯಾ. || ೨೨೯ ||

೭೫೬

ಹೋಗಬಿಟ್ಟು, ಮರಳಿ ಹಿಂದೆ ನೋಡಿ,
ಮತ್ತಾಗಬೇಕೆಂಬ ಸಂದೇಹವುಳ್ಳನ್ನಕ್ಕ
ಅದೆ ಪರದ್ವಾರ ನಾಯಕನರಕ, ತಪ್ಪದು.
ಅನ್ಯವಧುವೆಂಬುದು ನಿಮ್ಮ ರಾಣಿವಾಸ,
ಇದೇ ದಿಬ್ಯ ಕೂಡಲಸಂಗಮದೇವಾ. || ೨೩೦ ||

೭೫೭

ಕಂಡುದಕ್ಕೆಳಸೆನೆನ್ನ ಮನದಲ್ಲಿ, ನೋಡಿ ಸೋಲೆನೆನ್ನ ಕಂಗಳಲ್ಲಿ,
ಆಡಿ ಹುಸಿಯೆನೆನ್ನ ಜಿಹ್ವೆಯಲ್ಲಿ.
ಕೂಡಲಸಂಗಮದೇವಾ,
ನಿಮ್ಮ ಶರಣನ ಪರಿ ಇಂತುಟಯ್ಯಾ. || ೨೩೧ ||

೭೫೮

ಆಪ್ಯಾಯನಕ್ಕೆ ನೀಡುವೆ, ಲಾಂಛನಕ್ಕೆ ಶರಣೆಂಬೆ.
ಲಾಂಛನಕ್ಕೆ ತಕ್ಕ ಆಚರಣೆ ಇಲ್ಲದಿದ್ದಡೆ
ಕೂಡಲಸಂಗಮದೇವಾ,
ನೀ ಸಾಕ್ಷಿಯಾಗಿ ಛೀ ಎಂಬೆನು. || ೨೩೨ ||

೭೫೯

ಮಾಡುವ ನೀಡುವ ಭಕ್ತನ ಕಂಡಡೆ
ನಿಧಿ ನಿಧಾನವ ಕಂಡಂತಾಯಿತ್ತು,
ಪಾದೋದಕ ಪ್ರಸಾದಜೀವಿಯ ಕಂಡಡೆ
ಹೋದ ಪ್ರಾಣ ಬಂದಂತಾಯಿತ್ತು.
ಅನ್ಯರ ಮನೆಗೆ ಹೋಗಿ, ತನ್ನ ಉದರವ ಹೊರೆಯುವ

ಅಚ್ಚ ಶರಣರ ಕಂಡಡೆ
ನಿಶ್ಚಯವಾಗಿ ಕೂಡಲಸಂಗಯ್ಯನೆಂಬೆನು. ॥ ೨೩೩ ॥

೭೬೦

ಗುರುಭಕ್ತಿಯ ಮಾಡಬಹುದಲ್ಲದೆ, ಲಿಂಗಭಕ್ತಿಯ ಮಾಡಬಾರದು.
ಲಿಂಗಭಕ್ತಿಯ ಮಾಡಬಹುದಲ್ಲದೆ, ಜಂಗಮಭಕ್ತಿಯ ಮಾಡಬಾರದು.
ಜಂಗಮಭಕ್ತಿಯ ಮಾಡಬಹುದಲ್ಲದೆ, ಸಮಯಭಕ್ತಿಯ ಮಾಡಬಾರದು.
ಸಮಯಭಕ್ತಿಯ ಮಾಡಬಹುದಲ್ಲದೆ, ಸಮಯ ಸಂತೋಷವ ಮಾಡಬಾರದು.
ಇವೆಲ್ಲವನು ಮಾಡಬಹುದಲ್ಲದೆ, ತನ್ನ ತಾನರಿಯಬಾರದು!
ತನ್ನ ತಾನರಿದೆಹೆನೆಂಬ ಅಹಂಕಾರವುಳ್ಳಡೆ ನಿಮ್ಮವರಿಗೆ ದೂರ.
ಎಲೆ ದೇವಾ, ಅನ್ಯಕ್ಕೆ ಆಸೆ ಮಾಡಿದನಾದಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ ಕೂಡಲಸಂಗಮದೇವಾ. ॥ ೨೩೪ ॥

೭೬೧

ದಾಸನಂತೆ ತವನಿಧಿಯ ಬೇಡುವನಲ್ಲ,
ಚೋಳನಂತೆ ಹೊನ್ನ ಮಳೆಯ ಕರೆಸೆಂಬವನಲ್ಲ,
ಅಂಜದಿರು ಅಂಜದಿರು ಅವರಂದದವ ನಾನಲ್ಲ.
ಎನ್ನ ತಂದೆ, ಕೂಡಲಸಂಗಮದೇವಾ,
ಸದ್ಭಕ್ತಿಯನೆ ಕರುಣಿಸೆನಗೆ. ॥ ೨೩೫ ॥

೭೬೨

ಲಿಂಗದಲ್ಲಿ ಸಮ್ಯಕ್ಕರು, ಲಿಂಗದಲ್ಲಿ ಸದರ್ಥರು,
ಲಿಂಗದ ಸೊಮ್ಮು ಸಂಬಂಧವರಿತ ಸ್ವಾಮಿಭೃತ್ಯರೆಲ್ಲರು
ನಿಮ್ಮ ಬೇಡೆನಂಜದಿರಿ.
ಎನಗೆ ಮರ್ತ್ಯಲೋಕದ ಮಹಾಗಣಂಗಳುಂಟು.
ಇದು ಕಾರಣ, ಕೂಡಲಸಂಗಮದೇವರ ಲೋಕವ
ಹಂಚಿಕೊಳ್ಳಿ ನಿಮನಿಮಗೆ. ॥ ೨೩೬ ॥

# ಮಾಹೇಶ್ವರನ ಐಕ್ಯಸ್ಥಲ

೭೬೩

ಅಂದಂದಿನ ಹೊದ್ದಿಗೆಯ ಬಿಂದುಮಾತ್ರದಲಾದ
ಅಂದವ ಕೆಡಿಸಲರಿಯದ ಅಂಧಕರ ನೋಡಾ.
ಸಮರಸವಿಲ್ಲದೆ ನೆರಹಿ ಮಾಡಿ, ಭಕ್ತರಾದೆವೆಂಬವರನೇನೆಂಬೆ?
ಆಚಾರವಂಚಕರ ಎನಗೆ ತೋರದಿರು
ಕೂಡಲಸಂಗಮದೇವಾ, ನಿಮ್ಮ ಧರ್ಮ! ॥ ೨೩೭ ॥

೭೬೪

ಕಲಿಯ ಕೈಯ ಕೈದುವಿನಂತಿರಬೇಕಯ್ಯಾ,
ಎಲುದೋರೆ ಸರಸವಾಡಿದಡೆ ಸೈರಿಸಬೇಕಯ್ಯಾ,
ರಣದಲ್ಲಿ ತಲೆ ಹರಿದು ನೆಲಕ್ಕೆ ಬಿದ್ದು
ಬೊಬ್ಬಿಡಲದಕ್ಕೆ ಒಲಿವ ಕೂಡಲಸಂಗಮದೇವ. ॥ ೨೩೮ ॥

೭೬೫

ಆಸೆ ರೋಷ ಹರುಷಾದಿಗಳೆಂಬ ಕರಣೇಂದ್ರಿಯಂಗಳೆಂಬವ ಮುಟ್ಟಲೀಯದೆ,
ಆಚಾರವ ಶಿವಾಚಾರವ ಮಾಡುವೆ,
ಭಯಭಕ್ತಿಯಿಂದ ತೋರುವೆ.
ಮನದಲ್ಲಿ ವಂಚನೆಯಿಲ್ಲದೆ, ಭಾವಶುದ್ಧ ಪೂಜೆಯ ಮಾಡುವೆ.
ಎನ್ನ ಪ್ರಾಣಶಕ್ತಿಯಿಂದ ಕೂಡುವೆ
ಕೂಡಲಸಂಗಮದೇವಾ. ॥ ೨೩೯ ॥

೭೬೬

ಪೂರ್ವಬೀಜ ವಾಯುಪ್ರಾಣಿಯಲ್ಲ,
ಲಿಂಗಪ್ರಾಣಿಯಾ ಶರಣನು.
ಏಕೋಗ್ರಾಹಿ ಭಾವಭೇದವಿಲ್ಲವಾಗಿ
ಮನಃಪ್ರವೇಶಿಯಾ ಶರಣನು.
ನಿಮ್ಮುವ ಪೂಜಿಸಿ ತನುಧರ್ಮವ ಮರೆದು
ನಿಮ್ಮ ಪ್ರತಿಬಿಂಬದಂತಿಪ್ಪ
ಕೂಡಲಸಂಗಮದೇವಾ, ನಿಮ್ಮ ಶರಣನು. ॥ ೨೪೦ ॥

## ಪ್ರಸಾದಿಯ ಜ್ಞಾನಿಸ್ಥಲ

೭೬೭

ಹಸಿವೆಯಿತ್ತೆಂದು ಅರ್ಪಿತವ ಮಾಡುವರಯ್ಯಾ,
ತೃಷೆಯಾಯಿತ್ತೆಂದು ಮಜ್ಜನಕ್ಕೆರೆವರಯ್ಯಾ,
ಹಸಿವು ತೃಷೆ ವಿಷಯಕ್ಕೆ ಬಳಲುವರಯ್ಯಾ.
ಹಸಿವಾಯಿತ್ತೆಂದು ಅರ್ಪಿತವ ಮಾಡಲಿಲ್ಲ,
ತೃಷೆಯಾಯಿತ್ತೆಂದು ಮಜ್ಜನಕ್ಕೆರೆಯಲಿಲ್ಲ,
ಇದು ಕಾರಣ ಕೂಡಲಸಂಗಮದೇವರ ಪೂಜಿಸಿ,
ಪ್ರಸಾದವ ಹಡೆವರೊಬ್ಬರೂ ಇಲ್ಲ. ‖ ೧ ‖

೭೬೮

ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಪ್ಪುದೆ?
ಗುರುಕಾರುಣ್ಯವ ಹಡೆದ ಭಕ್ತನು ಹಿಂದಣ ಪೂರ್ವಾಶ್ರಯವ ಬೆರಸಿದಡೆ,
ಗುರುದ್ರೋಹ ಲಿಂಗದ್ರೋಹ ಜಂಗಮದ್ರೋಹ
ಆಚಾರದ್ರೋಹ ಪ್ರಸಾದದ್ರೋಹ.
ಇಂತೀ ಪಂಚಮಹಾಪಾತಕಂಗಳು
ಭಕ್ತಂಗಲ್ಲದೆ ಭವಿಗೆಲ್ಲಿಯದೊ?
ಗುರುವಿದು, ಲಿಂಗವಿದು, ಜಂಗಮವಿದು
ಆಚಾರವಿದು, ಪ್ರಸಾದವಿದೆಂದರಿಯದಿದ್ದಡೆ
ಕುಂಭಿಪಾತಕ ನಾಯಕನರಕ
ಕೂಡಲಸಂಗಮದೇವಾ. ‖ ೨ ‖

೭೬೯

ಸೂಳೆಗೆ ಮಚ್ಚಿ ಸೂಳೆಯ ಬಂಟರೆಂಜಲ ತಿಂಬುದೀ ಲೋಕ.
ಅಡಗ ಮಚ್ಚಿ ಸೊಣಗನೆಂಜಲ ತಿಂಬುದೀ ಲೋಕ.
ಲಿಂಗವ ಮಚ್ಚಿ ಜಂಗಮಪ್ರಸಾದವ ಕೊಂಬವರ ನೋಡಿ ನಗುವರ
ಕುಂಭಿಪಾತಕ ನಾಯಕನರಕದಲ್ಲಿಕ್ಕುವ
ಕೂಡಲಸಂಗಮದೇವ. ‖ ೩ ‖

೭೭೦

ಹೊಲೆಯುಂಟೆ ಲಿಂಗವಿದ್ದೆಡೆಯಲ್ಲಿ?
ಕುಲವುಂಟೆ ಜಂಗಮವಿದ್ದೆಡೆಯಲ್ಲಿ?
ಎಂಜಲುಂಟೆ ಪ್ರಸಾದವಿದ್ದೆಡೆಯಲ್ಲಿ?
ಅಪವಿತ್ರದ ನುಡಿಯು ನುಡಿವ ಸೂತಕವೆ ಪಾತಕ.
ನಿಷ್ಕಳಂಕ ನಿಜೈಕ್ಯ ತ್ರಿವಿಧನಿರ್ಣಯ,
ಕೂಡಲಸಂಗಮದೇವಾ, ನಿಮ್ಮ ಶರಣರಿಗಲ್ಲದಿಲ್ಲ. || ೪ ||

೭೭೧

ಬಾರದು ಬಾರದು, ಭಕ್ತಂಗೆ ಪರಧನ ಪರಸತಿ,
ಬಾರದು ಬಾರದು, ವಿಷಯಿಗೆ ಪಶುಪತಿಬ್ರತವು,
ಬಾರದು ಬಾರದು, ಭವಭಾರಿಗೆ
ಕೂಡಲಸಂಗಮದೇವನ ಒಕ್ಕುದ ಕೊಳಬಾರದು. || ೫ ||

೭೭೨

ಹುತ್ತದ ಮೇಲಣ ರಜ್ಜು ಮುಟ್ಟಿದಡೆ ಸಾವರು ಶಂಕಿತರಾದವರು,
ದರ್ಪದಷ್ಟವಾದಡೆಯೂ ಸಾಯರು ನಿಶ್ಶಂಕಿತರಾದವರು.
ಕೂಡಲಸಂಗಮದೇವಯ್ಯಾ,
ಶಂಕಿತಂಗೆ ಪ್ರಸಾದ ಸಿಂಗಿ, ಕಾಳಕೂಟವಿಷವು. || ೬ ||

೭೭೩

ನಂಬಿದಡೆ ಪ್ರಸಾದ: ನಂಬದಿದ್ದಡೆ ವಿಷವು.
ತುಡುಕಬಾರದು ನೋಡಾ, ಲಿಂಗನ ಪ್ರಸಾದ,
ಕೂಡಲಸಂಗನ ಪ್ರಸಾದ ಸಿಂಗಿ, ಕಾಳಕೂಟ ವಿಷವು. || ೭ ||

೭೭೪

ಪಂಡಿತನಾಗಲಿ, ಮೂರ್ಖನಾಗಲಿ ಸಂಚಿತಕರ್ಮ ಉಂಡಲ್ಲದೆ ಮಾಣದು,
ಪ್ರಾರಬ್ಧಕರ್ಮ ಭೋಗಿಸಿದಲ್ಲದೆ ಹೋಗದೆಂದು
ಶ್ರುತಿ ಸಾರುತ್ತೈದಾವೆ ನೋಡಾ.
ತಾನಾವಾವ ಲೋಕದೊಳಗಿದ್ದಡೆಯೂ ಬಿಡದು,
ಕರ್ಮಫಲಗೂಡಿ ಕೂಡಲಸಂಗಮದೇವಂಗೆ
ಆತ್ಮನೈವೇದ್ಯವ ಮಾಡಿದವನೆ ಧನ್ಯ. || ೮ ||

೭೭೫

ಒಲ್ಲೆನೆಂಬುದು ವೈರಾಗ್ಯ, ಒಲಿವೆನೆಂಬುದು ಕಾಯಗುಣ.
ಆವ ಪದಾರ್ಥವಾದಡೇನು? ತನ್ನಿದ್ದೆಡೆಗೆ ಬಂದುದ
ಲಿಂಗಾರ್ಪಿತವ ಮಾಡಿ ಭೋಗಿಸುವುದೆ ಆಚಾರ.
ಕೂಡಲಸಂಗಮದೇವರನೊಲಿಸ ಬಂದ
ಪ್ರಸಾದಕಾಯವ ಕೆಡಿಸಲಾಗದು. ॥ ೯ ॥

೭೭೬

ಒಪ್ಪವ ನುಡಿವರಿಯ್ಯಾ ತುಪ್ಪವ ತೊಡೆದಂತೆ,
ಶರಣ ತನ್ನ ಮರೆವನೆ ಬಿನ್ನಾಣಿಯಂತೆ?
ಕೂಡಲಸಂಗನ ಪ್ರಸಾದದಿಂದ ಬದುಕುವನಲ್ಲದೆ
ತನ್ನ ಮರೆವನೆ? ॥ ೧೦ ॥

೭೭೭

ಅರ್ಪಿತ ಅರ್ಪಿತವೆಂದೆನುತ್ತಿಹಿರಿ:
ಗುರುವಿಂಗೆ ಕೊಡುವುದು ಅರ್ಪಿತವೆ? ಸವಿಸವಿದು ಕೊಡಬೇಕಲ್ಲದೆ.
ಅರ್ಪಿತ ಅರ್ಪಿತವೆಂದೆನುತ್ತಿಹಿರಿ:
ಲಿಂಗಕ್ಕೆ ಕೊಡುವುದು ಅರ್ಪಿತವೆ? ಸವಿಸವಿದು ಕೊಡಬೇಕಲ್ಲದೆ.
ಅರ್ಪಿತ ಅರ್ಪಿತವೆನುತ್ತಿಹರೆಲ್ಲರು
ಅರ್ಪಿತಮುಖವನರಿಯರು ನೋಡಾ.
ಜಂಗಮಕ್ಕೆ ನೀಡಿ ಜಂಗಮಪ್ರಸಾದವ ಕೊಂಡಡೆ
ನಿನಗರ್ಪಿತ ಕಾಣಾ, ಕೂಡಲಸಂಗಮದೇವಾ. ॥ ೧೧ ॥

## ಪ್ರಸಾದಿಯ ಪ್ರಸಾದಿಸ್ಥಲ

೭೭೮

ಗುರುಲಿಂಗಜಂಗಮದಿಂದ ಪಾದೋದಕ ಪ್ರಸಾದವಾಯಿತ್ತು.
ಆ ಭಾವವೇ ಮಹಾನುಭಾವವಾಗಿ,

ಎನಗೆ ಮತ್ತೆ ಬೇರೆ ಪ್ರಸಾದವೆಂಬುದಿಲ್ಲ,
ಕೂಡಲಸಂಗಮದೇವಾ. ॥ ೧೨ ॥

೭೭೯

ದಾಸೋಹವೆಂಬ ಸೋಹೆಗೊಂಡು ಹೋಗಿ,
ಗುರುವ ಕಂಡೆ, ಲಿಂಗವ ಕಂಡೆ, ಜಂಗಮವ ಕಂಡೆ, ಪ್ರಸಾದವ ಕಂಡೆ.
ಇಂತೀ ಚತುರ್ವಿಧಸಂಪನ್ನನಾದೆ ಕಾಣಾ,
ಕೂಡಲಸಂಗಮದೇವಾ. ॥ ೧೩ ॥

## ಪ್ರಸಾದಿಯ ಭಕ್ತಸ್ಥಲ

೭೮೦

ಸಜ್ಜನ ಶರಣರ ಕಂಡು ಎನ್ನ ಮನ ಉಬ್ಬಿತ್ತು ನೋಡಿರಯ್ಯಾ.
ಶ್ರೀಗುರುಪಾದವ ಹಿಡಿದು ಪಾವನನಾದೆನಯ್ಯಾ.
ಪಾದೋದಕ ಪ್ರಸಾದದಿಂದ ಭವಗೆಟ್ಟೆನು,
ಕೂಡಲಸಂಗಮದೇವಾ. ॥ ೧೪ ॥

೭೮೧

ಕಿವಿಯ ಸೂತಕ ಹೋಯಿತ್ತು, ಸದ್ಗುರುವಿನ ವಚನದಿಂದ,
ಕಂಗಳ ಸೂತಕ ಹೋಯಿತ್ತು, ಸದ್ಭಕ್ತರ ಕಂಡೆನಾಗಿ.
ಕಾಯದ ಸೂತಕ ಹೋಯಿತ್ತು, ನಿಮ್ಮ ಚರಣವ ಮುಟ್ಟಿದೆನಾಗಿ.
ಬಾಯ ಸೂತಕ ಹೋಯಿತ್ತು, ನಿಮ್ಮ ಒಕ್ಕುದ ಕೊಂಡೆನಾಗಿ.
ನಾನಾ ಸೂತಕ ಹೋಯಿತ್ತು, ನಿಮ್ಮ ಶರಣರ ಅನುಭಾವಿಯಾಗಿ.
ಕೂಡಲಸಂಗಮದೇವಾ ಕೇಳಯ್ಯಾ
ಎನ್ನ ಮನದ ಸೂತಕ ಹೋಯಿತ್ತು, ನೀವಲ್ಲದಿಲ್ಲೆಂದರಿದನಾಗಿ. ॥ ೧೫ ॥

೭೮೨

ಲಿಂಗಪ್ರಸಾದಿಗಳಲ್ಲದವರ ಸಂಗ
ಭಂಗವೆಂದುದು ಗುರುವಚನ.
ಲಿಂಗಪ್ರಸಾದಿಗಳಲ್ಲದವರ ಸಂಗ

ಪಂಚಮಹಾಪಾತಕವೆಂದುದು ಲಿಂಗವಚನ.
ಆಸನೇ ಶಯನೇ ಯಾನೇ ಸಂಸರ್ಗೇ ಸಹಭೋಜನೇ ।
ಸಂಚರಂತಿ ಮಹಾಘೋರೇ ನರಕೇ ಕಾಲಮಕ್ಷಯಂ ॥
ಇಂತೆಂದುದಾಗಿ ಕೂಡಲಸಂಗಮದೇವಾ,
ನಿಮ್ಮ ಶರಣರಿಗೆ ಶರಣೆಂದು ಶುದ್ಧನಯ್ಯಾ. ॥ ೧೬ ॥

೭೮೩

ಸಯದಾಸವ ತಂದು ನೀಡುವೆನಲ್ಲದೆ
ಸಂಬಂಧಿ ನಾನಲ್ಲಯ್ಯಾ.
ಕರ್ತಂಗೆ ಭೃತ್ಯಾಚಾರವ ಮಾಡಿ
ಒಕ್ಕುದ ಕೊಂಡಿಪ್ಪೆನಯ್ಯಾ.
ಭೋಗಾದಿ ಭೋಗವ ಸಮವಾಗಿ ಭೋಗಿಸಲು
ಅಘೋರನರಕದಲ್ಲಿಕ್ಕುವ ಕೂಡಲಸಂಗಮದೇವ. ॥ ೧೭ ॥

೭೮೪

ಶುದ್ಧವ ಗುರುವಿಂಗೆ ಕೊಟ್ಟು, ಶುದ್ಧವಾಯಿತ್ತೆಂಬೆನಯ್ಯಾ,
ಸಿದ್ಧವ ಲಿಂಗಕ್ಕೆ ಕೊಟ್ಟು, ಸಿದ್ಧವಾಯಿತ್ತೆಂಬೆನಯ್ಯಾ,
ಪ್ರಸಿದ್ಧವ ಜಂಗಮಕ್ಕೆ ಕೊಟ್ಟು, ಪ್ರಸಿದ್ಧವಾಯಿತ್ತೆಂಬೆನಯ್ಯಾ.
ಗುರುಲಿಂಗಜಂಗಮವ ಏಕತ್ರಯವಾಗಿ ಕಾಣಲರಿಯದಿದ್ದಡೆ
ಶುದ್ಧ ಸಿದ್ಧ ಪ್ರಸಿದ್ಧ ಒಡನೆ ನಗುತ್ತೈದಾವೆ.
ತನುಮನಧನವ ನಿವೇದಿಸಲರಿಯೆನಾಗಿ
ಕೂಡಲಸಂಗಮದೇವ, ಒಲಿ ಎಂಬಡೆಂತೊಲಿವ? ॥ ೧೮ ॥

## ಪ್ರಸಾದಿಯ ಮಾಹೇಶ್ವರಸ್ಥಲ

೭೮೫

ಒಡಲ ಕಳವಳಕ್ಕೆ, ಬಾಯ ಸವಿಗೆ,
ಬಯಸಿ ಉಂಡೆನಾದಡೆ ನಿಮ್ಮ ತೊತ್ತಿನ ಮಗನಲ್ಲ.
ಬೇಡೆ, ಬೇಡೆ, ನಿಮ್ಮ ನಂಬಿದ ಸದ್ಭಕ್ತರ.

ಅಪರೂಕ್ಕುದನುಂಬೆನೆಂದಂತೆ ನಡೆವೆ.
ಎನ್ನೊಡೆಯ ಕೂಡಲಸಂಗಮದೇವನೊಲ್ಲದವರ ಹಿಡಿದೆನಾದಡೆ
ನಿಮ್ಮ ಪಾದದಾಣೆ. ॥ ೧೯ ॥

೭೮೬

ಲಿಂಗಮುಖದಿಂದ ಬಂದ ಪ್ರಸಾದವಲ್ಲದೆ ಕೊಂಡೆನಾದಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ.
ಲಿಂಗಾರ್ಪಿತವಲ್ಲದ ಉದಕವ ಮುಕ್ಕುಳಿಸಿದಡೆ
ಸಲ್ಲೆನು ನಿಮ್ಮ ಗಣಾಚಾರಕ್ಕಯ್ಯಾ.
ಲಿಂಗಾರ್ಪಿತವಲ್ಲದೆ ಹುಲ್ಲುಕಡ್ಡಿಯ ಕೊಂಡಡೆ
ಬಲ್ಲೆ, ಮುಂದೆ ಭವ ಘೋರನರಕವೆಂಬುದ.
ನಿಮಗೆತ್ತಿದ ಕರದಲ್ಲಿ ಮತ್ತೊಂದಕ್ಕೆ ಕೈಯಾನೆನು.
ಅಳವರಿಯದೆ ನುಡಿದೆನು.
ಕಡೆ ಮುಟ್ಟಿ ಸಲಿಸದಿದ್ದಡೆ ತಲೆದಂಡ, ತಲೆದಂಡ,
ಕೂಡಲಸಂಗಮದೇವಾ. ॥ ೨೦ ॥

## ಪ್ರಸಾದಿಯ ಪ್ರಾಣಲಿಂಗಿಸ್ಥಲ

೭೮೭

ಮೌನದಲುಂಬುದು ಆಚಾರವಲ್ಲ.
ಲಿಂಗಾರ್ಪಿತವ ಮಾಡಿದ ಬಳಿಕ
ತುತ್ತಿಗೊಮ್ಮೆ ಶಿವಶರಣೆನುತ್ತಿರಬೇಕು.
ಕರಣವೃತ್ತಿಗಳಡಗುವವು,
ಕೂಡಲಸಂಗನ ನೆನೆವುತ್ತ ಉಂಡಡೆ. ॥ ೨೧ ॥

೭೮೮

ಕಾಯದ ಕರಣದ ಕೈಯಲು ಪದಾರ್ಥವ ಹಿಡಿವಲ್ಲಿ
ನಿಮಗೆ ಕೊಡುವ ಭರದ ಭೀತಿಯಿಂದ ಆನರಿಯದಿಪ್ಪೆನಾಗಿ,
ಎನ್ನ ನೀನರಿದು ಸಲಹುತ್ತಿಯಯ್ಯಾ,
ಕೂಡಲಸಂಗಮದೇವಾ. ॥ ೨೨ ॥

೭೮೯

ಆಳಿಕಾರನೆನಗೊಬ್ಬ ಮಗ ಹುಟ್ಟಿದನೆಂದು
ಆಳಿಕೆಯ ಕೆಡಲೀಸದೆ ನಡೆಸುವ ನಮ್ಮಯ್ಯ.
ಪಂಚಭೂತಕಾಯವ ಭವಿಯೆಂದೆನಿಸಲೀಯದೆ
ಪ್ರಸಾದಕಾಯವ ಮಾಡಿ ಸಲಹುವ ನಮ್ಮಯ್ಯ.
ಆಳಿ ಸವೆವಲ್ಲಿ ಅವಧಾನಿಯಾಗಿದ್ದಡೆ
ಆಳ್ದನು ನಮ್ಮ ಕೂಡಲಸಂಗಮದೇವ. ॥ ೨೩ ॥

೭೯೦

ಶಿವಾಚಾರವೆಂಬುದೊಂದು ಬಾಳಬಾಯ ಧಾರೆ:
ಲಿಂಗ ಮೆಚ್ಚಬೇಕು, ಜಂಗಮ ಮೆಚ್ಚಬೇಕು,
ಪ್ರಸಾದ ಮೆಚ್ಚಿ ತನ್ನಲ್ಲಿ ಸ್ವಾಯತವಾಗಿರಬೇಕು.
ಬೆಚ್ಚಿ ಬೇರಾದಡೆ ಮೆಚ್ಚ ನಮ್ಮ ಕೂಡಲಸಂಗಮದೇವ. ॥ ೨೪ ॥

# ಪ್ರಸಾದಿಯ ಶರಣಸ್ಥಲ

೭೯೧

ತ್ರಿವಿಧಪ್ರಸಾದವೆಂದೆಂಬರು, ಅದೆಂತಹುದೋ?
ಶುದ್ಧಪ್ರಸಾದ ಗುರುವಿನದು, ಸಿದ್ಧಪ್ರಸಾದ ಲಿಂಗದದು,
ಪ್ರಸಿದ್ಧಪ್ರಸಾದ ಜಂಗಮದದು.
ಇಂತೀ ತ್ರಿವಿಧ ಒಂದಾದವರ ತೋರಾ
ಕೂಡಲಸಂಗಮದೇವಾ. ॥ ೨೫ ॥

೭೯೨

ಆವಾವ ಭಾವದಲ್ಲಿ ಶಿವನ ನಂಬಿದ ಶರಣರು ಎಂತಿದ್ದಡೇನಯ್ಯಾ?
ಆವಾವ ಭಾವದಲ್ಲಿ ಶಿವನ ನಂಬಿದ ಮಹಿಮರು ಎಂತಿದ್ದಡೇನಯ್ಯಾ?
ಸುಚರಿತ್ರರು ಎಂತಿದ್ದಡೇನಯ್ಯಾ?
ಅವಲೋಹವ ಕಳೆವ ಪರುಷ ಎಂತಿದ್ದಡೇನಯ್ಯಾ?
ಕೂಡಲಸಂಗನ ಶರಣರು
ರಸದ ವಾರುಧಿಗಳು ಎಂತಿದ್ದಡೇನಯ್ಯಾ? ॥ ೨೬ ॥

೭೯೩

ಉರೆ ತಾಗಿದ ಮೃಗವು ಒಂದಡಿಯನಿಡುವುದೆ?
ತನುವ ತಾಗಿದ ಸುಖವು ಅಗಲುವುದೆ?
ಕೂಡಲಸಂಗನ ಶರಣರ ಅನುಭಾವವರಿದವರ
ಮರಳಿ ಮರ್ತ್ಯರೆಂದೆನಬಹುದೆ? ॥ ೨೭ ॥

೭೯೪

ನಿಮ್ಮ ಶ್ರೀಪಾದವ ಮುಟ್ಟಿ ಕರ್ಮ ಹರಿಯಿತ್ತು.
ನಿಮ್ಮ ಪ್ರಸಾದದಿಂದ ಭವಗೆಟ್ಟೆ ನೋಡಯ್ಯಾ!
ಮನಪರುಷ, ದೃಷ್ಟಿಪರುಷ, ಭಾವಪರುಷ: ಲಿಂಗಗಣಂಗಳು
ಕೂಡಲಸಂಗಮದೇವಾ,
ನಿಮ್ಮ ಶರಣರ ಅನುಭಾವದಿಂದ ಸುಖಿಯಾದೆನು. ॥ ೨೮ ॥

## ಪ್ರಸಾದಿಯ ಐಕ್ಯಸ್ಥಲ

೭೯೫

ನಡೆ ಚೆನ್ನ, ನುಡಿ ಚೆನ್ನ, ಎಲ್ಲಿ ನೋಡಿದಡಲ್ಲಿ ಚೆನ್ನ,
ಪ್ರಮಥರೊಳಗೆ ಚೆನ್ನ, ಪುರಾತರೊಳಗೆ ಚೆನ್ನ.
ಸವಿದು ನೋಡಿ ಅಂಬಲಿ
ರುಚಿಯಾಯಿತ್ತೆಂದು,
ಕೂಡಲಸಂಗಮದೇವಂಗೆ ಬೇಕೆಂದು
ಕೈದೆಗೆದ ನಮ್ಮ ಚೆನ್ನ. ॥ ೨೯ ॥

೭೯೬

ಲಿಂಗವಿಕಾರಿಗೆ ಅಂಗವಿಕಾರವೆಂಬುದಿಲ್ಲ,
ಜಂಗಮವಿಕಾರಿಗೆ ಧನವಿಕಾರವೆಂಬುದಿಲ್ಲ,
ಪ್ರಸಾದವಿಕಾರಿಗೆ ಮನೋವಿಕಾರವೆಂಬುದಿಲ್ಲ.
ಇಂತೀ ತ್ರಿವಿಧ ಗುಣವನರಿದಾತನು
ಅಚ್ಚ ಲಿಂಗೈಕ್ಯನು ಕೂಡಲಸಂಗಮದೇವಾ. ॥ ೩೦ ॥

## ಪ್ರಾಣಲಿಂಗಿಯ ಜ್ಞಾನಿಸ್ಥಲ

೭೯೭

ಪ್ರಾಣಲಿಂಗ ಪ್ರತಿಗ್ರಾಹಕನಾದಬಳಿಕ,
ಲಿಂಗವಿರಹಿತನಾಗಿ ನಡೆವ ಪರಿಯೆಂತೊ?
ಲಿಂಗವಿರಹಿತನಾಗಿ ನುಡಿವ ಪರಿಯೆಂತೊ?
ಪಂಚೇಂದ್ರಿಯ ಸುಖವನು ಲಿಂಗವಿರಹಿತನಾಗಿ ಭುಂಜಿಸಲಾಗದು,
ಲಿಂಗವಿರಹಿತವಾಗಿ ಉಗುಳ ನುಂಗಲಾಗದು,
ಇಂತೆಂದುದು ಕೂಡಲಸಂಗನ ವಚನ. ॥ ೧ ॥

೭೯೮

ಹತ್ತುಸಾವಿರ ಗೀತವ ಹಾಡಿ ಅರ್ಥವಿಟ್ಟಲ್ಲಿ ಫಲವೇನು
ಮುಟ್ಟುವ ತೆರಸನರಿಯದನ್ನಕ್ಕ?
ಕಟ್ಟಿದಡೇನು ಬಿಟ್ಟಡೇನು
ಮನವು ಲಿಂಗದಲ್ಲಿ ಮುಟ್ಟದನ್ನಕ್ಕ?
ಮಾತಿನಲೆ ಒಲಿಸಿ ಮಹತ್ತಪ್ಪ ಲಿಂಗವ ಕಂಡೆಹೆನೆಂಬ
ಪಾತಕರ ಮೆಚ್ಚ ನಮ್ಮ ಕೂಡಲಸಂಗಮದೇವ. ॥ ೨ ॥

೭೯೯

ಶ್ವಾನಜ್ಞಾನ, ಗಜಜ್ಞಾನ, ಕುಕ್ಕುಟಜ್ಞಾನವೆಂಬ
ಜ್ಞಾನತ್ರಯಂಗಳೇನಾದುವು?
ಕೂಡಲಸಂಗಮದೇವಾ
ನಿಮ್ಮನರಿಯದ ಜ್ಞಾನವೆಲ್ಲಾ ಅಜ್ಞಾನ. ॥ ೩ ॥

೮೦೦

ಗುರು ತೋರಿದ ಲಿಂಗವು ಮನಸ್ಥಲವಾಗಿರಲು
ಪವನಭೇದದಿಂದ ಅರಿದೆಹೆನೆಂದಡೆ, ಅದೆ ದ್ರೋಹ.
ಇಡಾ ಪಿಂಗಳಾ ಸುಷುಮ್ನಾನಾಳವಿಡಿದು ಅರಿದೆಹೆನೆಂದಡೆ
ಕೂಡಲಸಂಗಮದೇವ ಮೂಗಕೊಯ್ಯದೆ ಮಾಬನೆ? ॥ ೪ ॥

೮೦೧

ಕಬ್ಬುನ ಪರುಷವೇದಿಯಾದಡೇನು,
ಕಬ್ಬುನ ಹೊನ್ನಾಗದಡಾ ಪರುಷವದೇಕೊ?
ಮನೆಯೊಳಗೆ ಕತ್ತಲೆ ಹರಿಯದೊಡಾ ಜ್ಯೋತಿಯದೇಕೊ?
ಕೂಡಲಸಂಗಮದೇವರ ಮನಮುಟ್ಟಿ ಪೂಜಿಸಿ
ಕರ್ಮ ಹರಿಯದೊಡಾ ಪೂಜೆಯದೇಕೊ? ॥ ೫ ॥

೮೦೨

ಅಹಂಕಾರ ಮನವನಿಂಬುಗೊಂಡಲ್ಲಿ ಲಿಂಗ ತಾನೆಲ್ಲಿಪ್ಪುದೊ?
ಅಹಂಕಾರಕ್ಕೆ ಎಡೆಗೊಡದೆ ಲಿಂಗತನುವಾಗಿರಬೇಕು.
ಅಹಂಕಾರರಹಿತವಾದಲ್ಲಿ ಸನ್ನಿಹಿತ ಕಾಣಾ
ಕೂಡಲಸಂಗಮದೇವ. ॥ ೬ ॥

೮೦೩

ನುಡಿದಡೆ ಮುತ್ತಿನ ಹಾರದಂತಿರಬೇಕು.
ನುಡಿದಡೆ ಮಾಣಿಕ್ಯದ ದೀಪ್ತಿಯಂತಿರಬೇಕು.
ನುಡಿದಡೆ ಸ್ಫಟಿಕದ ಸಲಾಕೆಯಂತಿರಬೇಕು.
ನುಡಿದಡೆ ಲಿಂಗ ಮೆಚ್ಚಿ ಅಹುದಹುದೆನಬೇಕು.
ನುಡಿಯೊಳಗಾಗಿ ನಡೆಯದಿದ್ದಡೆ,
ಕೂಡಲಸಂಗಮದೇವನೆಂತೊಲಿವನಯ್ಯಾ? ॥ ೭ ॥

೮೦೪

ಮನದ ಕೊನೆಯ ಮೊನೆಯ ಮೇಲೆ
ಮನೆಯ ಮಾಡಿಕೊಂಡಿಪ್ಪನೊಬ್ಬ ದಾಸೋಹಿ.
ಆದಿವಿಡಿದು ಬಂದಾತನೆ ಭಕ್ತ,
ಆದಿವಿಡಿದು ಬಂದಾತನೆ ಜಂಗಮ.
ಆದಿ ಗುರು, ಅನಾದಿ ಶಿಷ್ಯ.
ಈ ಉಭಯ ಕುಳಸ್ಥಳವ ಬಲ್ಲಡೆ ಆತ ಲಿಂಗಸಂಬಂಧಿ
ಕೂಡಲಸಂಗಮದೇವಾ. ॥ ೮ ॥

೮೦೫

ಅರಿದರಿದರಿದು!
ಸಮಗಾಣಿಸಬಾರದು, ತ್ರಾಸಿನ ಕಟ್ಟಳೆಯಂತಿನಿತು ವೆಗ್ಗಳವಾದಡೆ
ಈಶ್ವರನು ಒಡೆಯಿಕ್ಕದೆ ಮಾಣುವನೆ?
ಪಾತ್ರ ಅಪಾತ್ರವೆಂದು ಕಂಡಡೆ ಶಿವನೆಂತು ಮೆಚ್ಚುವನು?
ಜೀವ ಜೀವಾತ್ಮವ ಸರಿಯೆಂದು ಕಂಡಡೆ
ಸಮವೇದಿಸದಿಪ್ಪನೆ ಶಿವನು?
ತನ್ನ ಮನದಲ್ಲಿ 'ಯತ್ರ ಜೀವಃ ತತ್ರ ಶಿವ'ನೆಂದು
ಸರ್ವಜೀವದಯಾಪಾರಿಯಾದಡೆ, ಕೂಡಲಸಂಗಮದೇವನು
ಕೈಲಾಸದಿಂದ ಬಂದು ಎತ್ತಿಕೊಳ್ಳದಿಪ್ಪನೆ? ॥ ೯ ॥

೮೦೬

ಸ್ಥಾವರ ಜಂಗಮವೆಂಬ ಉಭಯ ಪಕ್ಷ ಒಂದೆ :
ಆವ ಮುಖದಲಿ ಬಂದಡೂ ತೃಪ್ತಿಯೊಂದೆ,
ಕೂಡಲಸಂಗಮದೇವರ ಆಪ್ಯಾಯನವೊಂದೆ. ॥ ೧೦ ॥

೮೦೭

ಮುತ್ತು ಉದಕದಲಾಗದು, ಉದಕ ಮುತ್ತಿನಲಾಗದು,
ತತ್ತ್ವಘಟಿಸಿದ ಸುಮುಹೂರ್ತದಲಲ್ಲದೆ,
ಚಿತ್ತವೇದ್ಯವಾಗದು ಸದ್ಗುರುವಿನ ಕರುಣಕ್ಕಲ್ಲದೆ.
ಕರ್ತೃ ಕೂಡಲಸಂಗಮದೇವರ ಒಲವಿನ ದಯದ
ಚಿತ್ತವಿಡಿದಂಗಲ್ಲದೆ, ಶಿವತತ್ತ್ವ ಸಾಹಿತ್ಯವಾಗದು. ॥ ೧೧ ॥

೮೦೮

ಕಾಯದ ಗಡಣ ಕೆಲಬರಿಗುಂಟು,
ಜೀವದ ಗಡಣ ಕೆಲಬರಿಗುಂಟು,
ಭಾವದ ಗಡಣ ಕೆಲಬರಿಗುಂಟು,
ವಚನದ ಗಡಣ ಕೆಲಬರಿಗುಂಟು.
ಪ್ರಾಣಲಿಂಗದ ಗಡಣ ಆರಿಗೂ ಇಲ್ಲ,
ಕೂಡಲಸಂಗನ ಶರಣರೊಳಗೆ
ತಂಗಟೂರ ಮಾರಯ್ಯಂಗಲ್ಲದೆ. ॥ ೧೨ ॥

೮೦೯

ಚಂದ್ರಕಾಂತದ ಶಿಲೆಯಲ್ಲಿ ಜಲವಿಲ್ಲದನ್ನಕ್ಕ
ಶೈತ್ಯವ ತೋರುವ ಪರಿಯೆಂತೋ?
ಸೂರ್ಯಕಾಂತದ ಶಿಲೆಯಲ್ಲಿ ಅಗ್ನಿಯಿಲ್ಲದನ್ನಕ್ಕ
ಉಷ್ಣವ ತೋರುವ ಪರಿಯೆಂತೋ?
ಶರಣಂಗೆ ಭಕ್ತಿಕಾಯವಿಲ್ಲದನ್ನಕ್ಕ
ಕೂಡಲಸಂಗಯ್ಯನನರಿವ ಪರಿಯೆಂತೋ? || ೧೩ ||

೮೧೦

ಮುನ್ನೂರ ಅರುವತ್ತು ನಕ್ಷತ್ರಕ್ಕೆ ಬಾಯಿಬಿಟ್ಟುಕೊಂಡಿಪ್ಪದೆ ಸಿಂಪು?
ಅದು ಸ್ವಾತಿಗಲ್ಲದೆ ಬಾಯ್ದೆರೆಯದು ಕೇಳು, ಕೇಳು ತಂದೆ.
ಎಲ್ಲವಕ್ಕೆ ಬಾಯ ಬಿಟ್ಟಡೆ ತಾನೆಲ್ಲಿಯ ಮುತ್ತಪ್ಪದು?
ಪರಮಂಗಲ್ಲದೆ ಹರುಷತಿಕೆಯಿಲ್ಲೆಂದು
ಕರಣಾದಿ ಗುಣಂಗಳ ಮರೆದರು,
ಇದು ಕಾರಣ, ಕೂಡಲಸಂಗನ ಶರಣರು ಸಪ್ತವ್ಯಸನಿಗಳಲ್ಲಾಗಿ. || ೧೪ ||

## ಪ್ರಾಣಲಿಂಗಿಯ ಪ್ರಾಣಲಿಂಗಿಸ್ಥಲ

೮೧೧

ಮೈಗೆ ಕಾಹ ಹೇಳುವರಲ್ಲದೆ, ಮನಕ್ಕೆ ಕಾಹ ಹೇಳುವರೆ?
ಅಣಕದ ಮಿಂಡನ ಹೊಸ ಪರಿಯ ನೋಡಾ!
ಕೂಡಲಸಂಗಮದೇವನೆನ್ನ ಮನವ ನಂಬದೆ
ತನ್ನಲ್ಲಿದ್ದ ಲೇಸ ಕಾಹ ಹೇಳಿದನು. || ೧೫ ||

೮೧೨

ಮನವಂಚನೆಯೆ ಅನ್ಯಲಿಂಗಾರ್ಚನೆ.
ಅದು ನಿಜವಲ್ಲ ನಿಜವಲ್ಲ,
ಕೂಡಲಸಂಗಮದೇವನು ಮನದಂತರ್ಯಾಮಿ ತಾನಾಗಿ. || ೧೬ ||

೮೧೩

ಸರ್ಪನ ಸಂಯೋಗ, ಜ್ಯೋತಿಯ ಪತಂಗನ ಬೆಸನದಂತೆ;
ಮನದ ಮದವರಿಯದೆ ನಿಮ್ಮ ಕೃಪೆಯಿಂದೆ ನಿಮ್ಮ ನೆನೆವೆ.
ಎನ್ನ ಭಾವದ ಕೊನೆಯ ಮೊನೆಯ ಮೇಲೆ
ಮನೆಯ ಮಾಡಿಕೊಂಡಿಪ್ಪೆಯಯ್ಯಾ,
ಕೂಡಲಸಂಗಮದೇವಾ, ನೀನೆನ್ನ ಪ್ರಾಣನಾಥನಾಗಿ. ॥ ೧೭ ॥

೮೧೪

ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ನಿರಂಜನದೇವಾ,
ನಿಮ್ಮ ಮಹಿಮೆಯ ಪ್ರಣವಸ್ವರೂಪಂಗಲ್ಲದೆ
ಕಾಣಲಾರಿಗೆಯೂ ಬಾರದಯ್ಯಾ.
ಜ್ಞಾನಜ್ಯೋತಿಧ್ಯಾನದಿಂದ ನಾಳಶುದ್ಧದ್ವಾರವಾಗಿ
ಆರಾಧಿಸಿ ಕಂಡೆ, ನಮ್ಮ ಕೂಡಲಸಂಗಮದೇವನ. ॥ ೧೮ ॥

೮೧೫

ಪಶ್ಚಿಮಪದ್ಮಾಸನದಲ್ಲಿ ಕುಳ್ಳಿತ್ತು ನೆಟ್ಟೆಲುವ ಮುರಿದು
ತುಟಿ ಮಿಡುಕದೆ ಅಟ್ಟೆಯಾಡಿತ್ತಲ್ಲಾ!
ಬಿಟ್ಟ ಕಣ್ಣು ಬಿಗಿದ ಹುಬ್ಬು, ಬ್ರಹ್ಮರಂಧ್ರದಲ್ಲಿ ಕ[ಟ್ಟೆ] ಗುಡಿಯ,
ಕೂಡಲಸಂಗಮದೇವ ಹಿಡಿವಡೆದ. ॥ ೧೯ ॥

೮೧೬

ಸುನಾದ ಬಿಂದು ಪ್ರಣವಮಂತ್ರದಗ್ರದ ಕೊನೆಯಲ್ಲೈದೂದೆ?
ಸೋಽಹಂ ಸೋಽಹಂ ಎಂದೆನುತ್ತಿದ್ದಿತ್ತು,
ಕೋಽಹಂ ಎಂಬುದ ಕಳೆದು ಬ್ರಹ್ಮರಂಧ್ರದೊಳಗೆ.
ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ ॥
ಇಂತೆಂದುದಾಗಿ,
ಕೂಡಲಸಂಗಮದೇವನಲ್ಲದೆ ಮತ್ತಾರೂ ಇಲ್ಲ. ॥ ೨೦ ॥

೮೧೭

ಬೆಳಗಿನೊಳಗಣ ಬೆಳಗು ಮಹಾಬೆಳಗು!
ಶಿವ ಶಿವಾ! ಪರಮಾಶ್ರಯವೆ ತಾನಾಗಿ
ಶತಪತ್ರಕಮಳಕರ್ಣಿಕಾಮಧ್ಯದಲ್ಲಿ
ಸ್ವತಃಸಿದ್ಧನಾಗಿಪ್ಪ ನಮ್ಮ ಕೂಡಲಸಂಗಮದೇವ. || ೨೧ ||

೮೧೮

ಆಚಾರ ಶಿವಾಚಾರವೆಂದರಿಯದ ಕಾರಣ,
ಷಡುದರುಶನಂಗಳೆಲ್ಲಾ ತಮತಮಗೆ ಶರಣೆನುತ್ತಿದ್ದುವು.
ಮಹತ್ವದ ಸಮಯಾದಿ ಶೈವಂಗಳೆಂಬುವೆಲ್ಲಾ, ಶರಣು ಶರಣೆನುತ್ತಿದ್ದುವು.
ನಮ್ಮ ಕೂಡಲಸಂಗನ ಶರಣರು ಮಾಡಿದ ವಿನಿಯೋಗ
ಬಹಿರಂಗದಲ್ಲಿ ವರ್ತಿಸುವವರಿಗೆ ಎಲ್ಲಿಯದೊ? || ೨೨ ||

೮೧೯

ತಮತಮಗೆಲ್ಲ ನೊಸಲಕಣ್ಣವರು, ತಮತಮಗೆಲ್ಲ ನಂದಿವಾಹನರು,
ತಮತಮಗೆಲ್ಲ ಖಟ್ವಾಂಗಕಪಾಲತ್ರಿಶೂಲಧರರು.
ದೇವರಾರು? ಭಕ್ತರಾರು? ಹೇಳಿರಯ್ಯಾ!
ಕೂಡಲಸಂಗಮದೇವಾ, ನಿಮ್ಮ ಶರಣರು ಸ್ವತಂತ್ರರು,
ಎನ್ನ ಬಚ್ಚಬರಿಯ ಬಸವನೆನಿಸಯ್ಯಾ. || ೨೩ ||

೮೨೦

ಗುರುವಿನಲ್ಲಿ ಸದಾಚಾರ: ಲಿಂಗದಲನುದಿನ ವೇಳೆ.
ಜಂಗಮದಲ್ಲನುಭಾವ ಸಮಯಾಚಾರ: ಲಿಂಗದಲನುದಿನ ವೇಳೆ.
ಈ ಉಭಯಾಚಾರದಿಂದ ತಿಳಿದ ತಿಳಿವು ಲಿಂಗದಲ್ಲಿ ಅನುದಿನ ವೇಳೆ.
ಬೇರೆ ತೋರಲಿಲ್ಲ.
ಲಿಂಗಜಂಗಮದಲ್ಲಿ ಲೀಯವಾದಾಚಾರ ಸಮಯಾಚಾರ.
ಇದು ಕಾರಣ ಕೂಡಲಸಂಗಮದೇವಾ.
ಲಿಂಗದಲನುದಿನ ವೇಳೆ. || ೨೪ ||

೮೨೧

ಉಳ್ಳವರು ಶಿವಾಲಯ ಮಾಡಿಹರು,
ನಾನೇನ ಮಾಡುವೆ ಬಡವನಯ್ಯಾ.
ಎನ್ನ ಕಾಲೇ ಕಂಬ, ದೇಹವೇ ದೇಗುಲ,
ಶಿರ ಹೊನ್ನ ಕಲಶವಯ್ಯಾ.
ಕೂಡಲಸಂಗಮದೇವಾ, ಕೇಳಯ್ಯಾ
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ. ॥ ೨೫ ॥

## ಪ್ರಾಣಲಿಂಗಿಯ ಭಕ್ತಸ್ಥಲ

೮೨೨

ಅಷ್ಟದಳಕಮಳಾತ್ಮದೊಳಗೆ
ನೆಟ್ಟನೆ ಮನಃಪ್ರೇರಕನೆಂದು ನಂಬಿದೆ, ಮತ್ತೊಂದನರಿಯದೆ,
ನಿತ್ಯಸ್ವತಂತ್ರನು ನೀನೆ,
ದೃಷ್ಟಲಿಂಗ ಜಂಗಮ ಒಂದೆ ಎಂದು ಇಪ್ಪೆನು,
ಪ್ರಭುವೆ ಕೂಡಲಸಂಗಮದೇವಾ. ॥ ೨೬ ॥

೮೨೩

ನಿನ್ನ ನಾನರಿಯದ ಮುನ್ನ ನೀನೆಲ್ಲಿ ಇದ್ದೆ?
ಎನ್ನೊಳಗಿದ್ದು ನಿನ್ನ ತೋರಲ್ಪಿಕೆ ನೀನೆ ರೂಪಾದೆ.
ಇನ್ನು ಜಂಗಮವೆ ಲಿಂಗವೆಂದು ನಂಬಿದೆ,
ಕೂಡಲಸಂಗಮದೇವಾ. ॥ ೨೭ ॥

೮೨೪

ಗುರು ಮುನಿದಡೆ ಒಂದು ದಿನ ತಾಳುವೆ,
ಲಿಂಗ ಮುನಿದಡೆ ದಿನವರೆ ತಾಳುವೆ.
ಜಂಗಮ ಮುನಿದಡೆ ಕ್ಷಣಮಾತ್ರ ತಾಳಿದೆನಾದಡೆ,
ಎನ್ನ ಪ್ರಾಣದ ಹೋಕು ಕೂಡಲಸಂಗಮದೇವಾ. ॥ ೨೮ ॥

೮೨೫

ಅರಸು ಮುನಿದಡೆ ನಾಡೊಳಗಿರಬಾರದಯ್ಯಾ,
ಗಂಡ ಮುನಿದಡೆ ಮನೆಯೊಳಗೆ ಇರಬಾರದಯ್ಯಾ.
ಕೂಡಲಸಂಗಮದೇವಾ
ಜಂಗಮ ಮುನಿದಡೆ ನಾನೆಂತು ಬದುಕುವೆ? ॥ ೨೯ ॥

೮೨೬

ರಚ್ಚೆಯ ನೆರವಿಗೆ ನಾಣುನುಡಿ ಇಲ್ಲದಿಹುದೆ?
ಅದರಂತೆನಬಹುದೆ ಸಜ್ಜನ ಸ್ತ್ರೀಯು?
ಅದರಂತೆನಬಹುದೆ ಭಕ್ತಿರತಿಯು?
ಕರುಳಕಲೆ ಪ್ರಕಟಿತವುಂಟೆ,
ಕೂಡಲಸಂಗಮದೇವಾ? ॥ ೩೦ ॥

೮೨೭

ಭೂತ ಒಲಿದು ಆತ್ಮನ ಸೋಂಕಿದ ಬಳಿಕ
ಭೂತದ ಗುಣವಲ್ಲದೆ ಆತ್ಮನ ಗುಣವುಂಟೆ?
ಗುರುಕಾರುಣ್ಯವಾಗಿ ಹಸ್ತಮಸ್ತಕಸಂಯೋಗವಾದ ಬಳಿಕ
ಗುರುಲಿಂಗಜಂಗಮವೆ ಗತಿಯಾಗಿ ಇದ್ದೆ,
ಕೂಡಲಸಂಗಮದೇವಾ. ॥ ೩೧ ॥

೮೨೮

ಹಸಿವು, ತೃಷೆ, ನಿದ್ರೆ, ವಿಷಯಂಗಳ ಮರೆದೆ,
ನೀವು ಕಾರಣ!
ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಂಗಳ ಮರೆದೆ,
ನೀವು ಕಾರಣ!
ಪಂಚೇಂದ್ರಿಯ, ಸಪ್ತಧಾತು, ಅಷ್ಟಮದಂಗಳ ಮರೆದೆ,
ನೀವು ಕಾರಣ!
ಕೂಡಲಸಂಗಮದೇವಯ್ಯಾ,
ನಿಮ್ಮ ಶರಣರಿಗೆ ಆಪ್ಯಾಯನವಾದಡೆ
ಎನಗೆ ತೃಪ್ತಿಯಾಯಿತ್ತು. ॥ ೩೨ ॥

೮೨೯

ತನು ನಿಮ್ಮದೆಂದ ಬಳಿಕ ಎನಗೆ ಬೇರೆ ತನುವಿಲ್ಲ,
ಮನ ನಿಮ್ಮದೆಂದ ಬಳಿಕ ಎನಗೆ ಬೇರೆ ಮನವಿಲ್ಲ,
ಧನ ನಿಮ್ಮದೆಂದ ಬಳಿಕ ಎನಗೆ ಬೇರೆ ಧನವಿಲ್ಲ,
ಇಂತೀ ತ್ರಿವಿಧವು ನಿಮ್ಮದೆಂದರಿದ ಬಳಿಕ
ಎನಗೆ ಬೇರೆ ವಿಚಾರವುಂಟೆ, ಕೂಡಲಸಂಗಮದೇವಾ? || ೩೩ ||

## ಪ್ರಾಣಲಿಂಗಿಯ ಮಾಹೇಶ್ವರಸ್ಥಲ

೮೩೦

ಆಕಳ, ಕಳ್ಳರು ಕೊಂಡೊಯ್ದರೆನ್ನದಿರಿಂ ಭೋ, ನಿಮ್ಮ ಧರ್ಮ!
ಬೊಬ್ಬಿಡದಿರಿಂ ಭೋ, ನಿಮ್ಮ ಧರ್ಮ!
ಅರಸಾಡದಿರಿಂ ಭೋ, ನಿಮ್ಮ ಧರ್ಮ!
ಅಲ್ಲಿ ಉಂಬಡೆ ಸಂಗ, ಇಲ್ಲಿ ಉಂಬಡೆ ಸಂಗ,
ಕೂಡಲಸಂಗಮದೇವ ಏಕೋಭಾವ. || ೩೪ ||

೮೩೧

ಅರ್ಥ ಪ್ರಾಣ ಅಭಿಮಾನವನೊಪ್ಪಿಸಿದಲ್ಲಿ ಭಕ್ತನಪ್ಪನೆ? ಅಲ್ಲ.
ಆದಿರುದ್ರನ ಮಗಳು ಆದಿಶಕ್ತಿ,
ಆದಿಶಕ್ತಿಯ ಮಗ ವಿಷ್ಣು,
ವಿಷ್ಣುವಿನ ಅರ್ಧಾಂಗಿ ಲಕ್ಷ್ಮಿ.
ಈ ತೊತ್ತಿನ ತೊತ್ತಿನ ಪಡಿದೊತ್ತನೊಪ್ಪಿಸಿದಲ್ಲಿ ಭಕ್ತನಪ್ಪನೆ? ಅಲ್ಲ.
ಎನ್ನ ಮನದೊಡೆಯ ಮಹಾದೇವಾ,
ನಿಮ್ಮ ಮನವ ನಿಮಗೊಪ್ಪಿಸಿ ಶುದ್ಧ ನಾನು ಕಾಣಾ,
ಕೂಡಲಸಂಗಮದೇವಾ. || ೩೫ ||

೮೩೨

ಮಾಡುವಾತ ನಾನಲ್ಲಯ್ಯಾ, ನೀಡುವಾತ ನಾನಲ್ಲಯ್ಯಾ,
ಬೇಡುವಾತ ನಾನಲ್ಲಯ್ಯಾ, ನಿಮ್ಮ ಕಾರುಣ್ಯವಲ್ಲದೆ.

ಎಲೆ ದೇವಾ, ಮನೆಯ ತೊತ್ತು ಅಲಸಿದಡೆ ಒಡತಿ ಮಾಡಿಕೊಂಬಂತೆ,
ನಿನಗೆ ನೀ ಮಾಡಿಕೊ, ಕೂಡಲಸಂಗಮದೇವಾ. ॥ ೩೬ ॥

೮೩೩

ಮುನ್ನಿನ ಜನ್ಮದಲ್ಲಿ ಗುರುಲಿಂಗಜಂಗಮವ ಪೂಜಿಸಲರಿಯದ ಕಾರಣ
ಬಹುಜನ್ಮಕ್ಕೆ ತಂದು ಇಕ್ಕಿದೆಯಯ್ಯಾ ಎನ್ನನು.
ಎನಗೆ ಗುರುಪಥವ ತೋರಿದವರಾರು?
ಲಿಂಗಪಥವ ತೋರಿದವರಾರು?
ಜಂಗಮಪಥವ ತೋರಿದವರಾರು?
ಪಾದೋದಕ ಪ್ರಸಾದಪಥವ ತೋರಿದವರಾರು?
ತೋರುವ ಮನವೆ ನೀವೆಂದರಿತೆ.
ಎನಗಿನ್ನಾವ ಭವವಿಲ್ಲ,
ಕೂಡಲಸಂಗಮದೇವಾ. ॥ ೩೭ ॥

# ಪ್ರಾಣಲಿಂಗಿಯ ಪ್ರಸಾದಿಸ್ಥಲ

೮೩೪

ಜನ್ಮ ಜನ್ಮಕ್ಕೆ ಹೋಗಲೀಯದೆ,
'ಸೋऽಹಂ' ಎಂದೆನಿಸದೆ 'ದಾಸೋऽಹಂ' ಎಂದೆನಿಸಯ್ಯಾ.
ಲಿಂಗಜಂಗಮಪ್ರಸಾದದ ನಿಲವ ತೋರಿ ಬದುಕಿಸಯ್ಯಾ,
ಕೂಡಲಸಂಗಮದೇವಾ, ನಿಮ್ಮ ಧರ್ಮ. ॥ ೩೮ ॥

೮೩೫

ಆಶೆಯಾಮಿಷ ತಾಮಸದಿಂದ ಭವಬಂಧನವಾದುದನರಿಯಾ!
ತ್ರಿವಿಧ ತ್ರಿವಿಧಾವಸ್ಥೆಯ ಮರೆಯಾ!
ಓಂ ನಮಃ ಶಿವಾಯ, ಶರಣೆಂಬುದ ಬಿಡದೆ ನೆನೆ ಮನವೆ!
ಮಹತಃ ಶಿವಲಿಂಗಸ್ಯ ಮಹತೋ ಜಗಮಸ್ಯ ಚ
ತತ್ ಪ್ರಸಾದೋ ಮಹಾನೇವ ಮಹದ್ಭಿರಿದಮೀರಿತಂ॥
ಕೂಡಲಸಂಗಮದೇವನ ಪ್ರಸಾದಸಾನ್ನಿಧ್ಯದಿಂದ
ಭವಜನ್ಮಕರ್ಮ ಪಂಚಭೂತಪೂರ್ವನಾಸ್ತಿ. ॥ ೩೯ ॥

೮೩೬

ಬೆಟ್ಟಕ್ಕೆ ಬೆಳ್ಳಾರ ಸುತ್ತಿತಯ್ಯಾ,
ಪಾಪದ ಬಲೆಯ ತಂದು ಮುಂದೆ ಒಡ್ಡಿದಿರಯ್ಯಾ,
ಬೇಟೆಗಾರನು ಮೃಗವನಟ್ಟಿ ಬರಲು ಮೃಗವು ಗೋರಿಗೊಳಗಾಗದಯ್ಯಾ.
ಪರನೊಡ್ಡಿದ ಬಲೆಯಲ್ಲಿ ಸಿಲುಕಿದ ಮೃಗವು
ಕೂಡಲಸಂಗಮದೇವಂಗೆ ಓಗರವಾಯಿತ್ತು. || ೪೮ ||

೮೩೭

ಪರಿಯಾಣವೆ ಭಾಜನವೆಂಬರು: ಪರಿಯಾಣ ಭಾಜನವಲ್ಲ,
ಲಿಂಗಕ್ಕೆ ತನ್ನ ಮನವೆ ಭಾಜನ.
ಪ್ರಾಣವನು ಬೀಸರವೋಗಲೀಯದೆ ಮೀಸಲಾಗರ್ಪಿಸಬಲ್ಲಡೆ
ಕೂಡಿಕೊಂಡಿಪ್ಪ, ನಮ್ಮ ಕೂಡಲಸಂಗಮದೇವ. || ೪೯ ||

೮೩೮

ಆತ್ಮ ಲಿಂಗ, ಪರಮಾತ್ಮ ಜಂಗಮು,
ತನು ಮಧ್ಯೆ ಪ್ರಸಾದವಾಯಿತ್ತು,
ನಿಶ್ಚಿಂತ ನಿವಾಸವಾಯಿತ್ತು.
ಕೂಡಲಸಂಗನ ಶರಣರ ಸಂಗದಿಂದ
ನಿಶ್ಚಿಂತ ನಿವಾಸವಾಯಿತ್ತು. || ೫೦ ||

೮೩೯

ಲೋಹ ಪರುಷವ ಮುಟ್ಟೂದಲ್ಲದೆ
ಪರುಷ ಪರುಷವ ಮುಟ್ಟೂದೆ ಅಯ್ಯಾ?
ಅಂಗವಿಡಿದಂಗೆ ಲಿಂಗವುಂಟಲ್ಲದೆ, ಲಿಂಗವಿಡಿದಂಗೆ ಲಿಂಗವುಂಟೆ?
ಅಣೋರಣೀಯಾನ್ ಮಹತೋ ಮಹೀಯಾನ್
ಹಿರಿದಕ್ಕೆ ಹಿರಿದು, ಕಿರಿದಿಂಗೆ ಕಿರಿದು, ವಾಙ್ಮನಕ್ಕಗೋಚರ
ಕೂಡಲಸಂಗಮದೇವಾ
ಸ್ವರೂಪು ಪ್ರಸಾದ, ನಿರೂಪು ಲಿಂಗೈಕ್ಯ. || ೫೧ ||

೮೪೦

ಜಂಗಮವೆ ಲಿಂಗವೆನಗೆ, ಜಂಗಮವೆ ಪ್ರಾಣವೆನಗೆ.
ಕೂಡಲಸಂಗಮದೇವಯ್ಯಾ,
ಎನಗೆಯೂ ನಿನಗೆಯೂ ಜಂಗಮಪ್ರಸಾದವೆ ಪ್ರಾಣ. || ೪೪ ||

೮೪೧

ಅಯ್ಯಾ! ನೀನೆಂದಡೆ ಏನೆಂಬೆನು?
ನಿನ್ನ ಹಂಗೇನು ಹರಿಯೇನು?
ನಿನ್ನ ಮುಖದಲ್ಲಿ ಒಂದಗುಳು ಸವೆಯದು.
ನಿನ್ನ ಪ್ರಸಾದವ ಕೊಂಡೆನ್ನ ಭವಕ್ಕೆ ಬೀಜವಾಯಿತ್ತು.
ಜಂಗಮವೆ ಲಿಂಗವೆಂದು ಒಕ್ಕುದ ಕೊಂಡಡೆ
ಎನ್ನ ಭವಂ ನಾಸ್ತಿಯಾಯಿತ್ತು ಕೂಡಲಸಂಗಮದೇವಾ. || ೪೫ ||

೮೪೨

ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯಾ,
ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯಾ,
ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯಾ,
ಪರುಷದ ಬಲದಿಂದ ಅವಲೋಹದ ಕೇಡು ನೋಡಯ್ಯಾ,
ಕೂಡಲಸಂಗನ ಶರಣರ ಅನುಭಾವದ ಬಲದಿಂದ
ಎನ್ನ ಭವದ ಕೇಡು ನೋಡಯ್ಯಾ. || ೪೬ ||

೮೪೩

ಆದ್ಯರ ವಚನ ಆದ್ಯರಿಗಾಯಿತ್ತು,
ವೇದ್ಯರಿಗಲ್ಲದೆ ಸಾಧ್ಯವಾಗದು.
ಕೂಡಲಸಂಗಮದೇವಾ
ನಿಮ್ಮ ಅನುಭಾವದಿಂದ ಎನ್ನ ಭವಂ ನಾಸ್ತಿಯಾಯಿತ್ತು. || ೪೭ ||

೮೪೪

ಅಸಂಬಂಧ ಸಂಬಂಧವಾಯಿತ್ತು, ಲಿಂಗಸಾರಾಯರ ಸನುಮತದಿಂದ.
ಉತ್ತಮ ಮಧ್ಯಮವ ಕೆಡಿಸಿತ್ತು, ಏಕೋ ಸತಿಪತಿಗುಣದಿಂದ,
ಗರುವರ ಗರುವತನ ಕೂಡಲಸಂಗಯ್ಯನ ಅನುಭಾವದಿಂದ. || ೪೮ ||

# ಪ್ರಾಣಲಿಂಗಿಯ ಶರಣಸ್ಥಲ

೮೪೫

ಶರಣಸನ್ನಿಹಿತ ಐಕ್ಯವಹಲ್ಲಿ
ಹರಿಬ್ರಹ್ಮಾದಿಗಳು ಮೊದಲಾದ ತೆತ್ತೀಸಾದಿ ದೇವರ್ಕಳುಘೇ ಉಘೇ ಎನ್ನುತ್ತಿರಲು
ಐಕ್ಯ ಬಸವಣ್ಣಂಗೆ ಠಾವಾವುದಯ್ಯಾ ಎಂದಡೆ:
ಅಂಗದ ಬಲದಲ್ಲಿ ಬ್ರಹ್ಮನ ಸ್ಥಾನ,
ಎಡದಲ್ಲಿ ನಾರಾಯಣನ ಸ್ಥಾನ, ಒಲ್ಲೆನಯ್ಯಾ.
ಕೊರಳು ಗರಳದ ಸ್ಥಾನ, ಬಾಯಿ ಅಪ್ಪುವಿನ ಸ್ಥಾನ,
ನಾಸಿಕ ವಾಯುವಿನ ಸ್ಥಾನ, ಕಣ್ಗಳು ಅಗ್ನಿಯ ಸ್ಥಾನ,
ಜಡೆ ಗಂಗೆಯ ಸ್ಥಾನ, ನೊಸಲು ಚಂದ್ರನ ಸ್ಥಾನ,
ಓಂದು ಸೂರ್ಯನ ಸ್ಥಾನ, ಚರಣಂಗಳು ಅಷ್ಟದಿಕ್ಪಾಲಕರ ಸ್ಥಾನ,
ಗುಹ್ಯ ಕಾಮನ ಸ್ಥಾನ,
ಹಸ್ತಂಗಳು ಕಪಾಲ ಖಟ್ವಾಂಗ ತ್ರಿಶೂಲ ಡಮರುಗ ಸ್ಥಾನ,
ದೇಹ ರುಂಡಮಾಲೆಯ ಸ್ಥಾನ, ಕರ್ಣ ನಾಗೇಂದ್ರನ ಸ್ಥಾನ,
ಇಂತೀ ಸ್ಥಾನಂಗಳ ನಾನೊಲ್ಲೆನಯ್ಯಾ.
ಹೃದಯಮಧ್ಯದ ಅಂತರಾಳದ
ಏಕಪೀಠದ ಸಿಂಹಾಸನವ ತೆರಪ ಕೊಡು
ಕೂಡಲಸಂಗಮದೇವಾ. || ೪೯ ||

೮೪೬

ನೀನೊಲಿದಡೆ ಒಲಿ, ಒಲಿಯದಿದ್ದಡೆ ಸಮವೇದಿಸಿಕೊಳ್ಳಯ್ಯಾ,
ಲಿಂಗದ ಬೆಳಗನೊಳಕೊಂಡು ಸಮವೇದಿಸಿಕೊಳ್ಳಯ್ಯಾ.
ಕೂಡಲಸಂಗಮದೇವನಲ್ಲಿ ತದ್ಗತನಾದೆನಯ್ಯಾ. || ೫೦ ||

೮೪೭

ಮಾಡುವರಿಲ್ಲ, ನೀ ಮಾಡದೆ ನಿಲ ಸಾಲೆ.
ಬೇಡುವರಿಲ್ಲ, ನೀ ಬೇಡದೆ ನಿಲ ಸಾಲೆ.
ಕೂಡುವರಿಲ್ಲ, ನೀ ಕೂಡದೆ ನಿಲ ಸಾಲೆ.
ಕೂಡಲಸಂಗಮದೇವ
ತಾನು ತಾನಾಗಿ ನೀ ನೋಡದೆ ನಿಲ ಸಾಲೆ. || ೫೧ ||

೮೪೮

ಆಲಿಕಲ್ಲ ಹರಳಿನಂತೆ, ಅರಗಿನ ಪುತ್ಥಳಿಯಂತೆ
ತನು ಕರಗಿ ನೆರೆವ ಸುಖವ ನಾನೇನೆಂಬೆ.
ಕಡೆಗೋಡಿವರಿದುವೆನಗಯ್ಯಾ ನಯನದ ಸುಖಜಲಂಗಳು.
ನಮ್ಮ ಕೂಡಲಸಂಗಮದೇವರ
ಮುಟ್ಟಿ ನೆರೆವ ಸುಖವ ನಾನೇನೆಂಬೆ. ॥ ೫೨ ॥

೮೪೯

ನಾಲಗೆ ತಾಗಿದ ರುಚಿಗೆ ಮನವೇ ಸಾಕ್ಷಿ, ಸಾಲದೆ ಅಯ್ಯಾ?
ಮಾಲೆಗಾರನ ಕೇಳಿ ನನೆಯರಳೂದೆ?
ಆಗಮವನಿದಿರಿಂಗೆ ತೋರೂದು ಆಚಾರವೆ ಅಯ್ಯಾ?
ನಮ್ಮ ಕೂಡಲಸಂಗನ ಕೂಡಿದ ಕೂಟದ ಕರುಳ ಕಲೆಯನಿದಿರಿಂಗೆ
ತೋರೂದು ಆಚಾರವೆ ಅಯ್ಯಾ? ॥ ೫೩ ॥

## ಪ್ರಾಣಲಿಂಗಿಯ ಐಕ್ಯಸ್ಥಲ

೮೫೦

ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ.
ನಮ್ಮ ನಲ್ಲ ಸುಳಿಯಲಿಲ್ಲ, ಸುಳಿದು ಸಿಂಗಾರವ ಮಾಡಲಿಲ್ಲ,
ಕೂಡಲಸಂಗಮದೇವನು ತನ್ನೊಳಗೆ ಬೈಚಿಟ್ಟನಾಗಿ. ॥ ೫೪ ॥

೮೫೧

ಜ್ಞಾನದ ಗಮನದ ಸಹಜದ ಉದಯದಲ್ಲಿ ಏನೆಂದರಿಯೆನು.
ಲಿಂಗದ ಬೆಳಗು ಒಳಕೊಂಡುದಾಗಿ ಏನೆಂದರಿಯೆನು.
ಕೂಡಲಸಂಗಮದೇವನ ಧ್ಯಾನದಿಂದ ಏನೊದರಿಯೆನು. ॥ ೫೫ ॥

೮೫೨

ಕಾಯವೆಂಬ ಘಟಕ್ಕೆ ಚೈತನ್ಯವೆ ಸಯದಾನ,
ಸಮತೆ ಎಂಬ ಜಲ ಕರಣಾದಿಗಳೆ ಶ್ರವಣ.

ಜ್ಞಾನವೆಂಬ ಅಗ್ನಿಯನಿಕ್ಕಿ
ಮತಿಯೆಂಬ ಸಟ್ಟುಕದಲ್ಲಿ ಘಟ್ಟಿಸಿ, ಪಾಕಕ್ಕೆ ತಂದು,
ಭಾವದಲ್ಲಿ ಕುಳ್ಳಿರಿಸಿ ಪರಿಣಾಮದೋಗರವ ನೀಡಿದಡೆ
ಕೂಡಲಸಂಗಮದೇವಂಗಾರೋಗಣೆಯಾಯಿತ್ತು. ॥ ೫೬ ॥

೮೫೩

ಕಂಗಳು ತುಂಬಿದ ಬಳಿಕ ನೋಡಲಿಲ್ಲ,
ಕಿವಿಗಳು ತುಂಬಿದ ಬಳಿಕ ಕೇಳಲಿಲ್ಲ,
ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ,
ಮನ ತುಂಬಿದ ಬಳಿಕ ನೆನೆಯಲಿಲ್ಲ,
ಮಹಂತ ಕೂಡಲಸಂಗಮದೇವನ. ॥ ೫೭ ॥

೮೫೪

ಅಡಿಗಡಿಗೆ ಸ್ಥಾನನಿಧಿ, ಅಡಿಗಡಿಗೆ ದಿವ್ಯಕ್ಷೇತ್ರ,
ಅಡಿಗಡಿಗೆ ನಿಧಿಯು ನಿಧಾನ ನೋಡಯ್ಯಾ!
ಆತನ ಇರವೆ ವಾರಣಾಸಿ, ಅವಿಮುಕ್ತಿಕ್ಷೇತ್ರ,
ಕೂಡಲಸಂಗನ ಶರಣ ಸ್ವತಂತ್ರನಾಗಿ. ॥ ೫೮ ॥



## ಶರಣನ ಜ್ಞಾನಿಸ್ಥಲ

೮೫೫

ಧನದಲ್ಲಿ ಶುಚಿ, ಪ್ರಾಣದಲ್ಲಿ ನಿರ್ಭಯ:
ಇದಾವಂಗಳವಡುವುದಯ್ಯಾ?
ನಿಧಾನ ತಪ್ಪಿಬಂದಡೆ ಒಲ್ಲೆನೆಂಬವರಿಲ್ಲ,
ಪ್ರಮಾದವಶ ಬಂದಡೆ ಹುಸಿಯೆನೆಂಬವರಿಲ್ಲ.
ನಿರಾಶೆ, ನಿರ್ಭಯ ಕೂಡಲಸಂಗಮದೇವಾ
ನೀನೊಲಿದ ಶರಣಂಗಲ್ಲದಿಲ್ಲ.

೮೫೬

ಶರಣಸನ್ಮತವಪ್ಪ ನಿಜಗುಣಭರಿತನಪ್ಪಡೆ,
ಸತ್ವ ರಜ ತಮ ಕ್ರೋಧ ಬಿಡದನ್ನಕ್ಕ ಅನುಭಾವವೆಲ್ಲಿಯದೊ?
ಆತ್ಮಸ್ತುತಿ ಪರನಿಂದಯ ಬಿಡದನ್ನಕ್ಕ,
ಅರಿಷಡ್ವರ್ಗ ದಶವಾಯು ಬೆರೆಸಿಪ್ಪ
ಕಳಂಕವಪ್ಪ ತನುವ ಬಿಡದನ್ನಕ್ಕ.
ಸಂಸಾರ ಮಾದಲ್ಲದೆ
ಶರಣಸಜ್ಜನಿಕೆ, ಸಮಯಾಚಾರ, ನಿಜವ್ರತವು
ದುರಾಚಾರಿಗಳಿಗಳವಡದು,
ನಮ್ಮ ಕೂಡಲಸಂಗನ ಶರಣರಿಗಲ್ಲದೆ.

೮೫೭

ಹಲಬರ ನುಂಗಿದ ಹಾವಿಂಗೆ ತಲೆ ಬಾಲವಿಲ್ಲ ನೋಡಾ:
ಕೊಲುವುದು ತ್ರೈಜಗವೆಲ್ಲವ, ತನಗೆ ಬೇರೆ ಪ್ರಳಯವಿಲ್ಲ.
ನಾಕಡಿಯನ್ನೈದೂದು, ಲೋಕದ ಕಡೆಯನೆ ಕಾಬುದು,
ಸೂಕ್ಷ್ಮಪಥದಲ್ಲಿ ನಡೆವುದು, ತನಗೆ ಬೇರೆ ಒಡಲಿಲ್ಲ.
ಅಹಮೆಂಬ ಗಾರುಡಿಗನ ನುಂಗಿತ್ತು
ಕೂಡಲಸಂಗನ ಶರಣರಲ್ಲದುಳಿದವರ.

೮೫೮

ಆದಿತ್ಯ ಸೋಮರು ಆಗಿ ಹೋಗುತ್ತ ಇದ್ದಾರು.
ಬ್ರಹ್ಮ ಪ್ರಳಯಕ್ಕೊಳಗಾದ, ಹರಿಯ ಸಿಂಹಾಸನವಡಗಿತ್ತು.
ಅತೋ ನಾಸ್ತಿ, ಇತೋ ನಾಸ್ತಿ.
ರೋಮಜರೆಂಬವರು ಸಿಟ್ಟುಗುಟ್ಟಿ ತರುಮರನಡಿಯಲ್ಲಿದ್ದರು.
ಮಾರ್ಕಂಡೇಯಮಹಾಮುನಿ ಸ್ವೇಚ್ಛಾರಮಣ ಎನಿಸಿಕೊಂಡನಲ್ಲದೆ
ಲಿಂಗದ ನಿಜವನರಿಯನು.
ಇದು ಕಾರಣ ಕೂಡಲಸಂಗಮದೇವಾ,
ನೀವು ಮಾಡಿದ ಬಯಲು ಭಕ್ಷಿಸಿತ್ತು, ಅನಂತ ಹಿರಿಯರನು. ॥ ೬ ॥

೮೫೯

ಆದಿಯಲ್ಲಿ ಶಿವಬೀಜವಲ್ಲದವರಿಗೆ ವೇದ್ಯವಾಗದು ಶಿವಜ್ಞಾನ, ಶಿವಭಕ್ತಿ.
ಲಿಂಗಸ್ಥಲವಳವಡದು, ಜಂಗಮಸ್ಥಲವಳವಡದು,
ಪಾದೋದಕ ಪ್ರಸಾದಸ್ಥಲವಳವಡದು.
ನರಕದಲ್ಲಿ ಬೀಳುವ ಕರ್ಮಿಗಳಿಗೆ
ಕೂಡಲಸಂಗನ ಶರಣರ ಅನುಭಾವ ನೆಲೆಗೊಳ್ಳದು. ॥ ೫ ॥

೮೬೦

ಮರುಳ ಕಂಡ ಕನಸಿನ ಪರಿಯಂತೆ ಶಿವಾಚಾರ,
ಕರಿಯು ಕನ್ನಡಿಯೊಳಗಡಗಿದಂತಯ್ಯಾ!
ಗುಣ ಅವಗುಣಯೊಡನಾಡಿದಡೆ
ಅದೆ ಆತನ ಕರ್ಮದ ಫಲ ನೋಡಾ!
ಕೂಡಲಸಂಗನ ಶರಣರ ಅನುಭಾವ
ಭವದುಃಖಿಗಳಿಗೆ ವೇದ್ಯವಾಗದಯ್ಯಾ. ॥ ೬ ॥

೮೬೧

ಉಂಬ ಬಟ್ಟಲು ಬೇರೆ ಕಂಚಲ್ಲ, ನೋಡುವ ದರ್ಪಣ ಬೇರೆ ಕಂಚಲ್ಲ.
ಭಾಂಡ ಒಂದೆ ಭಾಜನ ಒಂದೆ, ಬೆಳಗೆ ಕನ್ನಡಿಯೆನಿಸಿತ್ತಯ್ಯಾ.
ಅರಿದಡೆ ಶರಣ, ಮರೆದಡೆ ಮಾನವ,
ಮರೆಯದೆ ಪೂಜಿಸು ಕೂಡಲಸಂಗನ. ॥ ೭ ॥

೮೬೨

ಕೆರೆ ಹಳ್ಳ ಬಾವಿಗಳು ಮೈದೆಗೆದಡೆ
ಗುಳ್ಳೆ ಗೊರಜೆ ಚಿಪ್ಪು ಕಾಣಬಹುದು.
ವಾರುಧಿ ಮೈದೆಗೆದಡೆ
ರತ್ನಮುತ್ತುಗಳ ಕಾಣಬಹುದು.
ಕೂಡಲಸಂಗನ ಶರಣರು ಮನದೆರೆದು ಮಾತನಾಡಿದಡೆ
ಲಿಂಗವ ಕಾಣಬಹುದು. ॥ ೮ ॥

೮೬೩

ಪುಣ್ಯಪಾಪವೆಂಬ ಉಭಯಕರ್ಮವನಾರು ಬಲ್ಲರಯ್ಯಾ?
ಇವನಾರುಂಬರು?
ಕಾಯ ತಾನುಬಂಡೆ ಕಾಯ ತಾ ಮಣ್ಣು,
ಜೀವ ತಾನುಂಬಡೆ ಜೀವ ತಾ ಬಯಲು.
ಈ ಉಭಯನಿರ್ಣಯವ ಕೂಡಲಸಂಗಮದೇವಾ,
ನಿಮ್ಮ ಶರಣ ಬಲ್ಲ. ॥ ೯ ॥

೮೬೪

ನಾರುಳಿಯ ಹಣಿದವನಾರಾದಡೆಯೂ ಆಡರೆ?
ನಾರುಳಿದಡೆ ಮುಂದೆ ಅಂಕುರಿತ ಫಲ ತಪ್ಪದು.
ಮಾಡುವನ್ನಕ್ಕ ಫಲದಾಯಕ!
ಮಾಟವರತು ನಿಮ್ಮಲ್ಲಿ ಸಯವಾದಡೆ
ಆತನೆ ಅಚ್ಚ ಶರಣನಯ್ಯಾ, ಕೂಡಲಸಂಗಮದೇವಾ. ॥ ೧೦ ॥

೮೬೫

ಭಕ್ತನ ಮಠವೆಂದು ಜಂಗಮ ನಡೆದು ಬಂದಲ್ಲಿ,
ಆ ಭಕ್ತನು ಕಾಣುತ್ತ, ಆಸನ ತ್ಯಜತೆಯ ಮಾಡುತ್ತ,
ಕೊಂಕುತ್ತ, ಕೈಮುಗಿದು ನಿಂದಿರ್ದು, ಬಾಗಿ ಬಳುಕುತ್ತ,
'ಬಿಜಯಂ ಮಾಡಿ, ದೇವಾ' ಎಂದು ಕರೆದು, ಕುಳ್ಳಿರಿಸಿ,
ಪಾದಾರ್ಚನೆಯಂ ಮಾಡಿ, ಪಾದೋದಕಮಂ ಕೊಂಡು,
ವಿಭೂತಿ–ವೀಳೆಯಮಂ ಕೊಟ್ಟು,
ಕಂಗಳು ತುಂಬಿ ನಿರೀಕ್ಷಿಸಿ, ಶ್ರೋತ್ರ ತುಂಬಿ ಹಾರೈಸಿ,

ಬಾಯಿ ತುಂಬಿ ಮಾತಾಡಿ, 'ಏಗೂದು? ಏ ಬೆಸನೆ'ಂದು
ತನು ಕರಗಿ ಮನ ಕರಗಿ ನೋಡಿ, ಮಾಡೂದು ಭಕ್ತಿಸ್ಥಲ.
ಬಡವನಾಗಲಿ, ಬಲ್ಲಿದನಾಗಲಿ, ಇನಿತು ಮುಖ್ಯವಾಗಿ
ಮಾಡಿಸಿಕೊಂಬುದು ಜಂಗಮಸ್ಥಲ.
ಈ ಎರಡೊಂದಾದ ಘನವನಂತಿಂತೆಂದುಪಮಿಸಬಾರದಂತಿರಲಿ!
ಇನಿತಲ್ಲದೆ ಮಾಡಿದ ಮಾಟ ಭಕ್ತಿಸ್ಥಲಕ್ಕೆ ಸಲ್ಲದು,
ಫಲದಾಯಕ[ವೈ]ಸೆ!
ಇನಿತಲ್ಲದೆ ಮಾಡಿಸಿಕೊಂಬುದು ಜಂಗಮಸ್ಥಲಕ್ಕೆ ಸಲ್ಲದು,
ಉಪಜೀವಿತ[ವೈ]ಸೆ.
ಈ ಎರಡಕ್ಕೆಯೂ ಭವ ಹಿಂಗದು, ಕಾಣಾ,
ಕೂಡಲಸಂಗಮದೇವಾ. || ೧೧ ||

೮೬೬

ಲಿಂಗನಿಷ್ಠೆ ಪೂಜೆಯಲ್ಲಿ ಬೀಯವಾಯಿತ್ತು,
[ಜಂಗಮ]ನಿಷ್ಠೆ ತ್ಯಾಗದಲ್ಲಿ ಬೀಯವಾಯಿತ್ತು,
ಪ್ರಸಾದನಿಷ್ಠೆ ಬೆರಕೆಯಲ್ಲಿ ಬೀಯವಾಗಿತ್ತು.
ಒಂದೊಂದರ ನಿಷ್ಠೆ ಅಂದಂದಿಗೆ ಬೀಯವಾಗಿತ್ತು,
ಕೂಡಲಸಂಗಮದೇವನ ಭಕ್ತಿ ತ್ರಿಜಗವನಾಳಿಗೊಂಡಿತ್ತು. || ೧೨ ||

೮೬೭

ತೆರನನರಿವುದು ಅಪೂರ್ವ, ಅರಿದು ಮರೆವುದು ಅಪೂರ್ವ,
ಕೂಡೆ ಶರಣೆಂಬುದು ಅಪೂರ್ವ.
ಕೂಡಲಸಂಗಮದೇವನ ಭಕ್ತಿ ಅಭಿಮಾನಿಯ ಜವ್ವನದಂತೆ. || ೧೩ ||

೮೬೮

ಐದು ಮಾನವ ಕುಟ್ಟಿ ಒಂದು ಮಾನವ ಮಾಡು, ಕಂಡಾ ಮದವಳಿಗೆ!
ಇದು ನಮ್ಮ ಬಾಳುವೆ, ಮದವಳಿಗೆ!
ಇದು ನಮ್ಮ ವಿಸ್ತಾರ, ಮದವಳಿಗೆ!
ಮದವಳಿಮು ನಿಜವ್ರಳಿದ ಬಳಿಕ ಅದು ಸತ್ಯ ಕಾಣಾ,
ಕೂಡಲಸಂಗಮದೇವಾ. || ೧೪ ||

೮೭೯

ಕುಲಮದವಳಿಯದನ್ನಕ್ಕ ಶರಣನಾಗಲೇಕೆ?
ವಿಧಿವಶ ಬಿಡದನ್ನಕ್ಕ ಭಕ್ತನಾಗಲೇಕೆ?
ಹಮ್ಮಿನ ಸೊಮ್ಮಿನ ಸಂಬಂಧ ಬಿಟ್ಟು
ಕಿಂಕಿಲ ಕಿಂಕಿಲ ಕಿಂಕಿಲನಾಗಿರಬೇಕು.
ಹೆಪ್ಪನೆರೆದ ಹಾಲು ಕೆಟ್ಟು ತುಪ್ಪವಪ್ಪಂತೆ ಇಪ್ಪರು
ಕೂಡಲಸಂಗಮದೇವಾ ನಿಮ್ಮ ಶರಣರು. ॥ ೧೫ ॥

೮೭೦

ಮಣ್ಣು ಮಡಕೆ ಮಣ್ಣಾಗದು ಕ್ರೀಯುಳಿದು,
ಬೆಣ್ಣೆ ಕರಗಿ ತುಪ್ಪವಾಗಿ ಮರಳಿ ಬೆಣ್ಣೆಯಾಗದು ಕ್ರೀಯುಳಿದು,
ಹೊನ್ನ ಕಬ್ಬುನವಾಗದು ಕ್ರೀಯುಳಿದು,
ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಾಗದು ಕ್ರೀಯುಳಿದು,
ಕೂಡಲಸಂಗನ ಶರಣನಾಗಿ
ಮರಳಿ ಮಾನವನಾಗ ಕ್ರೀಯುಳಿದು. ॥ ೧೬ ॥

೮೭೧

ಪೂರ್ವಜನ್ಮನಿವೃತ್ತಿಯಾಗಿ ಗುರುಕರುಣವಿಡಿದಂಗೆ
ಬಂಧನವೆಲ್ಲಿಯದೊ?
ಭವಬಂಧನವೆಲ್ಲಿಯದೊ?
ಸಂಕಲ್ಪ-ವಿಕಲ್ಪವೆಂಬ ಸಂದೇಹ ಕಳೆದುಳಿದಂಗೆ
ಕೂಡಲಸಂಗಮದೇವರ ತ್ರಿಸಂಧ್ಯಾಕಾಲದಲ್ಲಿ ಮಾಣದೆ ನೆನೆವಂಗೆ! ॥ ೧೭ ॥

೮೭೨

ಲಗ್ನವೆಲ್ಲಿಯದೊ, ವಿಘ್ನವೆಲ್ಲಿಯದೊ, ಸಂಗಯ್ಯಾ?
ದೋಷವೆಲ್ಲಿಯದೊ, ದುರಿತವೆಲ್ಲಿಯದೊ, ಸಂಗಯ್ಯಾ?
ನಿಮ್ಮ ನೆನೆವಂಗೆ ಭವಕರ್ಮವೆಲ್ಲಿಯದೊ
ಕೂಡಲಸಂಗಯ್ಯಾ? ॥ ೧೮ ॥

## ಶರಣನ ಶರಣಸ್ಥಲ

೮೭೩

ಶರಣ ನಿದ್ರೆಗೈದಡೆ ಜಪ ಕಾಣಿರೊ,
ಶರಣನೆದ್ದು ಕುಳಿತಡೆ ಶಿವರಾತ್ರಿ ಕಾಣಿರೊ,
ಶರಣ ನಡೆದುದೆ ಪಾವನ ಕಾಣಿರೊ,
ಶರಣ ನುಡಿದುದೆ ಶಿವತತ್ವ ಕಾಣಿರೊ,
ಕೂಡಲಸಂಗನ ಶರಣನ
ಕಾಯವೆ ಕೈಲಾಸ ಕಾಣಿರೊ. || ೧೯ ||

೮೭೪

ಉಪಮಿಸಬಾರದ ಉಪಮಾತೀತರು,
ಕಾಲಕರ್ಮರಹಿತರು, ಭವವಿರಹಿತರು,
ಕೂಡಲಸಂಗಮದೇವಾ, ನಿಮ್ಮ ಶರಣರು. || ೨೦ ||

೮೭೫

ಭವಕ್ಕೆ ಹುಟ್ಟುವನಲ್ಲ, ಸಂದೇಹ ಸೂತಕಿಯಲ್ಲ,
ಆಕಾರ ನಿರಾಕಾರನಲ್ಲ ನೋಡಯ್ಯಾ.
ಕಾಯವಂಚಕನಲ್ಲ, ಜೀವವಂಚಕನಲ್ಲ,
ಶಂಕೆಯಿಲ್ಲದ ಮಹಾಮಹಿಮ ನೋಡಯ್ಯಾ.
ಕೂಡಲಸಂಗನ ಶರಣನುಪಮಾತೀತ, ನೋಡಯ್ಯಾ. || ೨೧ ||

೮೭೬

ಬ್ರಹ್ಮಂಗೆ ವಾಕ್ಪರುಷ, ವಿಷ್ಣುವಿಂಗೆ ನಯನಪರುಷ,
ರುದ್ರಂಗೆ ಹಸ್ತಪರುಷ,
ನಮ್ಮ ಕೂಡಲಸಂಗನ ಶರಣಂಗೆ ಪಾದವೇ ಪರುಷ! || ೨೨ ||

೮೭೭

ಸಮುದ್ರ ಘನವೆಂಬೆನೆ? ಧರೆಯ ಮೇಲಡಗಿತ್ತು,
ಧರೆ ಘನವೆಂಬೆನೆ? ನಾಗೇಂದ್ರನ ಫಣಾಮಣಿಯ ಮೇಲಡಗಿತ್ತು,

ನಾಗೇಂದ್ರನ ಘನವೆಂಬೆನೆ? ಪಾರ್ವತಿಯ ಕಿರುಕುಣಿಕೆಯ ಮುದ್ರಿಕೆಯಾಯಿತ್ತು,
ಅಂತಹ ಪಾರ್ವತಿ ಘನವೆಂಬೆನೆ? ಪರಮೇಶ್ವರನ ಅರ್ಧಾಂಗಿಯಾದಳು,
ಅಂತಹ ಪರಮೇಶ್ವರ ಘನವೆಂಬೆನೆ? ನಮ್ಮ ಕೂಡಲಸಂಗನ ಶರಣರ
ಮನದ ಕೊನೆಯ ಮೊನೆಯ ಮೇಲಡಗಿದನು. ॥ ೨೩ ॥

೮೭೮

ಆಚಾರಲಿಂಗವಿಡಿದು ಅನುಭಾವಲಿಂಗಸಿದ್ಧಿ,
ಅನುಭಾವಲಿಂಗವಿಡಿದು ಮಾರ್ಗಕ್ರೀಲಿಂಗಸಿದ್ಧಿ,
ಮಾರ್ಗಕ್ರೀಲಿಂಗವಿಡಿದು ಮೀರಿದಕ್ರೀಲಿಂಗಸಿದ್ಧಿ,
ಮೀರಿದ ಕ್ರೀಲಿಂಗವಿಡಿದು ಕ್ರಿಯಾನಿಷ್ಪತ್ತಿಲಿಂಗಸಿದ್ಧಿ,
ಇದು ಕಾರಣ, ಕೂಡಲಸಂಗಮದೇವಾ ಲಿಂಗವಿಡಿದು ಲಿಂಗಸಿದ್ಧಿ. ॥ ೨೪ ॥

೮೭೯

ನೆಲನೊಂದೆ: ಹೊಲಗೇರಿ ಶಿವಾಲಯಕ್ಕೆ,
ಜಲವೊಂದೆ: ಶೌಚಾಚಮನಕ್ಕೆ,
ಕುಲವೊಂದೆ ತನ್ನ ತಾನರಿದವಂಗೆ,
ಫಲವೊಂದೆ ಷಡುದರುಶನ ಮುಕ್ತಿಗೆ,
ನಿಲವೊಂದೆ ಕೂಡಲಸಂಗಮದೇವಾ, ನಿಮ್ಮನರಿದವಂಗೆ. ॥ ೨೫ ॥

## ಶರಣನ ಭಕ್ತಸ್ಥಲ

೮೮೦

ಮಧ್ಯಪಿಂಡಂಗಳೆಲ್ಲವೂ ಶಿವಸಿದ್ಧಿಯನರಿಯವು,
ಪೂರ್ವಪಿಂಡಂಗಳೆಲ್ಲವೂ ಶಿವನಾದ್ಯಂತವನರಿಯವು,
ಕಾಲಪಿಂಡಗಳೆಲ್ಲವೂ ಶಿವನ ನಿಲುಕಡೆಯನರಿಯವು
ಕಾಲಚಕ್ರದೊಳಗಾದವೆಲ್ಲವು.
ಸಂಶಯಪಿಂಡಂಗಳೆಲ್ಲವ ಮರೆದು
ನಿಮ್ಮ ಶರಣರ ಸೇವೆಯಲ್ಲಿರಿಸಯ್ಯಾ, ಕೂಡಲಸಂಗಮದೇವಾ. ॥ ೨೬ ॥

೮೮೧

ಪರಮತತ್ವದ ನಿಜಸಂಯುಕ್ತರ,
ಆನು ನೀನೆಂಬ ಶಬ್ದಸುಖಿಗಳ ತೋರಾ ಎನಗೆ.
ಮಹಾನುಭಾವರ ತೋರಾ ಎನಗೆ.
ಲಿಂಗೈಕ್ಯರ, ಲಿಂಗಸುಖಿಗಳ, ಲಿಂಗಗೂಡಾಗಿಪ್ಪರ,
ಲಿಂಗಾಭಿಮಾನಿಗಳ ತೋರಾ ಎನಗೆ.
ಅಹೋರಾತ್ರಿ ನಿಮ್ಮ ಶರಣರ ಸೇವೆಯಲ್ಲಿರಿಸು
ಕೂಡಲಸಂಗಮದೇವಾ. || ೨೭ ||

೮೮೨

ಅಯ್ಯಾ, ಸಜ್ಜನ ಸದ್ಭಾವರ ಸಂಗದಿಂದ
ಮಹಾನುಭಾವರ ಕಾಣಬಹುದಯ್ಯಾ.
ಮಹಾನುಭಾವರ ಸಂಗದಿಂದ
ಶ್ರೀಗುರುವನರಿಯಬಹುದು.
ಲಿಂಗವನರಿಯಬಹುದು, ಜಂಗಮವನರಿಯಬಹುದು
ಪ್ರಸಾದವನರಿಯಬಹುದು, ತನ್ನ ತಾನರಿಯಬಹುದು.
ಇದು ಕಾರಣ ಸದ್ಭಕ್ತರ ಸಂಗವನೆ ಕರುಣಿಸು
ಕೂಡಲಸಂಗಮದೇವಾ, ನಿಮ್ಮ ಧರ್ಮ. || ೨೮ ||

೮೮೩

ಮರಮರ ಮಥನದಿಂದ ಅಗ್ನಿ ಹುಟ್ಟಿ
ಆ ಮರನೆಲ್ಲವ ಸುಡದಿಪ್ಪುದೆ?
ಮಹಾನುಭಾವರ ಸಂಗದಿಂದ ಜ್ಞಾನಾಗ್ನಿ ಹುಟ್ಟಿ
ಎನ್ನ ತನುಗುಣವೆಲ್ಲವ ಸುಡದಿಪ್ಪುದೆ?
ಇದು ಕಾರಣ, ಮಹಾನುಭಾವರ ತೋರಿಸು
ಕೂಡಲಸಂಗಮದೇವಾ. || ೨೯ ||

೮೮೪

ಅರಿದುದ ಅರಿಯಲೊಲ್ಲದು, ಅದೆಂತಯ್ಯಾ?
ಮರೆದುದ ಮರೆಯಲೊಲ್ಲದು, ಅದೆಂತಯ್ಯಾ?

ಅರಿದು ಮರೆದ ಮನವ
ಕೂಡಲಸಂಗಯ್ಯ ಬಲ್ಲ. || ೩೦ ||

೮೮೫

ಮೊಸಲು ಬೀಸರವಾಗದ ಪರಿಯ ನೋಡಾ:
ಕಾಲು ತಾಗಿದ ಅಗ್ಘವಣಿ, ಕೈಮುಟ್ಟಿದ ಅರ್ಪಿತ,
ಮನಮುಟ್ಟಿದ ಆರೋಗಣೆಯನೆಂತು ಘನವೆಂಬೆನಯ್ಯಾ?
ಬಂದ ಪರಿಯಲಿ ಪರಿಣಾಮಿಸಿ, ನಿಂದ ಪರಿಯಲಿ ನಿಜಮಾಡಿ,
ಆನೆಂದ ಪರಿಯಲಿ ಕೈಕೋ ಕೂಡಲಸಂಗಮದೇವಾ. || ೩೧ ||

೮೮೬

ಹಾಲೆಂಜಲು ಪೇಯನ, ಉದಕವೆಂಜಲು ಮತ್ಸ್ಯದ,
ಪುಷ್ಪವೆಂಜಲು ತುಂಬಿಯ.
ಎಂತು ಪೂಜಿಸುವೆ ಶಿವಶಿವಾ, ಎಂತು ಪೂಜಿಸುವೆ?
ಈ ಎಂಜಲನತಿಗಳೆವಡೆ ಎನ್ನಳವಲ್ಲ.
ಬಂದುದ ಕೈಕೋ ಕೂಡಲಸಂಗಮದೇವಾ. || ೩೨ ||

೮೮೭

ಶುದ್ಧವಾಯಿತ್ತೆಂಬೆನೆ? ಸುಯಿಧಾನಿ ನಾನಲ್ಲ,
ಅನುವಾಯಿತ್ತೆಂಬೆನೆ? ಅವಧಾನಿ ನಾನಲ್ಲ,
ಸುಯಿಧಾನ ಅವಧಾನ ಅರ್ಪಿತವ ನಾನರಿಯೆ.
ಇದ್ದ ಪರಿಯಲಿ ನೀಡಿದಡೆ, ಬಂದ ಪರಿಯಲಿ ಕೈಕೋ
ಕೂಡಲಸಂಗಮದೇವಾ. || ೩೩ ||

೮೮೮

ಪಾದಾರ್ಚನೆಯ ಮಾಡುವೆನಯ್ಯಾ, ಪಾದೋದಕದ ಹಂಗಿಗೆ.
ಶರಣಾರ್ಥಿಯೆಂಬೆನಯ್ಯಾ ಒಕ್ಕುದ ಕೊಂಬ ಹಂಗಿಗೆ.
ಎಡೆಯಾಟ ಕಡಬಡ್ಡಿಯ ಕೊಟ್ಟು ಕೆಟ್ಟಿತ್ತು ನೋಡಾ, ಭಕ್ತಿ.
ಕೂಡಲಸಂಗನ ಶರಣರ ನಿಲವನರಿಯದೆ,
ಮುಯ್ಯಿಗೆ ಮುಯ್ಯಾಗಿ ಕೆಟ್ಟಿತ್ತಯ್ಯಾ ಎನ್ನ ಭಕ್ತಿ. || ೩೪ ||

೮೮೯

'ಯಸ್ಯ ಕ್ರಿಯಾ ತಸ್ಯ ಭವತಿ' ಎಂದು ಕಟ್ಟಾಚಾರದಲು ಇದ್ದು,
ನಾನು ಅನುಸರಿಸಿಕೊಂಡು ನಡೆವನ್ನಕ್ಕ ಕರ್ಮಕಾಂಡಿಯಲ್ಲ.
ಉತ್ಪತ್ತಿ-ಸ್ಥಿತಿ-ಭೋಗ-ಭುಕ್ತಿ ಕಾಯವುಳ್ಳನ್ನಕ್ಕ ಭಕ್ತಿಕಾಂಡಿಯಲ್ಲ.
ಪರವು ಸಾಧ್ಯವಾಯಿತ್ತೆಂದು ಕ್ರೀಯೆಲ್ಲವ ಮೀರಿ ನಡೆವನು.
ಪರತತ್ವವನರಿವೆಹೆನೆಂಬನ್ನಕ್ಕ ಜ್ಞಾನಕಾಂಡಿಯಲ್ಲ.
ಇನ್ನು ಕರ್ಮಕಾಂಡ, ಭಕ್ತಿಕಾಂಡ, ಜ್ಞಾನಕಾಂಡ
ಈ ತ್ರಿವಿಧದಲ್ಲಿ ವಂಚಕನಾದಡೆ
ಈಸು ವಿಧದೊಳಗೆ ಅಂಗವಿಲ್ಲ,
ಮೇಲೆ ಸತ್ಪುರುಷರ ಸಂಗವಿಲ್ಲ,
ಯುಕ್ತಿಯಿಲ್ಲ, ಭಕ್ತಿಯೆಂತಹುದಯ್ಯಾ?
ಬಲ್ಲವರ ಬೆಸಗೊಂಡಡೆ ಎನ್ನ ಬಿಮ್ಮು ಕೆಟ್ಟಿಹುದೆಂದು
ಮೆಲ್ಲನೆ ಪ್ರಸಂಗದಿಂದ ತಿಳಿದು ನೋಡುವೆ.
ಕೂಡಲಸಂಗಮದೇವಾ,
ಎನ್ನ ಗುಣವ ನೋಡದೆ
ಶಿವರಾತ್ರಿಯ ಸುಕಣ್ಣಗಳಿಗೆ ಕರುಣಿಸಿದಂತೆ
ಎನಗೆ ಕೃಪೆಮಾಡಯ್ಯಾ. ೩೫ ||

೮೯೦

ಕಳಾಬಿಂದು ವಟಾಮುಖಿಯೆಂಬ ಹೆಂಗೂಸಿನ ಕೈಯಲು
ಜಲಾಕಾರವೆಂಬ ಗಡಿಗೆಯಿದ್ದಿತ್ತು.
ಆ ಗಡಿಗೆಯಲ್ಲಿ ಚೆನ್ನಬಸವಣ್ಣ ನೀರ ತಂದ.
ಮಡಿವಾಳಯ್ಯ ಸಯದಾನವ ತಂದ,
ಇದರ ಒಲೆಯುಡಿಯನುರುಹಿ ಕೊಡಾ ಪ್ರಭುವೆ
ಕೂಡಲಸಂಗಮದೇವಾ. || ೩೬

೮೯೧

ದಿಟವ ಮಾಡಿ ಪೂಜಿಸಿದಡೆ ಸಟೆಯ ಮಾಡಿ ಕಳೆವೆ.
ಸಟೆಯ ಮಾಡಿ ಪೂಜಿಸಿದಡೆ ದಿಟವ ಮಾಡಿ ಕಳೆವೆ.
ಏನೆಂಬೆ? ಎಂತೆಂಬೆ?

ಸುಖಕ್ಕೆ ತುಂಬಿದ ದೀವಿಗೆ ಮನೆಯೆಲ್ಲವ ಸುಟ್ಟಂತೆ,
ಆನು ಮಾಡಿದ ಭಕ್ತಿ ಎನಗಿಂತಾಯಿತ್ತು, ಕೂಡಲಸಂಗಮದೇವಾ. ॥ ೩೭ ॥

೮೯೨

ಎಂಬತ್ತೆಂಟು ಪವಾಡವ ಮೆರೆದು
ಹಗರಣದ ಚೋಹದಂತಾಯಿತೆನ್ನ ಭಕ್ತಿ.
ತನುವಿನೊಳಗೆ ಮನ ಸಿಲುಕದೆ
ಮನದೊಳಗೆ ತನು ಸಿಲುಕದೆ
ತನು ಅಲ್ಲಮನಲ್ಲಿ ಸಿಲುಕಿತ್ತು,
ಮನ ಚೆನ್ನಬಸವಣ್ಣನಲ್ಲಿ ಸಿಲುಕಿತ್ತು.
ನಾನೇತರಲ್ಲಿ ನೆನೆವೆನಯ್ಯಾ, ಕೂಡಲಸಂಗಮದೇವಾ? ॥ ೩೮ ॥

೮೯೩

ಭಕ್ತನೆನಿಸುವೆನಯ್ಯಾ ಮೆಲ್ಲಮೆಲ್ಲನೆ,
ಯುಕ್ತನೆನಿಸುವೆನಯ್ಯಾ ಮೆಲ್ಲಮೆಲ್ಲನೆ,
ಸಾರಿ ಶರಣನೆನಿಸುವೆನಯ್ಯಾ ಮೆಲ್ಲಮೆಲ್ಲನೆ.
ಎಡಹುಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯಾ.
ಕೂಡಲಸಂಗಮದೇವಾ, ನಿಮ್ಮಿಂದಧಿಕನೆನಿಸುವೆನಯ್ಯಾ. ॥ ೩೯ ॥

೮೯೪

"ಬಸವ ಬಾರೈ, ಮರ್ತ್ಯಲೋಕದೊಳಗೆ ಭಕ್ತರುಂಟೆ? ಹೇಳಯ್ಯಾ"
"ಮತ್ತಾರೂ ಇಲ್ಲಯ್ಯಾ, ಮತ್ತಾರೂ ಇಲ್ಲಯ್ಯಾ, ಮತ್ತಾರೂ ಇಲ್ಲಯ್ಯಾ.
ನಾನೊಬ್ಬನೆ ಭಕ್ತನು, ಮರ್ತ್ಯಲೋಕದೊಳಗಣ ಭಕ್ತರೆಲ್ಲರೂ ಜಂಗಮ,
ಲಿಂಗ ನೀನೇ ಅಯ್ಯಾ" ಕೂಡಲಸಂಗಮದೇವಾ. ॥ ೪೦ ॥

## ಶರಣನ ಮಾಹೇಶ್ವರಸ್ಥಲ

೮೯೫

ಪರಮಪ್ರಭುವೇ, ನೀ ಮುನಿದೆನ್ನ ಮರ್ತ್ಯಲೋಕೊಳಗಿರಿಸಿದಡೆ
ಆನು ಸೈರಿಸಿದೆನಯ್ಯಾ,

ಕುಲಮದ ಛಲಮದವಿದೇನಯ್ಯಾ? ದರುಶನಭ್ರಾಂತಿಯಿದೇನಯ್ಯಾ?
ಕ್ರಿಯಾಕರ್ಮಸೂತಕವಿದೇನಯ್ಯಾ?
ಯದ್ಯಪಿ ಸ್ಯಾತ್ ತ್ರಿಕಾಲಜ್ಞಃ ತ್ರೈಲೋಕ್ಯಾಕರ್ಷಣಕ್ಷಮಃ।
ತಥಾಪಿ ಲೌಕಿಕಾಚಾರಂ ಮನಸಾಪಿ ನ ಲಂಘಯೇತ್॥
ಇಂತೆಂಬುದ ಮೀರಿದೆನಾಗಿ, ಲಿಂಗಯ್ಯಾ ನಿಮ್ಮ ನಂಬಿದೆನಯ್ಯಾ.
ಇನ್ನು ಕಲಿಯುಗದಲ್ಲಿ ಬಳಸಿದಡೆ
ಕೂಡಲಸಂಗಮದೇವಾ, ನಿಮ್ಮ ರಾಣಿವಾಸದಾಣೆ. ॥ ೪೧ ॥

೮೯೬

ತನುಮನಧನವೆಂಬ ಕನ್ನಡ ನೋಡಿಯ್ಯಾ,
ಎನ್ನದೂ ಅಲ್ಲ, ನಿನ್ನದೂ ಅಲ್ಲ, ಬರಿಯ ಭ್ರಮೆಯ ಮಾತು.
ಆ ಭ್ರಮೆಗೊಳಗಾಗೆ, ನಿಮ್ಮ ಶ್ರೀಚರಣವ ಬಿಡೆ,
ಕೂಡಲಸಂಗಮದೇವಾ. ॥ ೪೨ ॥

೮೯೭

ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣೈಕ್ಯನು
ಮೆಲ್ಲ ಮೆಲ್ಲನೆ ಆದೆಹೆನೆಂಬನ್ನಬರ ನಾನು ವಜ್ರದೇಹಿಯೆ?
ನಾನೇನು ಅಮೃತವ ಸೇವಿಸಿದೆನೆ?
ಆನು ಮರುಜವಣಿಯ ಕೊಂಡೆನೆ?
ನುಡಿದ ನುಡಿಯೊಳಗೆ ಷಡುಸ್ಥಲ ಬಂದು
ಎನ್ನ ಮನವನಿಂಬುಗೊಳ್ಳದಿದ್ದಡೆ,
ಸುಡುವೆನೀ ತನುವ ಕೂಡಲಸಂಗಮದೇವಾ. ॥ ೪೩ ॥

೮೯೮

ಕುಲಗೆಟ್ಟಡೆ ಕೆಡಬಹುದಲ್ಲದೆ ಛಲಗೆಡಬಾರದು,
ಛಲಗೆಟ್ಟಡೆ ಕೆಡಬಹುದಲ್ಲದೆ ಭಕ್ತಿಯ ಅನು ಕೆಡಬಾರದು,
ಭಕ್ತಿಯ ಅನು ಕೆಟ್ಟಡೆ ಕೆಡಬಹುದಲ್ಲದೆ ಆಯತ ಕೆಡಬಾರದಯ್ಯಾ,
ಆಯತ ಕೆಟ್ಟಡೆ ಕೆಡಬಹುದಲ್ಲದೆ ಸ್ವಾಯತ ಕೆಡಬಾರದಯ್ಯಾ.
ಎಲೆ ಕೂಡಲಸಂಗಮದೇವಯ್ಯಾ, ಮುನ್ನ ಮುಟ್ಟಿತ್ತೆ ಮುಟ್ಟಿತ್ತು,
ಇನ್ನು ಮುಟ್ಟಿದೆನಾದಡೆ ನಿಮ್ಮ ರಾಣಿವಾಸದಾಣೆ. ॥ ೪೪ ॥

೮೯೯

ಅಷ್ಟವಿಧಾರ್ಚನೆ ಷೋಡಶೋಪಚಾರವಲ್ಲದೆ
ನಿಮ್ಮ ಮುಟ್ಟಲರಿಯದರ ಕಂಡಡೆ, ಅಯ್ಯ ಎಂತೆಂಬೆನವರ?
ಆವ ಭಾವದಲ್ಲಿ, ಆವ ಜ್ಞಾನದಲ್ಲಿ, ಆವ ಮುಖದಲ್ಲಿ
ಅರಿವವರದಾರಯ್ಯಾ? ಏನೆಂಬೆ?
ನಿಮ್ಮಲ್ಲಿ ಸಮ್ಯಕ್ಕರಾದ ಸತ್ಯಶರಣರ ಕಂಡು,
ಕೂಡಲಸಂಗಮದೇವಾ, ಆವರನಯ್ಯ ಎಂಬೆನು. || ೪೫ ||

೯೦೦

ಮರನ ಹೂವ ಕೊಯ್ದು ಮರಕ್ಕೇರಿಸಿ,
ನದಿಯುದಕವ ನದಿಗರ್ಪಿತವ ಮಾಡಿ,
ಕರುವನಗಲಿಸಿ, ತಾಯ ಮರುಗಿಸಿ
ಮೊಲೆವಾಲ ಕರೆದುಣಬೇಡವೋ!
ಕೂಡಲಸಂಗಮದೇವ ಮಾಡಿದ ಮಾಯೆ,
ಪಲಬರ ಬಾಯ ಟೊಣೆದೇ ಹೋಯಿತ್ತು. || ೪೬ ||

೯೦೧

ತಾಪತ್ರಯವೆಂದಡೆ ರೂಪ ಕಾಣುತ್ತ ಕನಲಿದ,
ಕೋಪದಲ್ಲಿ ಶಿವಕಳೆಯುದ ಕರಡಗೆಯನೆ ಮುರಿದ,
ಧೂಪದ ಗುಂಡಿಗೆಯನೊಡೆದ, ದೀಪಾರತಿಯ ನಂದಿಸಿದ,
ಬಹ ಪರಿಯಾಣದೋಗರವ ತುಡುಕಿದ,
ಪಾಪಕರ್ಮಸಂಹರನು ಕೂಡಲಸಂಗಮದೇವಾ, ನಿಮ್ಮ ಶರಣ. || ೪೭ ||

೯೦೨

ಈ ಲೋಕದ ಭೀತರು, ಆ ಲೋಕದ ಕಲಿಗಳು,
ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯರೆಲ್ಲರು
ಅಜನಿತಂಗೆ ಸರಿಯೆ?
ಮೂಜಗದಲ್ಲಿ ನಿ[ರು]ತರು ಕೂಡಲಸಂಗನ ಶರಣರು
ತ್ರಿವಿಧವನರಿಯರು. || ೪೮ ||

೬೦೩

ತಾಗು ನಿರೋಧದ, ಆಗುಹೋಗನರಿಯದ
ಶರಣನ ಚರಿತ್ರವ ನೋಡಿ ನೋಡಿ ಬೆರಗಾದೆನಯ್ಯಾ,
ಕೂಡಲಸಂಗಮದೇವಯ್ಯನಲ್ಲಿ ತಾನು ಸುಯಿಧಾನಿಯಾ[ಗೆ]. || ೪೯ ||

೬೦೪

ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯಾ,
ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯಾ.
ನೀನು ಜಗಕ್ಕೆ ಬಲ್ಲಿದನು, ಆನು ನಿನಗೆ ಬಲ್ಲಿದನು, ಕಂಡಯ್ಯಾ.
ಕರಿಯು ಕನ್ನಡಿಯೊಳಗಡಗಿದಂತಯ್ಯಾ,
ಎನ್ನೊಳಗೆ ನೀನಡಗಿದೆ ಕೂಡಲಸಂಗಮದೇವಾ. || ೫೦ ||

# ಶರಣನ ಪ್ರಸಾದಿಸ್ಥಲ

೬೦೫

ಎನಗೆ ಗುರುವಿನ ಪ್ರಸಾದ, ನಿನಗೆ ಚೆನ್ನನ ಪ್ರಸಾದ,
ಎನಗೆಯೂ ನಿನಗೆಯೂ ಸಮಯಾಚಾರ ಸರಿ.
ಕೂಡಲಸಂಗಮದೇವಾ, ನೀನೆನಗೆ ಚಿಕ್ಕ ತಮ್ಮ. || ೫೧ ||

೬೦೬

ಶುದ್ಧಾತ್ಮ ಪರಮಾತ್ಮರಿಬ್ಬರೂ
ಒಂದು ರತ್ನಕ್ಕೆ ಹೆಣಗಾಟವನಾಡಿಹರು.
ಅವರ ಹೆಣಗಾಟವ ನೋಡಿ ಆ ರತ್ನವ ಸೆಳೆದುಕೊಂಡಡೆ
ಕೂಡಲಸಂಗಮದೇವಂಗಾರೋಗಣೆಯಾಯಿತ್ತು. || ೫೨ ||

೬೦೭

ಆ ರತ್ನ ಪ್ರಸಾದವನಾರಾಧಿಸುತ್ತಿರಲು
ಆ ಪ್ರಸಾದದಲ್ಲಿ ಬೀಳುತ ಆಳುತ್ತಿದ್ದಿತ್ತು, ನೋಡಾ.
ಅದ ಹಲಬರು ನೋಡಿ ನೋಡಿ ಹೋಗುತ್ತಿದ್ದರು.

ಆ ಪ್ರಸಾದ ತಾನೇ ಬಂದು ಎನ್ನ ಸುತ್ತಿಕೊಂಡಿತ್ತು.
ಇದ ಪದಾರ್ಥವ ಮಾಡಿಕೊಡಯ್ಯಾ ಕೂಡಲಸಂಗಮದೇವಾ. ॥ ೩೩ ॥

೯೦೮

ಎಲ್ಲರ ಗಂಡರು ಬೇಂಟೆಯ ಹೋದರು,
ನೀನೇಕೆ ಹೋಗೆ, ಎಲೆ ಗಂಡನೆ?
ಸತ್ತುದ ತಾರದಿರು, ಕೈಮುಟ್ಟಿ ಕೊಲ್ಲದಿರು.
ಅಡಗಿಲ್ಲದ ಮನೆಗೆ ಬಾರದಿರು.
ದೇವರ ಧರ್ಮದಲೊಂದು ಬೇಂಟೆ ದೊರೆಕೊಂಡಡೆ
ಕೂಡಲಸಂಗಮದೇವಂಗರ್ಪಿತ ಮಾಡುವೆ, ಎಲೆ ಗಂಡನೆ. ॥ ೩೪ ॥

## ಶರಣನ ಪ್ರಾಣಲಿಂಗಿಸ್ಥಲ

೯೦೯

ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯರಯ್ಯಾ?
ಕಿವಿಯೊಳಗೆ ಕಿವಿಯಿದ್ದು ಕೇಳಲೇಕರಿಯರಯ್ಯಾ?
ಘ್ರಾಣದೊಳಗೆ ಘ್ರಾಣವಿದ್ದು ವಾಸಿಸಲೇಕರಿಯರಯ್ಯಾ?
ಜಿಹ್ವೆಯೊಳಗೆ ಜಿಹ್ವೆಯಿದ್ದು ರುಚಿಸಲೇಕರಿಯರಯ್ಯಾ?
ಸ್ಪರ್ಶನದೊಳಗೆ ಸ್ಪರ್ಶನವಿದ್ದು ಮುಟ್ಟಲೇಕರಿಯರಯ್ಯಾ?
ಪ್ರಾಣದೊಳಗೆ ಪ್ರಾಣವಿದ್ದು ನೆನೆಯಲೇಕರಿಯರಯ್ಯಾ?
ಕಾಯದೊಳಗೆ ಕಾಯವಿದ್ದು ಬಿಡದು, ಬೇರಾಗದು.
ಕೂಡಲಸಂಗಮದೇವಾ,
ನೀನಿಕ್ಕಿದ ಅಣಕದ ಭೇದವ ಭೇದಿಸಬಾರದಯ್ಯಾ. ॥ ೩೫ ॥

೯೧೦

ಗ್ರಹ ಬಂದು ಆವರಿಸಲೊಡನೆ ತನ್ನ ಮರೆಸೂದು,
ಮತ್ತೊಂದಕ್ಕೆ ಇಂಬುಗೊಡಲೀಯದಯ್ಯಾ.
ಕೂಡಲಸಂಗಮದೇವನ ಅರಿವು ಅನುಪಮವಾಗಲೊಡನೆ
ಜೀವಹಾರದೊಳಗಿರಲೀಯದಯ್ಯಾ. ॥ ೩೬ ॥

೬೧೧

ಭೂತಿಕನ ಸೀರೆಯು ಸಾತ್ವಿಕ ನೆರೆ ಉಟ್ಟಡೆ
ಭೂತಿಕ ಸಾತ್ವಿಕನಾದ, ಸಾತ್ವಿಕ ಭೂತಿಕನಾದ :
ಈ ಮಾತು ಬಿದ್ದುದು ನೋಡಾ, ರಾಜಬೀದಿಯಲ್ಲಿ.
ಅಯ್ಯಾ, ಭೂತ ಕೆಣಕಿದಡಿಲ್ಲ, ಮಾತ ಮುಚ್ಚಿದಡಿಲ್ಲ
ಓತು ಕೂಡುವ ಅಸುವ, ಕೂಡಲಸಂಗಮದೇವ ತಾನೆ ಬಲ್ಲ. ॥ ೫೭ ॥

## ಶರಣನ ಐಕ್ಯಸ್ಥಲ

೬೧೨

ಮನೆಯು ಗಂಡನ ಮನೆವಾರ್ತೆಯನೇನ ಹೇಳುವೆನವ್ವಾ!
ಅಂಗವಿದ್ಯೆಯನೊಲ್ಲ,
ಕಂಗಳೊಳಗಣ ಕಸವ ಕಳೆದಲ್ಲವೆ ನೋಡಲೀಯ,
ಕೈಯ ತೊಳೆದಲ್ಲದೆ ಮುಟ್ಟಲೀಯ,
ಕಾಲ ತೊಳೆದಲ್ಲದೆ ಹೊಂದಲೀಯ.
ಇಂತೀ ಸರ್ವಾಂಗ ತಲೆದೊಳೆದ ಕಾರಣ,
ಕೂಡಲಸಂಗಮದೇವನೆನ್ನ ಕೂಡಿಕೊಂಡನವ್ವಾ. ॥ ೫೮ ॥

೬೧೩

ಅಳಿಯುನ ಕಂಡಡೆ ನಾಚೆಂಬೆ ಮಗಳೆ,
ಅಳಿಯುನ ಕಂಡಡೆ ತೊಲಗೆಂಬೆ ಮಗಳೆ,
ನಾಚುವಡೆ ಮೊರೆಯಿಲ್ಲ, ತೊಲಗುವಡೆ ನೆಲನಿಲ್ಲ.
ಇಬ್ಬರಿಗೊಬ್ಬ ಗಂಡನಾದ ಬಳಿಕ
ಇನ್ನೆಲ್ಲಿಯ ಮೊರೆ ಮಗಳೆ?
ಕೂಡಲಸಂಗಮದೇವಯ್ಯನೆಂಬ ಗಂಡನಾದ ಬಳಿಕ
ಇನ್ನೆಲ್ಲಿಯ ಮೊರೆ ಮಗಳೆ? ॥ ೫೯ ॥

೯೧೪

ಸತ್ಯವಿದೆ, ಸಮಾಧಾನವಿದೆ, ಮನಕ್ಕೆ ಬಾರದಿದೇನಯ್ಯಾ?
ಸರ್ವಸನುಮತವೆಂಬ ಸುಖವಿದೆ, ಮನಕ್ಕೆ ಸೋಂಕದಿರ್ದೇನಯ್ಯಾ?
ಆನೀನೆಂಬುದೊಂದು ಘನವಿದೆ,
ಕೂಡಲಸಂಗಮದೇವಾ, ಭ್ರಮೆಯೋ? ॥ ೬೦ ॥

೯೧೫

ಸಿನೆ ಬಂಜೆಯರಿಬ್ಬರಿಗೊಬ್ಬ ಮಗ ಹುಟ್ಟಿ,
ಅವನೆನ್ನ ರಿಣಕ್ಕೊಡೆಯನಾದ,
ಅವನೆನ್ನ ಧನಕ್ಕೊಡೆಯನಾದ,
ಆನು ಗಳಿಸಿದ ಒಮ್ಮನಕ್ಕೆ ಅಗಲದೆ ಹೋಹಿತನಾದ.
ಕೂಡಲಸಂಗಮದೇವನಂತಪ್ಪ ಮಗ ಹುಟ್ಟಿದಡೆ,
ಇದ್ದನಯ್ಯಾ ಕಾಯ ಮಾತೆಯಾಗಿ, ಜೀವ ಪಿತನಾಗಿ
ನಾನಿರಿಸಿದಂತೆ. ॥ ೬೧ ॥

೯೧೬

ಪೂಜೆಯುಳ್ಳನ್ನಬರ ಲಿಂಗವ ಹಾಡಿದೆ,
ಮಾಟವುಳ್ಳನ್ನಬರ ಜಂಗಮವ ಹಾಡಿದೆ.
ಜಿಹ್ವೆಯುಳ್ಳನ್ನಬರ ಪ್ರಸಾದವ ಹಾಡಿದೆ.
ಈ ತ್ರಿವಿಧ ನಾಸ್ತಿಯಾದ ಬಳಿಕ
ಎನ್ನ ನಾ ಹಾಡಿಕೊಂಡೆ ಕಾಣಾ,
ಕೂಡಲಸಂಗಮದೇವಾ. ॥ ೬೨ ॥

೯೧೭

ಅನಾಯಸದಿಂದ ಮನೆಯ ಮಾಡಿ,
ನಿರಾಯಸದಿಂದ ಪರಮಸುಖಿ!
ರೂಪಿಸುವಲ್ಲಿ ರೂಪಾಧಿಕ, ನೋಡುವಲ್ಲಿ ನೋಟ ಘನ.
ಇಂತಹ ಸಹಜಸಂಗಿಯ ನಿಲವಿನ ಪರಿ :
ಉದಕದೊಳಗಣ ಬಿಂದು ಉದಯರತ್ನದಂತೆ
ಕೂಡಲಸಂಗನ ಶರಣರ ನಿಲವು ॥ ೬೩ ॥

೯೧೮

ಮುರುಳುತಲೆ ಹುರುಳುತಲಿ ನೀನೆ ದೇವಾ,
ಹೆಂಗೂಸು ಗಂಡುಗೂಸು ನೀನೇ ದೇವಾ,
ನಿಮ್ಮಕ್ಕನ ಗಂಡ ನೀನೇ ದೇವಾ.
ಕೂಡಲಸಂಗಮದೇವಾ,
ಭ್ರಾಂತಳಿದು ಭಾವಸಿಂದುದಾಗಿ. ॥ ೬೪ ॥

೯೧೯

ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ
ತೆರಹಿಲ್ಲದ ಸಂಭಾಷಣೆ ಸುಖವು.
ತೆರಹಿಲ್ಲದೆ ನಂಬಿದೆ, ಸ್ವಾನುಭಾವ ಸುಖವು,
ತೆರಹಿಲ್ಲದ ಮಹಿಮೆ, ತೆರಹಿಲ್ಲದ ವಿಚಾರ
ಕೂಡಲಸಂಗಮದೇವಾ, ನಿಮ್ಮ ಶರಣಂಗೆ! ॥ ೬೫ ॥

■ ■

## ಐಕ್ಯನ ಜ್ಞಾನಿಷ್ಠಲ

೯೨೦

ಮೂರರಾಪ್ಯಾಯನ ಐದು ಬೆಟ್ಟವನಿಂಬುಗೊಂಡು
ಅಕಟಕಟಾ, ಮಾಡಿ ಕೆಟ್ಟರು, ಮಾಡದೆ ಕೆಟ್ಟರು,
ನೀಡಿ ಕೆಟ್ಟರು, ನೀಡದೆ ಕೆಟ್ಟರು.
ಕೂಡಲಸಂಗಮದೇವನ ಬಸಿರ ಮಧ್ಯದ
ಬಯಲ ಸಮಾಧಿಯಲಿಕ್ಕದೆ ಕೆಟ್ಟರು. ‖ ೧ ‖

೯೨೧

ಉಮಾಧಿನಾಥರು ಕೋಟಿ, ಪಂಚವಕ್ತ್ರರು ಕೋಟಿ,
ನಂದಿವಾಹನರೊಂದು ಕೋಟಿ ನೋಡಯ್ಯಾ.
ಸದಾಶಿವರು ಕೋಟಿ, ಗಂಗೆವಾಳುಕ ಸಮರುದ್ರರಿವರೆಲ್ಲರು
ಕೂಡಲಸಂಗನ ಸಾನ್ನಿಧ್ಯರಲ್ಲದೆ
ಸಮರಸವೇದ್ಯರೊಬ್ಬರೂ ಇಲ್ಲ. ‖ ೨ ‖

೯೨೨

ರಕ್ಕಸಿಯ ಮನೆಯಲು ಭೋಜನವನುಂಡು
ತೃಪ್ತಿಯಾಯಿತ್ತೆಂದು ಬೆಸಗೊಂಡಡೆ ಹೇಳಿಹೆನು:
ನೀರ ಕೈಯಲು ಕಿಚ್ಚ ಬಯ್ಕೆಯ ಕೊಟ್ಟಂತೆ
ಸಾಯುಜ್ಯಪದವಿಯನವರೆತ್ತ ಬಲ್ಲರು?
ಮಹಾದಾನಿ ಕೂಡಲಸಂಗಮದೇವರ
ಸಮರಸದ ಸುಖವನವರೆತ್ತ ಬಲ್ಲರು? ‖ ೩ ‖

೯೨೩

ಬಯಲ ರೂಪ ಮಾಡಬಲ್ಲಾತನೆ ಶರಣನು,
ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭಾವಿ.
ಬಯಲ ರೂಪ ಮಾಡಲರಿಯದಿದ್ದಡೆ ಎಂತು ಶರಣನೆಂಬೆ?
ಆ ರೂಪ ಬಯಲು ಮಾಡಲರಿಯದಿದ್ದಡೆ ಎಂತು ಲಿಂಗಾನುಭಾವಿಯೆಂಬೆ?
ಈ ಉಭಯ ಒಂದಾದಡೆ ನಿಮ್ಮಲ್ಲಿ ತೆರಹುಂಟೆ
ಕೂಡಲಸಂಗಮದೇವಾ? ‖ ೪ ‖

೯೨೪

ದೇವಲೋಕ ಮರ್ತ್ಯಲೋಕವೆಂಬ ಸೀಮೆಯುಳ್ಳನ್ನಕ್ಕ
ಕೇವಲ ಶರಣನಾಗಲರಿಯ.
ಸತ್ತು ಬೆರಸಿಹೆನೆಂದಡೆ ಕಬ್ಬಿನ ತುದಿಯ ಮೆಲಿದಂತೆ
ಕೂಡಲಸಂಗಮದೇವಾ. ||೫||

೯೨೫

ಮಾತಿಲ್ಲ ನುಡಿಯಿಲ್ಲ, ಏತಕ್ಕೆ ಮುನಿದಿರಿ?
ಮಾತಾಡಿದಡೆ ಕೆಯ್ಯ ಬೆಳಸೆಂಬುದನರಿಯಿರೆ ಅಯ್ಯಾ?
ಮಾತು ಕೆಟ್ಟಲ್ಲದೆ ತಾನಾಗಬಾರದು.
ಕೂಡಲಸಂಗಮದೇವಯ್ಯಾ
ಮಾತಿಂದ ಬರ್ಕು ಭವಭಾರಘೋರ. ||೬||

೯೨೬

ಏನನಾದಡೆಯೂ ಸಾಧಿಸಬಹುದು,
ಮತ್ತೇನನಾದಡೆಯೂ ಸಾಧಿಸಬಹುದಯ್ಯಾ
ತಾನಾರೆಂಬುದ ಸಾಧಿಸಬಾರದು,
ಕೂಡಲಸಂಗಮದೇವರ ಕರುಣವುಳ್ಳವಂಗಲ್ಲದೆ. ||೭||

೯೨೭

ಜೀವಾತ್ಮ ಅಂತರಾತ್ಮನ ಸುದ್ದಿಯ ಬೆಸಗೊಂಬಡೆ ಹೇಳಿಹೆ ಕೇಳಿ ಭೋ:
ಹುಸಿಯ ಸಂಕಲೆಯಾಗಿದ್ದಲ್ಲಿ ಕಾದುಕೊಂಡಿದ್ದನೊಬ್ಬ.
ಕಥೆ ಕನಸುಮಾಡಿ ಹೇಳುತ್ತಿದ್ದನೊಬ್ಬ.
ಪರಾಪರಕ್ಕೆ ಹೋಗಿ ಪರಮನ ಸುದ್ದಿಯ ಕೊಂಡುಬರುತ್ತಿಪ್ಪ
ಆವಿಬ್ಬರೂ ಕೆಡಮೆಟ್ಟಿ ಹೋದಾಗ,
ಲೋಕ ನಿರ್ಬುದ್ಧಿಗೊಂಡಿತ್ತು, ಕೂಡಲಸಂಗಮದೇವಾ. ||೮||

೯೨೮

ಸಮರತಿ, ಸಮಕಳೆ, ಸಮಸುಖ, ಸ್ವಾನುಭಾವ
ಒಲಿದು ಕಿರಿದಾದುದನಾರೂ ಅರಿಯರು.
ಪಾಷಾಣಪರೀಕ್ಷೆವಂತನಂತೆ
ಗುರುವಿಲ್ಲದವನೂತಿರಲಿ.

ಕೂಡಲಸಂಗಮದೇವಯ್ಯಾ,
ಗುರುವುಳ್ಳವರ ನಿಜವಿಂತುಟು. ॥ ೯ ॥

೯೨೯

ಗುರುಶಿಷ್ಯ ಸಂಬಂಧವಾದುದಕ್ಕೆ ಇದು ಚಿಹ್ನ:
ಹಿಂದ ಬಿಟ್ಟು ಮುಂದ ಹಿಡಿಯಲೇ ಬೇಕು.
ಕೂಡಲಸಂಗಮದೇವ ಕೇಳಯ್ಯಾ,
ಕಿಚ್ಚಿನೊಳಗೆ ಕೋಲ ಬೈಚಿಟ್ಟಂತಿರಬೇಕು. ॥ ೧೦ ॥

೯೩೦

ಲಿಂಗವ ಪೂಜಿಸಿ ಫಲವೇನಯ್ಯಾ,
ಸಮರತಿ ಸಮಕಳೆ ಸಮಸುಖವನರಿಯದನ್ನಕ್ಕ?
ಲಿಂಗವ ಪೂಜಿಸಿ ಫಲವೇನಯ್ಯಾ,
ಕೂಡಲಸಂಗಮದೇವರ ಪೂಜಿಸಿ
ನದಿಯೊಳಗೆ ನದಿ ಬೆರಸಿದಂತಾಗದನ್ನಕ್ಕ? ॥ ೧೧ ॥

## ಐಕ್ಯನ ಐಕ್ಯಸ್ಥಲ

೯೩೧

ಒಲೆಯುಡಿಯನುರುಹಿದಡೆ
ಗೋಳಕನಾಥನ ಕೊರಳ ಸುತ್ತಿತ್ತು,
ಮಹೀತಳನ ಜಡೆ ಸೀಯಿತ್ತು, ಮರೀಚಕನ ಶಿರ ಬೆಂದಿತ್ತು,
ರುದ್ರನ ಹಾವುಗೆ ಉರಿಯಿತ್ತು, ದೇವಗಣಂಗಳು ನಿವಾಟವಾದರು,
ಮಡದಿಯರ್ಬೈವರು ಮುಡಿಯ ಹಿಡಿದುಕೊಂಡು ಹೋದರು,
ಕೂಡಲಸಂಗಮದೇವ ಭಸ್ಮಧಾರಿಯಾದ. ॥ ೧೨ ॥

೯೩೨

ಆ ಭಸ್ಮತಾಗಿ ಬ್ರಹ್ಮ ತನ್ನ ಕಪಾಲವಿಡಿದನು.
ಗಣನಾಥನ ಐವತ್ತೆರಡು ಸರ ಹರಿದುಬಿದ್ದವು.
ಆ ಭಸ್ಮತಾಗಿ ಅಂಡಜಮುಗ್ಧೆಯ ಮೂರು ಮೊಲೆ ಹರಿದು ಬಿದ್ದವು.

ನಾದಪ್ರಿಯ ನಂದಿಯನೇರಿಕೊಂಡು
ಅತೀತನ ಮೇಲೆ ಆನಂದಸಿಂಹಾಸನವನಿಕ್ಕಿ ಕುಳ್ಳಿತ್ತ,
ಕೂಡಲಸಂಗಮದೇವರ ದೇವತ್ವ ಕೆಟ್ಟಿತ್ತು. ॥ ೧೩ ॥

೯೩೩

ನಾನೊಮ್ಮೆ ಬೇಂಟೆಯ ಹೋದಡೆ ಭಸಿತಕ್ಕಾಹುತಿಯನಿಕ್ಕಿಹೆನೆಂದು
ಸಾಸಿರದೇಳುನೂರು ವರುಷ ಒಬ್ಬ ರಾಜನ ಕೊಂದೆನು.
ಅವನ ಹೆಂಡತಿ ಐವತ್ತೆರಡು ಕಣ್ಣವಳು,
ಅವಳು ತನ್ನ ಹೂಮುಡಿಯ ಬಿಟ್ಟು ಅತ್ತಳು.
ಅವಳ ಬಾಯಲ್ಲಿ ಅಜ ಬಿದ್ದ, ಕಂಗಳಲ್ಲಿ ಧೂಮಕೇತು ಬಿದ್ದ.
ಕೂಡಲಸಂಗಮದೇವರ ದೇವತ್ವ ಕೆಟ್ಟಿತ್ತು. ॥ ೧೪ ॥

೯೩೪

ಲಿಂಗಾರ್ಚನೆಯ ಮಾಡುವ ಮಹಿಮರೆಲ್ಲರೂ
ಸಲಿಗೆವಂತರಾಗಿ ಒಳಗೈದಾರೆ.
ಆನು ದೇವಾ ಹೊರಗಣವನು.
'ಸಂಬೋಳಿ ಸಂಬೋಳಿ' ಎನುತ್ತ ಇಂಬಿನಲ್ಲಿ ಇದೇನೆ.
ಕೂಡಲಸಂಗಮದೇವಾ
ನಿಮ್ಮ ನಾಮವಿಡಿದ ಅನಾಮಿಕ ನಾನು. ॥ ೧೫ ॥

೯೩೫

ಶಿವಶಿವಾ ಮೂರ್ತಿಗೆ ಸತ್ಯಶುದ್ಧ ಉಂಟೆಂಬಿರಿ.
ಸತ್ಯವುಳ್ಳವಂಗೆ ಗುರುವಿಲ್ಲ, ಸತ್ಯವುಳ್ಳವಂಗೆ ಲಿಂಗವಿಲ್ಲ,
ಸತ್ಯವುಳ್ಳವಂಗೆ ಜಂಗಮವಿಲ್ಲ, ಸತ್ಯವುಳ್ಳವಂಗೆ ಪ್ರಸಾದವಿಲ್ಲ,
ಸತ್ಯವುಳ್ಳವಂಗೆ ಗಣತ್ವವಿಲ್ಲ ಕೇಳಿರೆ.
ಸತ್ಯಶುದ್ಧ ದೇವರಿಗೆ ಉಪಚಾರವುಂಟು,
ಸತ್ಯಶುದ್ಧ ದೇವರಿಗೆ ಧ್ಯಾನಮೌನ ಅನುಷ್ಠಾನವುಂಟು,
ಸತ್ಯಶುದ್ಧ ಉಪದೇಶಕ್ಕೆ ಜಪ ತಪ ಸೂಜೆ ಸಮಾಧಿ
ಹೋಮ ನೇಮ ನಿತ್ಯ ಅಷ್ಟವಿಧಾರ್ಚನೆ ಷೋಡಶೋಪಚಾರವುಂಟು.
ಸತ್ಯಶುದ್ಧ ದೇವರಿಗೆ ಉಪಚಾರವುಂಟಾದ ಕಾರಣ
ಇಂತಪ್ಪ ಸತ್ಯಶುದ್ಧ ಗುರುವಿಂಗೆ ಶರಣೆನ್ನೆ,
ಇಂತಪ್ಪ ಸತ್ಯಶುದ್ಧ ಲಿಂಗಕ್ಕೆ ಶರಣೆನ್ನೆ,

ಇಂತಪ್ಪ ಸತ್ಯಶುದ್ಧ ಜಂಗಮಕ್ಕೆ ಶರಣೆನ್ನೆ,
ಇಂತಪ್ಪ ಸತ್ಯಶುದ್ಧ ಪ್ರಸಾದಕ್ಕೆ ಕೈಯಾನೆ.
ಇವರೆಲ್ಲರು ಬ್ರಹ್ಮನ ಮಕ್ಕಳು.
ಎನಗೆ ಸತ್ಯವೂ ಇಲ್ಲ, ಅಸತ್ಯವೂ ಇಲ್ಲ.
ಆವ ಸಹಜವೂ ಇಲ್ಲದ ಲಿಂಗೈಕ್ಯ ಕಾಣಾ
ಕೂಡಲಸಂಗಮದೇವಾ. ॥ ೧೬ ॥

## ಐಕ್ಯನ ಭಕ್ತಸ್ಥಲ

೯೩೬

ಭಕ್ತನಾಯಿತ್ತೆ ಭಕ್ತಿದಾಸೋಹ, ಯುಕ್ತನಾಯಿತ್ತೆ ಯುಕ್ತಿದಾಸೋಹ,
ಐಕ್ಯನಾಯಿತ್ತೆ ಮಮಕಾರ ದಾಸೋಹ.
ಸರ್ವದಲೆ ದಾಸಾಹವೇ ಬೇಕು.
ಈ ದಾಸೋಹದ ಅನುವ ಕೂಡಲಸಂಗಯ್ಯ ತಾನೆ ಬಲ್ಲ. ॥ ೧೭ ॥

೯೩೭

ಜಲವ ನುಂಗಿತ್ತಯ್ಯಾ ಎನ್ನ ಕರವು,
ಪತ್ರೆಯ ನುಂಗಿತ್ತಯ್ಯಾ ಎನ್ನ ಶಿಖೆ,
ಎನ್ನಯ ಮಂತ್ರಭಿನ್ನವಾಯಿತ್ತು.
ಇಂತೀ ದ್ವಿವಿಧ ಒಂದಾಗದ ಮುನ್ನ
ಕೂಡಲಸಂಗಮದೇವರು ಪೂಜೆಗೊಂಡರು. ॥ ೧೮ ॥

೯೩೮

ಎಲ್ಲವ ಬೇಡಿದರೆಮ್ಮವರು, ಒಂದ ಬೇಡ ಮರೆದರಯ್ಯಾ,
ಮರ್ತ್ಯಲೋಕದ ಗಣಂಗಳು ಒಂದ ಬೇಡ ಮರೆದರು.
ಕೂಡಲಸಂಗಮದೇವಾ, ಎನ್ನ ಬೇಡ ಮರೆದರು. ॥ ೧೯ ॥

೯೩೯

ಭಿತ್ತಿಯಿಲ್ಲದ ಚಿತ್ತಾರದಂತೆ
ಭಕ್ತಿಯಿಲ್ಲದ ಪ್ರಮಥನಾಗಿದ್ದೆನಯ್ಯಾ?

ಸತ್ಯವಿಲ್ಲದ ಶರಣನಾಗಿದ್ದೆನಯ್ಯಾ?
ಗೆರೆಯಿಲ್ಲದ ಕೋಲಲ್ಲಿ ಉದ್ದರೆಯನಿಕ್ಕಿದ
ಭಂಡದ ಹರದನಂತಾದೆನಯ್ಯಾ ಕೂಡಲಸಂಗಮದೇವಾ. ॥ ೨೦ ॥

೯೪೦

ಆಯತ ಒಂದೆಡೆಯಲ್ಲಿ ತೆರನನರಿಯರಾಗಿ
ನೋಡಬಾರದು, ನೋಡಿ ನುಡಿಸಬಾರದು.
ಅದು, ತಿದ್ದಬಾರದ ಡೊಂಕು ಕೂಡಲಸಂಗನ ಭಕ್ತಿ. ॥ ೨೧ ॥

## ಐಕ್ಯನ ಮಾಹೇಶ್ವರಸ್ಥಲ

೯೪೧

ಸತ್ತು ಹುಟ್ಟುವನಲ್ಲ, ಸಂದೇಹ ಸೂತಕಿಯಲ್ಲ
ಆಕಾರ ನಿರಾಕಾರ ನೋಡಯ್ಯಾ!
ಕಾಯವಂಚಕನಲ್ಲ, ಜೀವವಂಚಕನಲ್ಲ
ನಿರಂತರ ಸಹಜ ನೋಡಯ್ಯಾ!
ಶಂಕೆಯಿಲ್ಲದ ಮಹಿಮನು ನೋಡಯ್ಯಾ,
ಕೂಡಲಸಂಗನ ಶರಣನುಪಮಾತೀತ ನೋಡಯ್ಯಾ. ॥ ೨೨ ॥

೯೪೨

ದಶದಿಕ್ಕು ಧರೆ ಗಗನವೆಂಬುದ ನಾನರಿಯೆನಯ್ಯಾ,
'ಲಿಂಗಮಧ್ಯೇ ಜಗತ್ ಸರ್ವಂ' ಎಂಬುದ ನಾನರಿಯೆನಯ್ಯಾ,
ಲಿಂಗಸೋಂಕಿನ ಸುಖದೊಳಗೆ.
ಕೂಡಲಸಂಗಮದೇವಯ್ಯಾ, ಅಂಬುಧಿಯೊಳಗೆ ಬಿದ್ದಾಲಿಕಲ್ಲಿನಂತೆ
ಭಿನ್ನಭಾವವನರಿಯದೆ 'ಶಿವಶಿವಾ' ಎನುತ್ತಿದ್ದೆ ನಾನು. ॥ ೨೩ ॥

## ಐಕ್ಯನ ಪ್ರಸಾದಿಸ್ಥಲ

೯೪೩

ಮಿಥ್ಯವನಳಿದುಳಿದ ಸತ್ಯಪ್ರಸಾದಿ,
ರಂಜನವಿಲ್ಲದ ನಿರಂಜನ ಪ್ರಸಾದಿ,
ದುಃಖವನಳಿದ ಘನಾನಂದಪ್ರಸಾದಿ,
ಅನಿತ್ಯವಿಲ್ಲದ ನಿತ್ಯಪ್ರಸಾದಿ,
ಖಂಡಿತವಿಲ್ಲದ ಅಖಂಡಿತಪ್ರಸಾದಿ,
ಕೂಡಲಸಂಗಮದೇವರಲ್ಲಿ ತಾನೆ ಪ್ರಸಾದಿ. || ೨೪ ||

೯೪೪

ಹುಸಿಯಿಂದೆ ಜನಿಸಿದೆನಯ್ಯಾ ಮರ್ತ್ಯಲೋಕದೊಳಯಿಂಕೆ.
ಹುಸಿಯಿಂದೆ ಲಿಂಗವ ಹೆಸರುಗೊಂಡು ಕರೆದೆನಯ್ಯಾ,
ಅದು ಎನಗೆ ಭಾವವೂ ಅಲ್ಲ, ನಿರ್ಭಾವವೂ ಅಲ್ಲವೆ ನಿಂದಿತ್ತಯ್ಯಾ.
ಅದರ ಅವಯುವಂಗಳೆಲ್ಲವು ಜಂಗಮವಯ್ಯಾ,
ಅದಕ್ಕೆ ಎನ್ನಲ್ಲುಳ್ಳ ಸಯದಾನ ಮಾಡಿ ನೀಡಿದೆನಯ್ಯಾ.
ಆ ಪ್ರಸಾದಕ್ಕೆ ಶರಣೆಂದೆನಯ್ಯಾ,
ಅದು ಸಾರವೂ ಅಲ್ಲ, ನಿಸ್ಸಾರವೂ ಅಲ್ಲ.
ಆ ಪ್ರಸಾದದಲ್ಲಿ ನಾನೇ ತದ್ಗತನಾದೆ ಕಾಣಾ,
ಕೂಡಲಸಂಗಮದೇವಾ. || ೨೫ ||

೯೪೫

ಬೆಳಗಿನೊಳಗಣ ಬೆಳಗು ಮಹಾಬೆಳಗೆಂಬ
ಪ್ರಸಾದದಲ್ಲಿ ಒದಗಿದ ಪ್ರಸಾದಿಯ ಪರಿಣಾಮದ
ಪರಮಾನಂದವನೇನೆಂದುಪಮಿಸುವೆನಯ್ಯಾ?
ಪರಮಾಶ್ರಯವೇ ತಾನಾಗಿ, ಕೂಡಲಸಂಗಮದೇವಯ್ಯಾ,
ಚೆನ್ನಬಸವಣ್ಣನೆಂಬ ಮಹಾಪ್ರಸಾದಿ
ಎನ್ನ ವಾಙ್ಮನಕ್ಕಗೋಚರನಾ[ಗೆ], ನಾನೇನೆಂಬೆನಯ್ಯಾ. || ೨೬ ||

# ಐಕ್ಯನ ಪ್ರಾಣಲಿಂಗಿಸ್ಥಲ

೯೪೬

ಆಯುತವೆಂಬುದು ಭಂಗ, ಸ್ವಾಯುತವೆಂಬುದು ಭವ.
ಆಯುತವರಿಯೆ, ಸ್ವಾಯುತವರಿಯೆ,
ಭಾವದಲ್ಲಿ ವ್ರತಗೆಟ್ಟುದಾಗಿ.
ಆ ಭಾವದಲ್ಲಿ ಜೀವಸಂಹಾರಿ,
ಕೂಡಲಸಂಗಮದೇವ ಸರ್ವನಿವಾಸಿಯಾಗಿ. ॥ ೨೭ ॥

೯೪೭

ಸ್ವಯಲಿಂಗದನುಭಾವ ತನಗೆ ದೊರೆಕೊಂಡ ಬಳಿಕ
ದೇವಲೋಕವೆಂಬುದೇನೋ? ಮರ್ತ್ಯಲೋಕವೆಂಬುದೇನೊ?
ಆವುದರಲ್ಲಿಯೂ ಭೇದವೇನಯ್ಯಾ,
ಕೂಡಲಸಂಗಮದೇವನೊಲಿದ ಬಳಿಕ ಆಲಸ್ಯವುಂಟೆ? ॥ ೨೮ ॥

೯೪೮

ಏನೆಂಬೆ, ಏನೆಂಬೆ ಒಂದೆರಡಾದುದ?
ಏನೆಂಬೆ, ಏನೆಂಬೆ ಎರಡೊಂದಾದುದ?
ಏನೆಂಬೆ, ಏನೆಂಬೆ ಅವಿರಳ ಘನವ?
ಮಹಾದಾನಿ ಕೂಡಲಸಂಗಮದೇವಯ್ಯ ತಾನೆ ಬಲ್ಲ. ॥ ೨೯ ॥

೯೪೯

ಕುರುಹಿಲ್ಲ ಕುರುಹಿಲ್ಲ ಲಿಂಗವೆಂದೆಂಬಡೆ,
ತೆರಹಿಲ್ಲ ತೆರಹಿಲ್ಲ ಜಂಗಮವೆಂದೆಂಬಡೆ.
ಇದೆ ನೋಡಾ ಶಿವಾಚಾರ, ಇದೆ ನೋಡಾ ಶಿವದೊಡಕು!
'ಆತ್ಮಾನಾಂ ಪ್ರಕೃತಿಃ ಸ್ವಭಾವ' ಎಂಬುದಾಗಿ
ಮುಟ್ಟಬಾರದ ಠಾವ ಮರೆಗೊಂಡಿರ್ಪ
ಮಮಕರ್ತ ಕೂಡಲಸಂಗಮದೇವ. ॥ ೩೦ ॥

## ಐಕ್ಯನ ಶರಣಸ್ಥಲ

೯೫೦

ಭೂ ತೋಯ ಪಾವಕ ಸಮೀರಣ ಅಂಬರಾದಿಗಳೆಲ್ಲ
ಆದಿಯಾಧಾರದ ಪರಮಾತ್ಮಲಿಂಗದಲ್ಲಿ!
ಆದಿ ಮಧ್ಯ ಅವಸಾನವರಿಯದ
ಅಗಮ್ಯ ವೇದಾದಿಸಕಲಶಾಸ್ತ್ರಪ್ರಮಾಣರು
ಅದನಂತಿಂತೆಂದುಪಮಿಸಲಿಲ್ಲ,
ಮಹಾಂತ ಕೂಡಲಸಂಗಮದೇವಾ. ॥ ೩೧ ॥

೯೫೧

ಮಹಾಲಿಂಗದ ಸ್ಥಾನಂಗಳು ಮಹಾಲಿಂಗದ ಪೆಸರಲ್ಲದೆ,
ಲಿಂಗ ಬೇರೆ ರೂಪುನಿರೂಪನಲ್ಲ,
ಲಿಂಗ ಬೇರೆ ಕಾಯಸಂಬಂಧಿಯಲ್ಲ,
ಲಿಂಗ ಬೇರೆ ಮಹಾಘನದಿಂದತ್ತತ್ತಲೆ.
ಕೂಡಲಸಂಗಮದೇವರ ನಿಲವು ಆರಿಗೆಯೂ ಅಳವಡದು. ॥ ೩೨ ॥

೯೫೨

ಹುತ್ತಕ್ಕೆ ಏಸು ಬಾಯಾದಡೇನು? ಸರ್ಪನಿಪ್ಪುದು ಒಂದೇ ಸ್ಥಾನ!
ಭಾವ ಭಾವಿಸಿ ಭ್ರಮೆಯಳಿದು ನೋಡಾ:
ಆ ಭಾವ ಭಾವಿಸಲು ನಿರ್ಭಾವ ಕೂಡಲಸಂಗಮದೇವಾ. ॥ ೩೩ ॥

೯೫೩

ವೇದ ವೇಧಿಸಲರಿಯದೆ ಅಭೇದ್ಯಲಿಂಗವೆಂದು ನಡನಡುಗಿತ್ತು.
ಶಾಸ್ತ್ರ ಸಾಧಿಸಲರಿಯದೆ ಅಸಾಧ್ಯಲಿಂಗವೆಂದು ಸಾರುತ್ತೈದಾವೆ.
ತರ್ಕ ತರ್ಕಿಸಲರಿಯದೆ ಅತರ್ಕ್ಯಲಿಂಗವೆಂದು ಮಸಂಗೊಳ್ಳವು.
ಆಗಮ ಗಮಿಸಲರಿಯದೆ ಅಗಮ್ಯಲಿಂಗವೆಂದು ಹೋದವು.
ನರರು ಸುರರು ಅಂತುವ ಕಾಣರು,
ನಮ್ಮ ಕೂಡಲಸಂಗನ ಪ್ರಮಾಣ ಶರಣ ಬಲ್ಲ. ॥ ೩೪ ॥

೯೫೪

ವೇದಾತೀತ, ಷಡುವರ್ಣರಹಿತ, ಅಷ್ಟತ್ರಿಂಶತ್ಕಳಾತೀತ,
ವ್ಯೋಮಾತೀತ, ಕೂಡಲಸಂಗಮದೇವ. ॥ ೩೫ ॥

೯೫೫

ವಿಶ್ವಜಿತನು, ದನುಜಿತನು, ಸರ್ವಜಿತನು,
ಸುತ್ರಾಮಜಿತನು, ನೃಜಿತನು, ಅಶ್ವಜಿತನು, ಗೋಜಿತನು,
ಅರ್ಜಿತನು, ಸ್ವಸಂವೇದ್ಯನು, ವೇದನಾದಾತೀತನು.
ತೂರ್ಯಪರಮಾನಂದ ನಿರವಯ,
ಸೂರ್ಯಕೋಟಿಪ್ರಭೆಯ ಬೆಳಗಿನ
ಸಹಸ್ರಕಿರಣದ ಅಗ್ರಪಟಲದ ಬೆಳಗು ಕೂಡಲಸಂಗಯ್ಯ. ॥ ೩೬ ॥

೯೫೬

ಸಹಸ್ರಶೀರ್ಷನಾದಿಪುರುಷನು,
ವೇದಪುರುಷನೊಬ್ಬ ಪುರುಷನು.
ತ್ರಿಪಾದ ಊರ್ಧ್ವನೊಬ್ಬ ಪುರುಷನು.
ಉದನ್ಮುಖಿನೊಬ್ಬ ಪುರುಷನು.
ಉದಯಪುರುಷನೊಬ್ಬ ಪುರುಷನು.
ವಿರಾಟ್ಪುರುಷನೊಬ್ಬ ಪುರುಷನು.
ಆದಿಪುರುಷನೊಬ್ಬ ಪುರುಷನು.
ವಿಯತ್ಪುರುಷನೊಬ್ಬ ಪುರುಷನು.
ತದ್ವಿಯತ್ಪುರುಷ ಪುರುಷರಿಲ್ಲದ ಪ್ರಭೆ ನೋಡಿರೆ,
ವೇದನಾದಾತೀತ ತೂರ್ಯಪರಮಾನಂದ ನಿರವಯ
ಷಟ್‌ತ್ರಿಂಶತ್‌ಪ್ರಭಾಪಟಲಪ್ರಭೆಯು ಬೆಳಗಿವೆ ನೋಡಿರೆ.
ಬೆಳಗಿನೊಳಗಣ ಮಹಾಬೆಳಗಿನ ಬೆಳಗು ಕೂಡಲಸಂಗಯ್ಯ. ॥ ೩೭ ॥

೯೫೭

ಅಷ್ಟತನುಮೂರ್ತಿ ಲಿಂಗವೆಂದೆಂಬರು ಕೇಳಿರಯ್ಯಾ:
ಆದಿಯ ಮಗ ಅತೀತ, ಅತೀತನ ಮಗ ಆಕಾಶ,
ಆಕಾಶನ ಮಗ ವಾಯು, ವಾಯುವಿನ ಮಗ ಅಗ್ನಿ,
ಅಗ್ನಿಯ ಮಗ ಅಪ್ಪು, ಅಪ್ಪುವಿನ ಮಗ ಪೃಥ್ವಿ,
ಪೃಥ್ವಿಯಿಂದ ಸಕಲ ಜನನವು.

ಮನಸಿನ ಮಗ ಚಂದ್ರ, ನಯನದ ಮಗ ಸೂರ್ಯ,
ದೇಹದ ಮಗನಾತ್ಮ.
ಇಂತೀ ಅಪ್ಪ ತನುವೆಲ್ಲಕ್ಕೆಯು ಉತ್ಪತ್ಯವುಂಟು.
ಉತ್ಪತ್ಯರಹಿತ ಅಯೋನಿಜ ಶೂನ್ಯನಿರಾಳ
ನಮ್ಮ ಕೂಡಲಸಂಗಮದೇವಂಗೆ ಮಾತಾಪಿತರಿಲ್ಲ. || ೩೮ ||

೯೫೮

ಘನಗಂಭೀರ ಮಹಾಘನದೊಳಗೆ
ಘನಕ್ಕೆ ಘನವಾಗಿದ್ದನಯ್ಯಾ.
ಕೂಡಲಸಂಗಮದೇವಯ್ಯನೆಂಬ
ಮಹಾಬೆಳಗಿನ ಬೆಳಗಿನೊಳಗಿದ್ದೇನೆಂಬ ಶಬ್ದ
ಮುಗ್ಧವಾಮುದನೇನೆಂಬೆನಯ್ಯಾ? || ೩೯ ||

೯೫೯

ಸಮಸ್ತ ಕತ್ತಲೆಯ ಮಸಕವ ಕಳೆದಿಪ್ಪ ಇರವ ನೋಡಾ!
ಬೆಳಗಿಗೆ ಬೆಳಗು ಸಿಂಹಾಸನವಾಗಿ,
ಬೆಳಗು ಬೆಳಗ ಕೂಡಿದ ಕೂಟವ
ಕೂಡಲಸಂಗಯ್ಯ ತಾನೆ ಬಲ್ಲ! || ೪೦ ||

೯೬೦

ಅಂತರಂಗ ಬಹಿರಂಗ ಆತ್ಮಸಂಗ ಒಂದೆ ಅಯ್ಯಾ!
ನಾದಬಿಂದುಕಳಾತೀತ, ಆದಿಯಾಧಾರ ನೀನೆ ಅಯ್ಯಾ!
ನಿರೂಪದ ಕೂಟದ ಸುಖವ ಕೂಡಲಸಂಗಯ್ಯ ತಾನೆ ಬಲ್ಲ! || ೪೧ ||



೯೬೧

ಅಂಗದ ಮೇಲೆ ಲಿಂಗ ಆಯತವಾಗಿ
ಲಿಂಗಾರ್ಚನೆಯ ಮಾಡಿದಡೆ ಭವ ಹಿಂಗದೆಂದು,
ಪ್ರಾಣದ ಮೇಲೆ ಲಿಂಗ[ಸ್ವಾ]ಯತವ ಮಾಡಿ
ಎನ್ನಂತರಂಗ ಶುದ್ಧವ ಮಾಡಿ
ಲಿಂಗೈಕ್ಯದ ಹೊಲಬ ತೋರಿದನಯ್ಯಾ, ಚೆನ್ನಬಸವಣ್ಣನು.
ಕಾಯದ ಕಳವಳವು
ದಾಸೋಹದ ಮುಖದಲ್ಲಿ ಅಲ್ಲದೆ ಹರಿಯದೆಂದು
ಜಂಗಮಮುಖಲಿಂಗವಾಗಿ ಬಂದು
ಎನ್ನ ಶಿಕ್ಷಿಸಿ ರಕ್ಷಿಸಿ
ಎನ್ನ ಸಂಸಾರದ ಪ್ರಕೃತಿಯ ಹರಿದನಯ್ಯಾ, ಪ್ರಭುದೇವರು.
ಕೂಡಲಸಂಗಮದೇವರಲ್ಲಿ
ಪ್ರಭುದೇವರ ಚೆನ್ನಬಸವಣ್ಣನ
ಕರುಣದಿಂದಲಾನು ಬದುಕಿದೆನು. ॥ ೧ ॥

೯೬೨

ಅಂಗದ ಮೇಲೆ ಲಿಂಗಸಾಹಿತ್ಯವಾದ ಬಳಿಕ
ಸ್ಥಾವರದೈವಕ್ಕೆರಗಲಾಗದು.
ತನ್ನ ಪುರುಷನ ಬಿಟ್ಟು ಅನ್ಯಪುರುಷನ ಸಂಗ ಸಲ್ಲುವುದೇ?
ಕರಸ್ಥಲದ ದೇವನಿದ್ದಂತೆ
ಧರೆಯ ಮೇಲಣ ಪ್ರತಿಷ್ಠೆಗೆರಗಿದಡೆ
ನರಕದಲ್ಲಿಕ್ಕುವ ಕೂಡಲಸಂಗಮದೇವ. ॥ ೨ ॥

೯೬೩

ಅಂಗದಲಳವಟ್ಟ ಲಿಂಗಕ್ಕೆ ಅಂಗವೆ ಭಾಜನ,
ಪ್ರಾಣದ ಮೇಲಣ ಲಿಂಗಕ್ಕೆ ಮನವೆ ಭಾಜನ,
ಅರಿವಿನ ಮೇಲಣ ಲಿಂಗಕ್ಕೆ ನಿರ್ಭಾವವೆ ಭಾಜನ.
ಕೂಡಲಸಂಗಮದೇವಯ್ಯಾ,
ಪ್ರಭುದೇವರು ಆರೋಗಣೆಯ ಮಾಡುವಡೆ
ಭಕ್ತಿಪರಿಯಾಣವಲ್ಲದೆ ಬೇರೆ ಭಾಜನವ ಕಾಣೆನು. ॥ ೩ ॥

೯೬೪

ಅಂಗದಲ್ಲಿ ಅರ್ಪಿತವಾದ ಸುಖವು
ಲಿಂಗದಲ್ಲಿ ಲೀಯವಾಯಿತ್ತೆಂದಡೆ
ಅಂಗವ ಲಿಂಗದಲ್ಲಿ ಮತ್ತೆ ನಿಕ್ಷೇಪಿಸಿಹೆನೆಂಬ
ಕಾರಣವೇಕಯ್ಯಾ ಶರಣಂಗೆ?
ಪ್ರಾಣನ ಲಿಂಗದಲ್ಲಿ ಸವೆಸಿ ನಿರವಯವಾಗಬಹುದಲ್ಲದೆ
ಕರ್ಮದಿಂದಾದ ಕಾಯವ ಸವೆಸಿ ಸಯವಪ್ಪ ಪರಿ ಎಂತು ಹೇಳಯ್ಯಾ?
ಕೂಡಲಸಂಗಮದೇವಾ,
ನಿಮ್ಮ ಶರಣರು ಕಾಯವಿಡಿದಿರ್ದು ನಿರ್ಮಾಯವಾಗಿಪ್ಪುದ
ಹೇಳಯ್ಯಾ ನಿಮ್ಮ ಧರ್ಮ. ॥ ೪ ॥

೯೬೫

ಅಂಗದಲ್ಲಿ ಲಿಂಗಸಂಗ, ಲಿಂಗದಲ್ಲಿ ಅಂಗಸಂಗವ ಮಾಡಿಹೆನೆಂದಡೆ,
ಸಂದು ಭೇದವಳಿವ ಪರಿ ಎಂತು ಹೇಳಾ?
ಅಂಗದಲ್ಲಿ ಸಂಗವ ಮಾಡಿಹೆನೆಂದಡೆ,
ಮುಂದುಗೆಡಿಸಿ ಕಾಡುವನು ಶಿವನು.
ಕಾಮವೆಂಬ ಬಯಕೆಯಲ್ಲಿ
ಅಳಲಿಸುವ ಬಳಲಿಸುವ ಶಿವನು.
ಲಿಂಗದಲ್ಲಿ ಅಂಗವ ತಂದು ನಿಕ್ಷೇಪಿಸಿಹೆನೆಂದಡೆ,
ಅಂಗದಿಂದ ಅತ್ತತ್ತಲೋಸರಿಸಿ ಓಡುವನಯ್ಯಾ ಶಿವನು.
ಹೆಣ್ಣು ಗಂಡಾದಡೆ ಸಂಗಕ್ಕೆ ಒಲಿವನು ಕೇಳಾ ಶಿವನು.
ಕೂಡಲಸಂಗಮದೇವರ ಬೆರಸುವಡೆ,
ಭಿನ್ನವಿಲ್ಲದೆ ಕಲಿಯಾಗಿರಬೇಕು ಕೇಳಾ ಅವ್ವಾ. ॥ ೫ ॥

೯೬೬

ಅಂಗಲಿಂಗಸಂಗಸುಖಸಾರಾಯಪದಸುಭಾವ
ಲಿಂಗವಂತಂಗಲ್ಲದೆ ಸಾಧ್ಯವಾಗದು ನೋಡಾ.
ಏಕಲಿಂಗಪರಿಗ್ರಾಹಕನಾದ ಬಳಿಕ,
ಆ ಲಿಂಗನಿಷ್ಠೆ ಗಟ್ಟಿಗೊಂಡು,
ಸ್ವಯಲಿಂಗಾರ್ಚನೋಪಚಾರ ಅರ್ಪಿತ ಪ್ರಸಾದಭೋಗಿಯಾಗಿ,
ವೀರಶೈವಸಂಪನ್ನನೆನಿಸಿ ಲಿಂಗವಂತನಾದ ಬಳಿಕ
ತನ್ನಂಗಲಿಂಗಸಂಬಂಧಕ್ಕನ್ಯವಾದ ಜಡಭೌತಿಕ ಪ್ರತಿಷ್ಠೆಯನುಳ್ಳ

ಭವಿಶೈವದೈವಕ್ಷೇತ್ರತೀರ್ಥಂಗಳಾದಿಯಾದ ಹಲವು ಲಿಂಗಾರ್ಚನೆಯ
ಮನದಲ್ಲಿ ನೆನೆ[ಯ]ಲಿಲ್ಲ, ಮಾಡಲೆಂತೂ ಬಾರದು.
ಇಷ್ಟು ಗುಣವಳವಟ್ಟಿತ್ತಾದಡೆ
ಆತನೀಗ ಏಕಲಿಂಗನಿಷ್ಠಾಚಾರಯುಕ್ತನಾದ
ವೀರಮಾಹೇಶ್ವರನು.
ಇವರೊಳಗೆ ಅನುಸರಿಸಿಕೊಂಡು ನಡೆದನಾದಡೆ
ಗುರುಲಿಂಗಜಂಗಮಪಾದೋದಕಪ್ರಸಾದ ಸದ್ಭಕ್ತಿಯುಕ್ತವಾದ
ವೀರಶೈವ ಷಡುಸ್ಥಲಕ್ಕೆ ಹೊರಗಾಗಿ ನರಕಕ್ಕಿಳಿವನು ಕಾಣಾ,
ಕೂಡಲಸಂಗಮದೇವಾ. ॥ ೬ ॥

೯೬೭

ಅಂಗವಿಕಾರವಳಿದು ಸತಿಯ ಸಂಗವರಿಯ ನೋಡಾ,
ದೇಹಗುಣಂಗಳಿಲ್ಲಾಗಿ ನಿರ್ದೇಹಪ್ರಸಾದಿ ನೋಡಯ್ಯಾ,
ಅಶನವ್ಯಸನಾದಿಗಳೆಲ್ಲವು ಬೆಂದವು ನೋಡಯ್ಯಾ.
ಈ ಎಲ್ಲ ಗುಣಂಗಳಳಿದು ಕೂಡಲಸಂಗಮದೇವರಲ್ಲಿ
ಸಾವಧಾನಿ ಪ್ರಸಾದಿ ಚೆನ್ನಬಸವಣ್ಣನು. ॥ ೭ ॥

೯೬೮

ಅಂಗುಲ ಹನ್ನೆರಡು ಕೂಡಲು ಒಂದು ಗೇಣು,
ಗೇಣು ಎರಡು ಕೂಡಲು ಒಂದು ಮೊಳ,
ಮೊಳವೆರಡು ಕೂಡಲು ಒಂದು ಹಸ್ತ,
ಹಸ್ತವೆರಡು ಕೂಡಲು ಒಂದು ಮಾರು,
ಮಾರೆರಡು ಕೂಡಲು ಒಂದು ಜಂಘೆ,
ಜಂಘೆ ಏಳುನೂರೆಪ್ಪತ್ತು ಕೂಡಲು ಒಂದು ಪಾದಚ್ಛಾಯ,
ಪಾದಚ್ಛಾಯವೆರಡು ಸಾವಿರದೆಂಟುನೂರು ಕೂಡಲು ಒಂದು ಕೂಗಳತೆ,
ಕೂಗಳತೆ ನಾಲ್ಕು ಕೂಡಲು ಒಂದು ಹರದಾರಿ,
ಹರದಾರಿ ನಾಲ್ಕು ಕೂಡಲು ಒಂದು ಯೋಜನ,
ಅಂಥ ಯೋಜನ ನಾಲ್ಕು ಚೌಕಕ್ಕು ಹನ್ನೆರಡು ಹನ್ನೆರಡು ಕೂಡಲು
ಬಳಸಿ ನಾಲ್ವತ್ತೆಂಟು ಯೋಜನ ಪ್ರಮಾಣಿನ ಕಟ್ಟಳೆಯಾಯಿತ್ತು.
ಇಂತಪ್ಪ ಕಟ್ಟಳೆಯಾಗಿದ್ದ ಕಲ್ಯಾಣದೊಳಗಿರುವ ಗಣಂಗಳೆಲ್ಲರನೂ
ಕೂಡಲಸಂಗಯ್ಯಾ
ನಿಮ್ಮೊಳು ಕಂಡು ಸುಖಿಯಾಗಿರ್ದೆನು. ॥ ೮ ॥

೯೬೯

ಅಂಜದಿರಂಜದಿರು ಹಂಬೆ, ಓಡದಿರು ಓಡದಿರು ಹೇಡಿ,
ಆಳಿನಾಳು ಕೀಳಾಳು ಬಹರೆ
ಪೋಗದಿರು, ಹೋಗದಿರು, ಕೂಡಲಸಂಗಮದೇವಾ. || ೯ ||

೯೭೦

ಅಂಜದಿರು ಅಳುಕದಿರು,
ಅಂಜದಿರು ಅಳುಕದಿರು, ಕುಂದದಿರು ಕುಸಿಯದಿರು.
ಏನೊ ಎಂತೊ ಎಂದು ಚಿಂತಿಸದಿರು,
ನಿನ್ನ ನಾನೇನುವನೂ ಬೇಡೆ, ಕೂಡಲಸಂಗಮದೇವಾ. || ೧೦ ||

೯೭೧

ಅಂತರಂಗದೊಳಗಿರ್ದ ನಿರವಯಲಿಂಗವನು ಸಾವಯಲಿಂಗವ ಮಾಡಿ,
ಶ್ರೀಗುರುಸ್ವಾಮಿ ಕರಸ್ಥಲಕ್ಕೆ ತಂದುಕೊಟ್ಟನಾಗಿ,
ಆ ಇಷ್ಟಲಿಂಗವೆ ಅಂತರಂಗವನಾವರಿಸಿ
ಅಂತರಂಗದ ಕರಣಂಗಳೆ ಕಿರಣಂಗಳಾಗಿ
ಬೆಳಗುವ ಚಿದಂಶವೆ ಪ್ರಾಣಲಿಂಗವು,
ಆ ಮೂಲಚೈತನ್ಯವೆ ಭಾವಲಿಂಗವು.
ಇದನರಿದು, ನೋಡುವ ನೋಟ ಭಾವಪರಿಪೂರ್ಣವಾಗಿ
ತಾನು ತಾನಾದಲ್ಲದೆ, ಇದಿರಿಟ್ಟು ತೋರುವುದಿಲ್ಲವಾಗಿ
ಅಖಂಡ ಪರಿಪೂರ್ಣವಪ್ಪ ನಿಜವು ತಾನೆ, ಕೂಡಲಸಂಗಮದೇವ. || ೧೧ ||

೯೭೨

ಅಂದಾ ತ್ರಿಪುರವನುರುಹಿದಾತ ವೀರ,
ಅಂದಾ ದಕ್ಷನ ಯಾಗವ ಕೆಡಿಸಿದಾತ ವೀರ,
ಕಡುಗಲಿ ನರಸಿಂಹನನುಗಿದಾತ ವೀರ,
ನಮ್ಮ ಹರನ ಲಲಾಟದಲ್ಲಿ ಜನಿಸಿದಾತ ವೀರ,
ನಮ್ಮ ಕೂಡಲಸಂಗನಲ್ಲಿ ಮಡಿವಾಳ ವೀರ. || ೧೨ ||

೯೭೩

ಅಂಧಕಾರವೆಂಬ ಗಹ್ವರದೊಳಗೆ ನಿದ್ರೆಯೆಂಬ ರಾಕ್ಷಸಿ ಗ್ರಹಿಸಿ,
ವೀರರ ನಿಗ್ರಹಿಸಿ ನೀರು ಮಾಡಿ, ಧೀರರ ಧೃತಿಗೆಡಿಸಿ,

ಶಾಪಾನುಗ್ರಹಸಮರ್ಥರ ಸತ್ತಂತಿರಿಸಿ,
ನಿಚ್ಚ ನಿಚ್ಚ ಜೀವನಾಶವ ಮಾಡುತ್ತಿಹಳು ನೋಡಾ,
ಕೂಡಲಸಂಗಮದೇವಾ. || ೧೩ ||

೯೭೪

ಅಕ್ಷರ, ಗಣಿತ, ಗಾಂಧರ್ವ, ಜ್ಯೋತಿಷ,
ತರ್ಕ, ವ್ಯಾಕರಣ, ನಿಘಂಟು, ಸಾಲಿಹೋತ್ರ, ಛಂದಸ್ಸು,
ಗ್ರಹವಾದ, ಗಾರುಡ, ದ್ಯೂತ, ವೈಶಿಕಶಾಸ್ತ್ರ,
ಸಾಮುದ್ರಿಕಶಾಸ್ತ್ರ, ಅಶ್ವಶಿಕ್ಷೆ, ಗಜಶಿಕ್ಷೆ, ಗೋಕರ್ಣದಾಡಾಬಂಧ,
ಮೂಲಿಕಾಸಿದ್ಧಿ, ಭೂಚರತ್ವ, ಖೇಚರತ್ವ,
ಅತೀತ, ಅನಾಗತ, ವರ್ತಮಾನ, ಸ್ಥೂಲ, ಸೂಕ್ಷ್ಮ,
ಇಂದ್ರಜಾಲ, ಮಹೇಂದ್ರಜಾಲ, ಒಡ್ಯಾಣಬಂಧಚೇಷ್ಟೆ,
ಪರಕಾಯಪ್ರವೇಶ, ದೂರದೃಷ್ಟಿ, ದೂರಶ್ರವಣ,
ಋಗ್ಯಜುಸ್ಸಾಮಾಥರ್ವಣಾದ್ಯನೇಕ ಶ್ರುತಿಸ್ಮೃತಿ,
ಪುರಾಣೇತಿಹಾಸಾದಿ ಆಯುರ್ದರ್ಶಿ ನೈಷ್ಟಿಕಾಮುಷ್ಟಿಚಿಂತನೆ,
ಚೋರವಿದ್ಯೆ, ಅಮೃತೋದಯ, ಭಾಷಾಪರೀಕ್ಷೆ,
ವೀಣಾವಿದ್ಯೆ, ಭೃಂಗಿವಿದ್ಯೆ, ಭರತ,
ಮಲ್ಲವಿದ್ಯೆ, ಶಸ್ತ್ರವಿದ್ಯೆ, ಧನುರ್ವಿದ್ಯೆ,
ಡೊಂಬವಿದ್ಯೆ, ಅಗ್ನಿಸ್ತಂಭ, ಜಲಸ್ತಂಭ, ವಾಯುಸ್ತಂಭ,
ವಾದವಶ್ಯ, ಅಂಜನಸಿದ್ಧಿ, ಘುಟಿಕಾಸಿದ್ಧಿ, ಮಂತ್ರಸಿದ್ಧಿ, ತಂತ್ರಸಿದ್ಧಿ
ಇವೆಲ್ಲವಂ ಕಲಿತಡೇನು?
ಚೌಷಷ್ಟಿವಿದ್ಯಕಲಾಪ್ರವೀಣನೆನಿಸಿಕೊಂಬನಲ್ಲದೆ,
ಲಿಂಗಭಕ್ತನೆನಿಸಿಕೊಂಬುದಿಲ್ಲ.
ಲಿಂಗವುಳ್ಳ ನಿಜಶರಣಂಗೆ ಇವರೆಲ್ಲರು [ಸರಿ ಬಾರರು].
ಸಹಜ ಸದ್ಭಕ್ತಿಯಿಲ್ಲದವರನೊಲ್ಲ
ನಮ್ಮ ಕೂಡಲಸಂಗಮದೇವರು. || ೧೪ ||

೬೭೫

ಅಗ್ಘವಣಿಯವಸರ ಸದಾಚಾರ ಸತ್ಕ್ರಿಯೆಯೆಂಬ ಭೂಮಿಯ ಮೇಲೆ
ಸರ್ವಶುದ್ಧವೆಂಬ ಗೋಮಯುವ ತಂದು,
ವಿನಯಾರ್ಥವೆಂಬ ಉದಕದಿಂದ ಸಮ್ಮಾರ್ಜನೆಯಂ ಮಾಡಿ
ತನುವಿನ ಅವಗುಣಂಗಳಂ ಹುಡಿಗುಟ್ಟಿ ರಂಗವಾಲೆಯನಿಕ್ಕಿ,

ಅಕ್ಷಯವೆಂಬ ಬಿಂದಿಗೆಯಲ್ಲಿ ಪರಮಾನಂದವೆಂಬ ಅರ್ಘ್ಯವಣೆಯ ತುಂಬಿ,
ಸಮರಸದಿಂದ ಮಜ್ಜನಕ್ಕೆರೆಯಲು •
ಹೃದಯಕಮಲವೆಂಬ ಪುಷ್ಪಮಂ ಸಲಿಸಿ,
ಸೌಖ್ಯತರ ಶಾಂತಿಯೆಂಬ ಗಂಧವನಿಟ್ಟು,
ಅಕ್ಷಯವೆಂಬ ಅಕ್ಷತೆಯನಳವಡಿಸಿ,
ಸದ್ಭಾವವೆಂಬ ಧೂಪಮಂ ಬೀಸಿ, ಸುಜ್ಞಾನವೆಂಬ ನಿವಾಳಿಯನೆತ್ತಿ
ನಿತ್ಯನಿರಂಜನವೆಂಬ ನೀರಾಜನವಂ ಬೆಳಗಲು,
ಬ್ರಹ್ಮನಾದವೆಂಬ ಘಂಟೆಯಂ ಬಾರಿಸಲು
ನಿತ್ಯಲಿಂಗಾರ್ಚನೆಗೆಡೆಮಾಡಲು,
ಇದರ ವರ್ಮಕರ್ಮಸ್ಥಿತಿಯನರಿದು ಶಿವಲಿಂಗಾರ್ಚನೆಯ ಮಾಡಬಲ್ಲಡೆ,
ಮರ್ತ್ಯದಲ್ಲಿ ನಾನಾರನೂ ಕಾಣೆನು.
ಕೂಡಲಸಂಗಮದೇವಾ,
ಪ್ರಭು ಶಿವಲಿಂಗಾರ್ಚನೆಯಂ ಮಾಡಲು, ನಾನೆ ಪರಿಚಾರಕನು. ॥ ೧೫ ॥

೯೭೬

ಅಜ್ಞಾನದಿಂದ ಹುಟ್ಟಿತ್ತು ಅಹಂ ಮಮತೆ,
ಅಜ್ಞಾನದಿಂದ ಹುಟ್ಟಿತ್ತು ಮನಸ್ಸಂಚಲ,
ಅಜ್ಞಾನದಿಂದ ಹುಟ್ಟಿತ್ತು ಇಂದ್ರಿಯೋದ್ರೇಕ,
ಅಜ್ಞಾನದಿಂದ ಹುಟ್ಟಿತ್ತು ದೇಹಮೋಹ,
ಅಜ್ಞಾನದಿಂದ ಹುಟ್ಟಿತ್ತು ಅತಿಕಾಂಕ್ಷೆ,
ಅಜ್ಞಾನದಿಂದ ಹುಟ್ಟಿತ್ತು ತ್ರಿವಿಧಮಲ,
ಅಜ್ಞಾನದಿಂದ ಹುಟ್ಟಿತ್ತು ಸಂಸಾರ,
ಅಜ್ಞಾನದಿಂದ ಹುಟ್ಟಿತ್ತು ರಾಗದ್ವೇಷ,
ಅಜ್ಞಾನದಿಂದ ಹುಟ್ಟಿತ್ತು ಸರ್ವಪ್ರಪಂಚು,
ಅಜ್ಞಾನದಿಂದ ಹುಟ್ಟಿತ್ತು ಸರ್ವದುಃಖ,
ಕೂಡಲಸಂಗಮದೇವಾ, ಈ ಅಜ್ಞಾನಭ್ರಮೆಯ ಕೆಡಿಸಿದಲ್ಲದೆ
ನಿಮ್ಮನೊಡಗೂಡಬಾರದಯ್ಯಾ. ॥ ೧೬ ॥

೯೭೭

ಅಜ್ಞಾನ ಹಿಂಗಿತ್ತು, ಅಹಂಕಾರವಡಗಿತ್ತು,
ಅರಿಷಡ್ವರ್ಗಂಗಳು ಹರಿಹಂಚಾದವು,
ಅಷ್ಟಮದಂಗಳು ಪಟ್ಟಪರಿಯಾದವು,
ದಶವಾಯುಗಳು ವಶವರ್ತಿಯಾದವು,

ಇಂದ್ರಿಯಂಗಳು ಬಂಧನವಡೆದವು,
ಮನೋವಿಕಾರ ನಿಂದಿತ್ತು.
ಕೂಡಲಸಂಗಮದೇವಾ,
ನಿಮ್ಮಲ್ಲಿ ನಮ್ಮ ಮಹಾದೇವಿಯಕ್ಕಗಳ
ನಿರ್ವಾಣದ ಸಹಜ ನಿಲವ ಕಂಡು,
ನಮೋ ನಮೋ ಎನುತಿರ್ದೆನಯ್ಯಾ, ಪ್ರಭುವೆ. || ೧೭ ||

೯೭೮

ಅದ್ವೈತವ ಅಂತರಂಗದಲ್ಲಿ ಅರಿದು
ಹೊರಗೆ ದಾಸೋಹವ ಮಾಡದಿರ್ದಡೆ
ಎಂತಯ್ಯಾ ಉಭಯ ಸಂದೇಹದಲ್ಲಿ ನಿಜವಪ್ಪುದು?
ನಿಮ್ಮ ಶರಣರ ಮನ ನೊಂದಲ್ಲಿ
ನಾನು ಸೈರಿಸಿಕೊಂಬೆನೆಂತಯ್ಯಾ?
ಕೂಡಲಸಂಗಮದೇವಾ,
ಹಾವು ಸಾಯದೆ ಕೋಲು ನೋಯದಂತೆ ಮಾಡಾ, ನಿಮ್ಮ ಧರ್ಮ. || ೧೮ ||

೯೭೯

ಅನಂತಕಾಲ ತರು ಗಿರಿಗಳ ಹೊಕ್ಕು ತಪವ ಮಾಡುವುದರಿಂದ
ಒಂದು ದಿನ ಲಿಂಗಪೂಜೆ ಸಾಲದೆ?
ಅನಂತಕಾಲ ಲಿಂಗಪೂಜೆಯ ಮಾಡುವುದರಿಂದ
ಒಂದು ದಿನ ಗುರುಚರಣದ ಸೇವೆ ಸಾಲದೆ?
ಅನಂತಕಾಲ ಗುರುಚರಣದ ಸೇವೆಯ ಮಾಡುವುದರಿಂದ
ಒಂದು ದಿನ ಜಂಗಮಕ್ಕೆ ತೃಪ್ತಿಯ ಮಾಡುವುದು ಸಾಲದೆ?
ಅನಂತಕಾಲ ಜಂಗಮಕ್ಕೆ ತೃಪ್ತಿಯ ಮಾಡುವುದರಿಂದ
ಒಂದು ನಿಮಿಷ ಕೂಡಲಸಂಗಯ್ಯಾ
ನಿಮ್ಮ ಶರಣರನುಭಾವ ಸಾಲದೆ? || ೧೯ ||

೯೮೦

ಅನುದಿನದಲ್ಲಿ ಮಜ್ಜನಕ್ಕೆರೆದು ನೆನೆದು ಲಿಂಗ ಕರಿಗಟ್ಟಿತ್ತು.
ನೀರನೊಲ್ಲದು, ಬೋನವ ಬೇಡದು, ಕರೆದಡೆ ಓ ಎನ್ನದು.
ಸ್ಥಾವರ ಪೂಜೆ, ಜಂಗಮದ ಉದಾಸೀನ–
ಕೂಡಲಸಂಗಯ್ಯನೊಲ್ಲ ನೋಡಾ. || ೨೦ ||

೯೮೧

ಅನುಭಾವವಿಲ್ಲದ ಭಕ್ತಿ ಅನುವಿಂಗೆ ಬಾರದು,
ಅನುಭಾವವಿಲ್ಲದ ಲಿಂಗ ಸಮರಸಸುಖಕ್ಕೆ ನಿಲುಕದು,
ಅನುಭಾವವಿಲ್ಲದ ಪ್ರಸಾದ ಪರಿಣಾಮವ ಕೊಡದು,
ಅನುಭಾವವಿಲ್ಲದೆ ಏನನೂ ಅರಿಯಬಾರದು.
ತನ್ನಲ್ಲಿ ತಾ ಸನ್ನಿಹಿತವುಳ್ಳಡೆ
ಶಿವಶರಣರ ಸಂಗವೇತಕ್ಕೆನಲುಂಟೆ?
ಕೂಡಲಸಂಗಮದೇವಯ್ಯಾ,
ನಿಮ್ಮ ಅನುಭಾವ
ಮಾತಿನ ಮಥನವೆಂದು ನುಡಿಯಬಹುದೆ ಪ್ರಭುವೆ? || ೨೧ ||

೯೮೨

ಅನ್ಯದೈವವ ಬಿಟ್ಟುದಕಾವುದು ಕ್ರಮವೆಂದಡೆ:
ಅನ್ಯದೈವದ ಮಾತನಾಡಲಾಗದು,
ಅನ್ಯದೈವದ ಪೂಜೆಯ ನೋಡಲಾಗದು,
ಸ್ಥಾವರಲಿಂಗಕ್ಕೆರಗಲಾಗದು,
ಆ ಲಿಂಗದ ಪ್ರಸಾದವ ಕೊಳಲಾಗದು,
ಇಷ್ಟು ನಾಸ್ತಿಯಾದಡೆ
ಅನ್ಯದೈವವ ಬಿಟ್ಟು ಭಕ್ತನೆನಿಸುವನು.
ಇವರೊಳಗನುಸರಣೆಯ ಮಾಡಿದನಾದಡೆ,
ಕುಂಭೀಪಾಕ ನಾಯಕನರಕದಲ್ಲಿಕ್ಕುವ
ನಮ್ಮ ಕೂಡಲಸಂಗಮದೇವರು. || ೨೨ ||

೯೮೩

ಅನ್ಯವಿಚಾರವ ಮರೆದು ನಿಮ್ಮ ವಿಚಾರವಡೆಗೊಂಡಿತ್ತಾಗಿ,
ಪ್ರಾಣದ ನೆಲೆಗೆಟ್ಟಿತ್ತಯ್ಯಾ,
ದಶವಾಯುಗಳ ಸಂಚ ತಪ್ಪಿತ್ತಯ್ಯಾ,
ಕರಣಂಗಳ ಲಿಂಗಕಿರಣಂಗಳು ನುಂಗಿದವಯ್ಯಾ,
ಒಳಗೆ ಕರತಳಾಮಳಕಗೊಂಡೆನಯ್ಯಾ,
ಹೊರಗೆ ಅದೆಂತೆಂದರಿಯದೆ ನೀನೆ ಗತಿಯಾಗಿದ್ದೆ,
ಕೂಡಲಸಂಗಮದೇವಾ. || ೨೩ ||

೯೮೪

ಅಮೂಲ್ಯನಪ್ರಮಾಣನಗೋಚರಲಿಂಗ,
ಆದಿಮಧ್ಯಾವಸಾನಗಳಿಲ್ಲದ ಸ್ವತಂತ್ರಲಿಂಗ,
ನಿತ್ಯನಿರ್ಮಳಲಿಂಗ,
ಅಯೋನಿಸಂಭವ ನಮ್ಮ ಕೂಡಲಸಂಗಮದೇವರು. ॥ ೨೪ ॥

೯೮೫

ಅಯ್ಯಾ ಎನಗೆ ರುದ್ರಾಕ್ಷಿಯೆ ಸರ್ವಪಾವನವು,
ಅಯ್ಯಾ ಎನಗೆ ರುದ್ರಾಕ್ಷಿಯೆ ಸರ್ವಕಾರಣವು,
ಅಯ್ಯಾ ಎನಗೆ ರುದ್ರಾಕ್ಷಿಯೆ ಸರ್ವಸಾಧನವು,
ಅಯ್ಯಾ ಎನಗೆ ರುದ್ರಾಕ್ಷಿಯೆ ಸರ್ವಸಿದ್ಧಿ,
ಅಯ್ಯಾ ಎನಗೆ ರುದ್ರಾಕ್ಷಿಯೆ ಸರ್ವಪಾಪಕ್ಷಯವು.
ಅಯ್ಯಾ ನಿಮ್ಮ ಪಂಚವಕ್ತ್ರಂಗಳೆ
ಪಂಚಮುಖದ ರುದ್ರಾಕ್ಷಿಗಳಾದವಾಗಿ,
ಅಯ್ಯಾ ಕೂಡಲಸಂಗಮದೇವಯ್ಯಾ,
ಎನ್ನ ಮುಕ್ತಿಪಥಕ್ಕೆ ಶ್ರೀಮಹಾರುದ್ರಾಕ್ಷಿಯೆ ಸಾಧನವಯ್ಯಾ. ॥ ೨೫ ॥

೯೮೬

ಅಯ್ಯಾ, ಎನ್ನ ಕಾಯದಲ್ಲಿ ಮಡಿವಾಳನ ತೋರಿದ,
ಎನ್ನ ಮನದಲ್ಲಿ ತನ್ನ ನಿಲವ ತೋರಿದ,
ಎನ್ನ ಅರಿವಿನಲ್ಲಿ ನಿಮ್ಮ ತೋರಿದ,
ಇಂತೀ ತ್ರಿವಿಧಸ್ವಾಯತವನು
ಎನ್ನ ಸರ್ವಾಂಗದಲ್ಲಿ ಪ್ರತಿಷ್ಠಿಸಿ ತೋರಿದ.
ಕೂಡಲಸಂಗಮದೇವಯ್ಯಾ,
ಚೆನ್ನಬಸವಣ್ಣನ ಕರುಣದಿಂದ
ಮಡಿವಾಳನೆಂಬ ಪರುಷ ಸಾಧ್ಯವಾಯಿತ್ತೆನಗೆ. ॥ ೨೬ ॥

೯೮೭

ಅಯ್ಯಾ, ಎನ್ನ ಕೈಯ ದರ್ಪಣ [ಸಂದಿತ್ತು],
ಆಸ್ಥಾನದ ಜ್ಯೋತಿ ನಂದಿತ್ತು,
ಸರಸ್ವತಿಯ ಭಂಡಾರ ಸೂರೆಹೋಯಿತ್ತು,

ನಮ್ಮಯ್ಯ ಕಿನ್ನರಿಬೊಮ್ಮಣ್ಣ ಹೋದನು.
ತಾರಾಮಂಡಲದಲ್ಲಿ ಕೇಳಿಸುವ ತಂದೆ ಹೋದನು, ನಾನೆಲ್ಲಿ ಅರಸುವೆನು?
ಕೂಡಲಸಂಗಮದೇವಯ್ಯ
ತನ್ನಾಳು ಕಿನ್ನರಿಬೊಮ್ಮಣ್ಣನನೊಯ್ದಡೆ ನಾನೆಲ್ಲಿ ಅರಸುವೆನು? || ೨೭ ||

೯೮೮

ಅಯ್ಯಾ, ಎನ್ನ ಹೃದಯದಲ್ಲಿ ವ್ಯಾಪ್ತವಾಗಿಹ ಪರಮ ಚಿದ್ಬೆಳಗ
ಹಸ್ತಮಸ್ತಕ ಸಂಯೋಗದಿಂದೊಂದುಗೂಡಿ
ಮಹಾಬೆಳಗ ಮಾಡಿದಿರಲ್ಲಾ.
ಅಯ್ಯಾ, ಎನ್ನ ಮಸ್ತಕದೊಳಗೊಂದುಗೂಡಿದ ಮಹಾಬೆಳಗ ತಂದು
ಭಾವದೊಳಗಿಂಬಿಟ್ಟಿರಲ್ಲಾ,
ಅಯ್ಯಾ, ಎನ್ನ ಭಾವದೊಳಗೆ ಕೂಡಿದ ಮಹಾಬೆಳಗ ತಂದು
ಮನಸಿನೊಳಗಿಂಬಿಟ್ಟಿರಲ್ಲಾ.
ಅಯ್ಯಾ, ಎನ್ನ ಮನಸಿನೊಳು ಕೂಡಿದ ಮಹಾಬೆಳಗ ತಂದು
ಕಂಗಳೊಳಗಿಂಬಿಟ್ಟಿರಲ್ಲಾ.
ಅಯ್ಯಾ, ಎನ್ನ ಕಂಗಳೊಳು ಕೂಡಿದ ಮಹಾಬೆಳಗ ತಂದು
ಕರಸ್ಥಲದೊಳಗಿಂಬಿಟ್ಟಿರಲ್ಲಾ.
ಅಯ್ಯಾ, ಎನ್ನ ಕರಸ್ಥಲದಲ್ಲಿ ಥಳಥಳಿಸಿ ಬೆಳಗಿ ಹೊಳೆಯುತ್ತಿಪ್ಪ
ಅಖಂಡತೇಜವನೆ ಇಷ್ಟಲಿಂಗವೆಂಬ ದೃಷ್ಟವ ತೋರಿ
ನಿಶ್ಚಯವ ಶ್ರೋತ್ರದಲ್ಲಿ ಸೃಜಿಸಿದಿರಲ್ಲಾ.
ಅಯ್ಯಾ, ಎನ್ನ ಶ್ರೋತ್ರದಲ್ಲಿ ಸೃಜಿಸಿದ ಸುಮಂತ್ರದೊಳಗೆ
ನೀವು ನಿಮ್ಮ ಮಹತ್ವವ ಹುದುಗಿದಿರಲ್ಲಾ,
ಅಯ್ಯಾ, ಎನ್ನ ಆರಾಧ್ಯ ಕೂಡಲಸಂಗಮದೇವಾ,
ಎನ್ನೊಳಗೆ ನಿಮ್ಮಿರವ ಈ ಪರಿಯಲ್ಲಿ ಕಾಣಿಸುತ್ತಿರ್ದಿರಲ್ಲಾ. || ೨೮ ||

೯೮೯

ಅಯ್ಯಾ, ಎಳಗರು ತಾಯನರಸಿ ಬಳಲುವಂತೆ
ನಾ ನಿಮ್ಮನರಸಿ ಬಳಲುತ್ತಿದ್ದೇನೆ.
ಅಯ್ಯಾ, ನೀವೆನ್ನ ಮನಕ್ಕೆ ಪ್ರಸನ್ನವಾಗಿ ಕಾರುಣ್ಯವ ಮಾಡು.
ಅಯ್ಯಾ, ನೀವೆನ್ನ ಮನಕ್ಕೆ ನೆಲೆವನೆಯಾಗಿ
ಕಾರುಣ್ಯವ ಮಾಡು, ಕಾರುಣ್ಯವ ಮಾಡು.
ನೀನಿನಿತು ಲೇಸನೀಯಯ್ಯಾ,
ಅಂಬೇ ಅಂಬೇ ಕೂಡಲಸಂಗಮದೇವಾ. || ೨೯ ||

೯೯೦

ಅಯ್ಯಾ, ಕೊಟ್ಟ ಲಿಂಗವ ಮರಳಿ ಕೊಂಡು ಬಾ ಎಂದು
ಎನ್ನನಟ್ಟಿದನಯ್ಯಾ ಶಶಿಧರನು ಮರ್ತ್ಯಕ್ಕೆ.
ನಿಮ್ಮ ಮುಖದಿಂದ ಎನ್ನ ಭವ ಹರಿವುದೆಂದು
ಹರಹಿಕೊಂಡಿದ್ದೆನಯ್ಯಾ ದಾಸೋಹವನು.
ನಿಮ್ಮ ಬರವ ಹಾರಿ ಸವೆದವು ಒಂದನಂತ ದಿನಗಳು,
ಇಂದೆನ್ನ ಪುಣ್ಯದ ಫಲದಿಂದ ಎನಗೆ ಗೋಚರವಾದಿರಿ,
ಹಿಂದಣ ಸಂದೇಹ ಸೂತಕ ಹಿಂಗಿತ್ತು.
ಎನ್ನ ಪ್ರಾಣಲಿಂಗವು ನೀವೇ ಆಗಿ, ಎನ್ನ ಸರ್ವಾಂಗದಲ್ಲಿ ಸನ್ನಿಹಿತವಾಗಿ,
ಎನ್ನ ಚಿಂತೆಯ ನಿಶ್ಚಿಂತೆಯ ಮಾಡಾ ಕೂಡಲಸಂಗಮದೇವ ಪ್ರಭುವೆ. ॥ ೩೦ ॥

೯೯೧

ಅಯ್ಯಾ, ನಾನು ದಾಸೋಹವ ಮಾಡುವೆನಲ್ಲದೆ, ಸಮಯುವನರಿಯೆ,
ಅಯ್ಯಾ, ನಾನು ಭಕ್ತಿಯ ಮಾಡುವೆನಲ್ಲದೆ, ಭಾವವನರಿಯೆ.
ಸ್ಥಳಕುಳವ ವಿಚಾರಿಸಿದಡೆ, ಎನ್ನಲ್ಲಿ ಏನೂ ಹುರುಳಿಲ್ಲ,
ನಿಮ್ಮ ಶರಣರ ಸೋಂಕಿನಲ್ಲಿ ಶುದ್ಧನಾದೆನು.
ಕೂಡಲಸಂಗಮದೇವರು ಸಾಕ್ಷಿಯಾಗಿ,
ಮಡಿವಾಳ ಮಾಚಿತಂದೆಗಳ ಶ್ರೀಪಾದಕ್ಕೆ
ನಮೋ ನಮೋ ಎಂದು ಬದುಕಿದೆನು. ॥ ೩೧ ॥

೯೯೨

ಅಯ್ಯಾ, ನಿಮ್ಮ ಮಹಾನುಭಾವಿಗಳ ಸಂಗದಿಂದೆನ್ನ
ತನು ಶುದ್ಧವಾಯಿತ್ತು, ಮನ ಶುದ್ಧವಾಯಿತ್ತು, ಧನ ಶುದ್ಧವಾಯಿತ್ತು,
ಎನ್ನ ಸರ್ವಾಂಗಶುದ್ಧವಾಯಿತ್ತು,
ಮಾರಿಕಲ್ಲ ಪುತ್ಥಳಿಯುನಪ್ಪಿಕೊಂಡಂತಾಯಿತ್ತು.
ಕೂಡಲಸಂಗಮದೇವಾ,
ನಿಮ್ಮ ಶರಣ ಪ್ರಭುದೇವರ ಕೃಪೆಯಿಂದ
ಎನಗೊದಗಿದ ಘನವನೇನೆಂದುಪಮಿಸುವೆ? ॥ ೩೨ ॥

೯೯೩

ಅಯ್ಯಾ, ನಿಮ್ಮ ಮುಟ್ಟಿದ ಗುಣದಿಂದಲಾನು
ಪೂರ್ವಾಚಾರಿಯಾದೆನಯ್ಯಾ.

ಅಯ್ಯಾ, ನಿಮ್ಮ ಮುಟ್ಟಿದ ಗುಣದಿಂಡಲಾನು
ವೃಷಭನಾದೆನಯ್ಯಾ.
ಅಯ್ಯಾ, ನಿಮ್ಮ ಮುಟ್ಟಿದ ಗುಣದಿಂದಲಾನು ಸಂಗನಬಸವಣ್ಣನಾಗಿ,
ಗೊಹೇಶ್ವರನ ಶರಣನ ಮಹಾಬಸುರೊಳಗೆ ಕಂದನಾಗಿರ್ದೆ
ಕಾಣಾ, ಕೂಡಲಸಂಗಮದೇವಾ. ॥ ೩೩ ॥

೯೯೪

ಅಯ್ಯಾ, ನಿಮ್ಮ ಶರಣರ ಕಂಡ ಕಡುಸುಖವನೇನೆಂಬೆನಯ್ಯಾ?
ಅದು ಸಾಲೋಕ್ಯದಂತುಟಲ್ಲ, ಸಾಮೀಪ್ಯದಂತುಟಲ್ಲ,
ಸಾರೂಪ್ಯದಂತುಟಲ್ಲ, ಸಾಯುಜ್ಯದಂತುಟಲ್ಲ.
ಕೂಡಲಸಂಗಯ್ಯಾ, ನಿಮ್ಮ ಶರಣರ ಚರಣದ
ದರುಶನ ಸ್ಪರುಶನದಿಂದಾನು ಧನ್ಯನಾದೆನು. ॥ ೩೪ ॥

೯೯೫

ಅಯ್ಯಾ, ನಿಮ್ಮ ಶರಣರ ಕಂಡರೆ ಕಡುಸುಖವೆನಗಯ್ಯಾ,
ಕಾಣದಿರೆ ಅವಸ್ಥೆ ನೋಡಯ್ಯಾ.
ತವಕದ ಸ್ನೇಹ ದರುಶನದಲಿ ತರಹರವಾಯಿತ್ತು,
ಕೂಡಲಸಂಗಮದೇವಾ,
ನಿಮ್ಮ ಶರಣರ ಶ್ರೀಪಾದವ ಕಂಡು ಧನ್ಯನಾದೆನು. ॥ ೩೫ ॥

೯೯೬

ಅಯ್ಯಾ, ನಿಮ್ಮ ಶರಣರ ನಿಲವ
ಸ್ವರ್ಗ ಮರ್ತ್ಯ ಪಾತಾಳದೊಳಗೆ ಬಲ್ಲವರಿಲ್ಲವಯ್ಯಾ,
ಅಘಟಿತ ಘಟಿತರು, ಅಖಂಡಿತ ಮಹಿಮರು,
ನಿಜದಲ್ಲಿ ನಿರ್ಲೇಪ ಭಾವಕರು.
ಕೂಡಲಸಂಗಮದೇವಾ,
ನಿಮ್ಮ ಶರಣರ ನಿಲವನರಿವಡೆ ನಾನೇತರವನಯ್ಯಾ. ॥ ೩೬ ॥

೯೯೭

ಅಯ್ಯಾ, ನಿಮ್ಮ ಶರಣರ ಸಂಗವೆನಗೆ ಪರಮಸುಖವಯ್ಯಾ,
ಅಯ್ಯಾ, ನಿಮ್ಮ ಶರಣರ ಅಗಲಿಕೆ
ಎನ್ನ ಪ್ರಾಣವಿಯೋಗವಯ್ಯಾ,
ಶಿವಶಿವಾ ಸಂತವಿಡುವೆನು, ಇನ್ನೆಂತಯ್ಯಾ?

ಎನಗೇನು ಗತಿ, ಕೂಡಲಸಂಗಮದೇವಾ?
ನಿಮ್ಮ ಶರಣರ ಮುನಿಸು ಎನಗೆ ಬಿಡಿಸಬಾರದ ತೊಡಕು. ॥ ೩೭ ॥

೯೯೮

ಅಯ್ಯಾ, ನಿಮ್ಮ ಶರಣರ ಸಂಗಸುಖವ ಏನೆಂದುಪಮಿಸುವೆನಯ್ಯಾ,
ನಿಮ್ಮ ಶರಣರ ಕೂಡೆ ಸಮಗೋಷ್ಠಿಯ
ಮಾಡುವುದನುಪಮಿಸಲಮ್ಮೆನಯ್ಯಾ.
ಕೂಡಲಸಂಗಾ, ನಿಮ್ಮ ಪ್ರಮಥರೆಲ್ಲರೂ
ನೆರೆದ ಗಣತಿಂಥಿಣಿಯೊಳಗೆನ್ನನೇನೆಂದರಿಯದೆ
ಆಗಲದಂತಿರಿಸಯ್ಯಾ, ನಾ ನಿಮ್ಮ ಧರ್ಮದ ಕವಿಲೆ. ॥ ೩೮ ॥

೯೯೯

ಅಯ್ಯಾ, ನಿಮ್ಮ ಶರಣರು ಪರಮಸುಖಿಗಳಯ್ಯಾ.
ಅಯ್ಯಾ, ನಿಮ್ಮ ಶರಣರು ಕಾಯವೆಂಬ ಕರ್ಮಕ್ಕೆ
ಹೊದ್ದದ ನಿಷ್ಕರ್ಮಿಗಳಯ್ಯಾ.
ಅಯ್ಯಾ, ನಿಮ್ಮ ಶರಣರು ಮನದಲ್ಲಿ ನಿರ್ಲೇಪಜ್ಞಾನಿಗಳಯ್ಯಾ.
ಕೂಡಲಸಂಗಮದೇವಯ್ಯಾ,
ನಿಮ್ಮ ಶರಣರ ಘನವನೆನಗೆ ಹೇಳಲು, ನಾನು ಕೇಳಲಮ್ಮದೆ
ನಮೋ ನಮೋ ಎನುತಿರ್ದೆನು ಕಾಣಾ, ಪ್ರಭುವೆ. ॥ ೩೯ ॥

೧೦೦೦

ಅಯ್ಯಾ, ನಿಮ್ಮ ಶರಣರು ಬಂದೆನ್ನ ಅಂಗಳದೊಳಗೆ ರಕ್ಷಿಸಿಹೆವೆಂದಿರಲು
ನಾನು ತೆರಹು-ಮರಹಾಗಿರ್ದು ಕೆಟ್ಟೆನಯ್ಯಾ,
ನಾನು ಕೆಟ್ಟ ಕೇಡಿಂಗೆ ಕಡೆಯಿಲ್ಲವಯ್ಯಾ.
ಕೂಡಲಸಂಗಮದೇವಾ,
ಎನ್ನ ಭಕ್ತಿ ಸಾವಿರ ನೋಂಪಿಯ ನೋಂತು
ಹಾದರದಲ್ಲಿ ಅಳಿದಂತಾಯಿತ್ತಯ್ಯಾ. ॥ ೪೦ ॥

೧೦೦೧

ಅಯ್ಯಾ, ನಿಮ್ಮ ಶರಣರೆನ್ನ ಪಾವನವ ಮಾಡಿ,
ತಿಳುಹಿ ತಮ್ಮಂತೆ ಎನ್ನ ಮಾಡಿದ ಬಳಿಕ,
ನಾನು ಅವರು ಮಾಡಿದಂತಾದೆನಯ್ಯಾ.

ನಾನೊಬ್ಬನು ನಿಮ್ಮ ಶರಣರ ಬಳಿಬಳಿಯವನು.
ಕೂಡಲಸಂಗನ ಶರಣರು ಮೆಚ್ಚಿ ಎನಗೊಲಿದಡೆ
ನಾನು ಬದುಕಿದೆನಲ್ಲದೆ, ಸಮರಸ ಸಂಗಕ್ಕೆ ಸರಿಯೆ?
ಹೇಳಾ ಚೆನ್ನಬಸವಣ್ಣಾ. ॥ ೪೧ ॥

೧೦೦೨

ಅಯ್ಯಾ, ನೀ ಒಲಿದಡೆ ತಿರಿವಂತೆ ಮಾಡುವಿರಿ,
ತಿರಿದಡೆ ನೀಡದಂತೆ ಮಾಡುವಿರಿ,
ನೀಡಿದಡೆ ಅಕ್ಕಿ ಬೀಳುವಂತೆ ಮಾಡುವಿರಿ,
ಬಿದ್ದಡೆ ನಾಯಿ ತಿಂಬಂತೆ ಮಾಡುವಿರಿ,
ನಿಮ್ಮ ಧ್ಯಾನದಲಿ ನಾನಿಪ್ಪಂತೆ ಮಾಡುವಿರಿ
ಕೂಡಲಸಂಗಮದೇವಾ. ॥ ೪೨ ॥

೧೦೦೩

ಅಯ್ಯಾ ನೀ ಒಲಿದಡೆ
ಹುಚ್ಚನೆಂದೆನಿಸಿ ಕಲ್ಲಲಿಡಿಸಿ,
ಎಲ್ಲರ ಕೈಯ್ಯಲು ಸುಡಿಸಿ,
ನಿನ್ನ ನಚ್ಚಿದವರನ್ನೆಲ್ಲ [ಬ]ಡಿಸು
ಕೂಡಲಸಂಗಮದೇವಾ. ॥ ೪೩ ॥

೧೦೦೪

ಅಯ್ಯಾ, ನೀ ಮಾಡಲಾದ ಜಗತ್ತು, ಅಯ್ಯಾ ನೀ ಮಾಡಲಾದ ಸಂಸಾರ,
ಅಯ್ಯಾ, ನೀ ಮಾಡಲಾದ ಮರವೆ, ಅಯ್ಯಾ, ನೀ ಮಾಡಲಾದ ದುಃಖ,
ಅಯ್ಯಾ, ನೀ ಬಿಡಿಸಿದಡೆ ಬಿಟ್ಟಿತ್ತು ತಾಮಸ.
ಅಯ್ಯಾ ನಾನೀ ಮಾಯೆಯ ಗೆದ್ದೆನೆಂಬ ಹಮ್ಮಿನ್ನೇಕೆ
ಕೂಡಲಸಂಗಮದೇವಾ? ॥ ೪೪ ॥

೧೦೦೫

ಅಯ್ಯಾ, ನೀವೆನ್ನ ಬಲ್ಲಿರಲ್ಲದೆ ನಾನಿಮ್ಮ ಬಲ್ಲೆನೆ?
ನಿಮ್ಮ ನಿಲವ ನೋಡಿಹೆನೆಂದಡೆ
ನಿಮ್ಮ ಘನವೆನ್ನ ಮನಕ್ಕೆ ಸಾಧ್ಯವಾಗದ ಕಾರಣ,
ಅಂತಿಂತೆಂದುಪಮಿಸಲಮ್ಮದೆ ಇದ್ದೆ ನೋಡಯ್ಯಾ,

ನಿತ್ಯತೃಪ್ತಮಹಿಮಾ, ನಿಮಗೆಂದಳವಡಿಸಿದ ಪದಾರ್ಥವ
ಸುಚಿತ್ತದಿಂದವಧರಿಸಿ ಸಲಹಯ್ಯಾ ಪ್ರಭುವೆ,
ಕೂಡಲಸಂಗಮದೇವಾ. ॥ ೪೫ ॥

೧೦೦೬

ಅಯ್ಯಾ, ಭಕ್ತನೆಂತೆಂಬೆನಯ್ಯಾ, ಯುಕ್ತಿಶೂನ್ಯನ?
ಅದೇನು ಕಾರಣವೆಂದಡೆ;
ಅವನು ತನುಮನಧನ ವಂಚಕನಾದ ಕಾರಣ.
ಧನವ ಕೊಟ್ಟು ಜಂಗಮವನೊಲಿಸಬೇಕು,
ಮನವ ಕೊಟ್ಟು ಲಿಂಗವನೊಲಿಸಬೇಕು,
ತನುವ ಕೊಟ್ಟು ಪ್ರಸಾದವನೊಲಿಸಬೇಕು.
ಇಂತೀ ತನುಮನಧನವನ್ನೆಲ್ಲ ಬೈಚಿಟ್ಟುಕೊಂಡು
ಬರಿಯ ಹರೆಯನೆ ಬಾರಿಸಿ, ಕುರುಹನೆ ಪೂಜಿಸುವ
ಗೊರವರ ಮೆಚ್ಚುವನೆ ನಮ್ಮ ಕೂಡಲಸಂಗಮದೇವರು? ॥ ೪೬ ॥

೧೦೦೭

ಅಯ್ಯಾ, ಮರದೊಳಗೆ ಅಗ್ನಿ ಇದ್ದಡೇನಯ್ಯಾ,
ಮಥನಿಸಿ ತೋರುವರಿಲ್ಲದನ್ನಕ್ಕರ ಕಾಣಬಹುದೆ?
ಜಗದೊಳಗೆ ಕೂಡೆ ಪರಿಪೂರ್ಣ ಶಿವನೆಂದಡೆ
ಅಂತರಂಗದಲ್ಲಿ ಕಾಣಬಹುದೆ?
ಆದಿ ಲಿಂಗ ಅನಾದಿ ಶರಣನ ಭೇದವ ತಿಳುಹಿ,
ನಿಜಪ್ರಾಣದೊಳಗಿಪ್ಪ ಸುಜ್ಞಾನಲಿಂಗವ ಕರಸ್ಥಲಕ್ಕೆ ತಂದು,
ಆ ಕರಸ್ಥಲದ ಲಿಂಗವನೆನ್ನ ಸರ್ವಾಂಗದೊಳಗೆ ಪ್ರತಿಷ್ಠಿಸಿ ತೋರಿ,
ನಿತ್ಯ ನಿಜಲಿಂಗೈಕ್ಯವಹ ಹೊಲಬಿನ ಹರಿಬ ತೋರಿ,
ಮರ್ತ್ಯಲೋಕದೊಳಗೆಲ್ಲಾ ಇಂದು ಮೊದಲಾಗಿ
ಪ್ರಾಣಲಿಂಗದ ಘನವ ಹರಹಿ ಶಿವಭಕ್ತಿಯನುದ್ಧರಿಸಿದನು.
ಕೂಡಲಸಂಗಮದೇವರಲ್ಲಿ, ಚೆನ್ನಬಸವಣ್ಣನೆನ್ನನಾಗುಮಾಡಿ ಉಳುಹಿದನಾಗಿ
ಇನ್ನು ಮರ್ತ್ಯಲೋಕಕ್ಕೆ ಬಂದಡೆ ಚೆನ್ನಬಸವಣ್ಣನ ಪಾದದಾಣೆ. ॥ ೪೭ ॥

೧೦೦೮

ಅಯ್ಯಾ, ರುದ್ರಾಕ್ಷಿಯಿಂದ ಹರಿದೆನು ಭವಪಾಶಂಗಳ,
ಅಯ್ಯಾ, ರುದ್ರಾಕ್ಷಿಯಿಂದ ಮುರಿದೆನು ತನುಗುಣಾದಿಗಳ,

ಅಯ್ಯಾ, ರುದ್ರಾಕ್ಷಿಯಿಂದ ಒರೆಸಿದೆನು ಮಹಾಮಾಯೆಯ,
ಅಯ್ಯಾ, ರುದ್ರಾಕ್ಷಿಯಿಂದ ಕಳೆದೆನು ಪಂಚಮಹಾಪಾತಕವ.
ಅಯ್ಯಾ ಕೂಡಲಸಂಗಮದೇವಾ,
ಶ್ರೀಮಹಾರುದ್ರಾಕ್ಷಿಯಿಂದ ಗೆಲಿದೆನಯ್ಯಾ ಸಕಲದುರಿತಂಗಳನು. ॥ ೪೮ ॥

೧೦೦೯

ಅಯ್ಯಾ, ಶ್ರೀಮಹಾವಿಭೂತಿಯಿಂದ ಕಂಡೆ
ಆ ನಿಮ್ಮ ದಿವ್ಯ ಬೆಳಗಿನ ಹೊಳಹ, ಈ ಎನ್ನ ಕರಸ್ಥಲದೊಳಗೆ.
ಅಯ್ಯಾ, ಶ್ರೀಮಹಾರುದ್ರಾಕ್ಷಿಯಿಂದ ಕಂಡೆ
ಆ ನಿಮ್ಮ ದಿವ್ಯಮೂರ್ತಿಯ ಗೂಢವ, ಈ ಎನ್ನ ಕರಸ್ಥಲದೊಳಗೆ.
ಅಯ್ಯಾ, ಶ್ರೀಮಹಾಪಂಚಾಕ್ಷರಿಯಿಂದ ಕಂಡೆ
ಆ ನಿಮ್ಮ ದಿವ್ಯವಕ್ತ್ರಂಗಳ, ಈ ಎನ್ನ ಕರಸ್ಥಲದೊಳಗೆ.
ನಾ ಬಯಸುವ ಬಯಕೆ ಕೈಸಾರಿತ್ತಿಂದು
ಕೂಡಲಸಂಗಮದೇವಾ. ॥ ೪೯ ॥

೧೦೧೦

ಅಯ್ಯಾ, ಹಿಂದೆಯಾನು ಮಾಡಿದ ಮರಹಿಂದ ಬಂದೆನೀ ಭವದಲ್ಲಿ.
ನಿಮ್ಮ ಲೀಲೆ ನಿಮ್ಮ ವಿನೋದ ಸೂತ್ರದಿಂದ,
ಲಕ್ಷದ ಮೇಲೆ ತೊಂಬತ್ತಾರು ಸಾವಿರ ಗೀತಂಗಳ ಆಡಿ ಹಾಡಿ,
ಆ ದಾಸೋಹವೆಂಬ ಮಹಾಗಣಸಂಕುಳದೊಳೆನ್ನನಿರಿಸಿ,
ನಿಮ್ಮ ಭಕ್ತಿಯ ಘನವ ನೀವೆ ಮೆರೆಯಲೆಂದು
ಪರವಾದಿ ಬಿಜ್ಜಳನ ತಂದೊಡ್ಡಿ, ಎನ್ನನು ಅವನೊಡನೆ ಹೋರಿಸಿ,
ಮುನ್ನೂರ ಅರವತ್ತು ಸತ್ತ ಪ್ರಾಣವನೆತ್ತಿಸಿ,
ಮೂವತ್ತಾರು ಕೊಂಡೆಯವ ಗೆಲಿಸಿ,
ಎಂಬತ್ತೆಂಟು ಪವಾಡಂಗಳಂ ಕೊಂಡಾಡಿ,
ಮರ್ತ್ಯಲೋಕದ ಮಹಾಗಣಂಗಳ ಒಕ್ಕುದನಿಕ್ಕಿ ಎನ್ನ ಸಲಹಿದಿರಿ.
ನಿಮ್ಮ ಮಹಾಗಣಂಗಳು ಮೆಚ್ಚಿ, ಎನ್ನ ಸೂತಕವ ತೊಡೆದ
ಪ್ರಭುದೇವರ ಕರುಣದಿಂದ ಪ್ರಾಣಲಿಂಗಸಂಬಂಧ ಸಯವಾಯಿತ್ತು.
ನೀವು ಕಳುಹಿದ ಬೆಸನು ಸಂದಿತ್ತು,
ಉಘೇ, ಇನ್ನು ಕೂಡಿಕೊಳ್ಳಾ ಕೂಡಲಸಂಗಮದೇವಾ. ॥ ೫೦ ॥

೧೦೧೧

ಅರತುದಯ್ಯಾ ಅಂಗಗುಣ, ಒರತುದಯ್ಯಾ ಭಕ್ತಿರಸ,
ಆವರಿಸಿತ್ತಯ್ಯಾ ಲಿಂಗವಂಗವನು,
ಏನೆಂದರಿಯೆನಯ್ಯಾ ಲೋಕಲೌಕಿಕವ.
ಲಿಂಗಭ್ರಾಂತನಾದೆನಯ್ಯಾ ಕೂಡಲಸಂಗಯ್ಯಾ,
ನಿಮ್ಮ ಕರುಣವೆನ್ನನೆಡೆಗೊಂಡಿತ್ತಾಗಿ. ॥ ೫೧ ॥

೧೦೧೨

ಅರಸುವ ಬಳ್ಳಿ ಕಾಲ ತೊಡರಿದಂತಾಯಿತ್ತು,
ಬಯಸುವ ಬಯಕೆ ಕೈಸಾರಿದಂತಾಯಿತ್ತು,
ಹಲವು ದಿವಸಕೆ ನಂಟರ ಕಂಡಂತಾಯಿತ್ತು.
ಅಂದೊಮ್ಮೆ ಅನಿಮಿಷಂಗೆ ಕೋಳುಹೋದ ಲಿಂಗವೆಂದು
ಉಮ್ಮಹದಿಂದ ಮಂಗಳಾರತಿಯು ಬೆಳಗಿ,
ನವರತ್ನದ ಹಾರ ತೋರಣವ ಕಟ್ಟಿ,
ಸಂತೋಷದಿಂದೆನ್ನ ಮನವು ತೊಟ್ಟನೆ ತೊಳಲಿ,
ತಿಟ್ಟನೆ ತಿರು[ಗೆ], ದೃಷ್ಟವ ಕಂಡೆನಯ್ಯಾ.
ಬಿಟ್ಟು ಹಿಂಗಿದವೆನ್ನ ಭವಮಾಲೆಗಳು,
ಗೋಹೇಶ್ವರನ ಶರಣ ಪ್ರಭುದೇವರ ಕರಸ್ಥಲದೊಳಗೆ,
ಕೂಡಲಸಂಗಮದೇವರೆಂಬ ಲಿಂಗವ ಕಂಡೆನಾಗಿ. ॥ ೫೨ ॥

೧೦೧೩

ಅರಿದರಿದು ಎನಗಿಂದು ಕಣ್ಗೆ ಮಂಗಳವಾಯಿತ್ತು,
ಒಂದಹುದು ಒಂದಾಗದೆಂಬ ಭ್ರಮೆಯುವನಲ್ಲ,
ಬೇಕು ಬೇಡೆಂಬ ಜಂಜಡದವನಲ್ಲ,
ಎಡೆವರಿಯದ ನೋಟ, ನುಡಿಯು ಸಡಗರವರತು
ಎಡೆಘಾಟ ಕೋಟಲೆಯ ಕಳೆಯಬಂದನು,
ನೋಡುವರ ಮನದ ಸುಖದ ಸಾಗರನಿಧಿಯನೇನೆಂದುಪಮಿಸುವೆನು?
ಎನ್ನ ಉಭಯಕರ್ಮವ ಕಳೆದು ತನ್ನೊಳಗೆ ಇಂಬಿಟ್ಟುಕೊಳಬಂದನು,
ಕೂಡಲಸಂಗಮದೇವ, ಕೃಪಾಮೂರ್ತಿ. ॥ ೫೩ ॥

೧೧೧೪

ಅರಿದಿಹೆನೆಂದಡೆ ಅರಿವಿಂಗಸಾಧ್ಯ,
ನೆನೆದಿಹೆನೆಂದಡೆ ನೆನಹಿಂಗಸಾಧ್ಯ,
ಭಾವಿಸಿಹೆನೆಂದಡೆ ಭಾವಕ್ಕಸಾಧ್ಯ.
ವಾಙ್ಮನಕ್ಕಗೋಚರ ಲಿಂಗವನರಿವ ಪರಿಯೆಂತಯ್ಯಾ,
ಗುರು ತೋರದನ್ನಕ್ಕರ?
ಗುರುಶಿಷ್ಯರ ಮಥನದಲ್ಲಿ ಸ್ವಯಂಜ್ಯೋತಿಲಿಂಗವು
ಉದಯವಪ್ಪುದೆಂಬ ಶ್ರುತಿ ಹುಸಿಯೆ?
ಕೂಡಲಸಂಗಮದೇವಾ, ನಿಮ್ಮ ಮಹಾನುಭಾವರ ಮಥನದಿಂದ
ಎನ್ನಲ್ಲಿ ನಿಜವ ನೆಲೆಗೊಳಿಸಾ, ಪ್ರಭುವೆ. ॥ ೫೪ ॥

೧೧೧೫

ಅರಿಯಲಿಲ್ಲದ ಅರಿವು ಅವಗ್ರಹಿಸಿತ್ತಾಗಿ,
ಅರಿಯಲಿಲ್ಲದ ಮರೆಯಲಿಲ್ಲದ ನಿಜವು ನಿಂದಿತ್ತಾಗಿ,
ನಿರ್ನಾಮವಾಯಿತ್ತು, ನಿಃಪತಿಯಾಯಿತ್ತು,
ಅಗಮ್ಯದಲ್ಲಿ ಗಮನ ಕೆಟ್ಟಿತ್ತು, ನಿಂದಲ್ಲಿ ನಿರಾಳವಾಯಿತ್ತು,
ಕೂಡಲಸಂಗಮದೇವರಲ್ಲಿ ಶಬ್ದಮುಗ್ಧವಾಯಿತ್ತು. ॥ ೫೫ ॥

೧೧೧೬

ಅರಿವನ್ನಕ್ಕರ ಅರ್ಚಿಸಿದೆ, ಅರಿವನ್ನಕ್ಕರ ಪೂಜಿಸಿದೆ,
ಅರಿವನ್ನಕ್ಕರ ಹಾಡಿ ಹೊಗಳಿದೆ.
ಅರಿವುಗೆಟ್ಟು ಮರಹು ನಷ್ಟವಾಗಿ,
ಭಾವ ನಿರ್ಭಾವವಾಗಿ ನಿಜವೊಳಕೊಂಡಿತ್ತಾಗಿ,
ಕೂಡಲಸಂಗಯ್ಯನಲ್ಲಿ ಸರ್ವನಿವಾಸಿಯಾಗಿರ್ದೆನು. ॥ ೫೬ ॥

೧೧೧೭

ಅರಿವಿಂದರಿದು ಏನುವ ತಟ್ಟದೆ ಮುಟ್ಟದೆ ಇದ್ದೆನಯ್ಯಾ,
ಅಂತರಂಗ ಸನ್ನಿಹಿತ, ಬಹಿರಂಗ ನಿಶ್ಚಿಂತನಾಗಿದ್ದೆನಯ್ಯಾ.
ಸ್ವಾತಿಯ ಬಿಂದುವ ಬಯಸುವ ಚಿಪ್ಪಿನಂತೆ
ಗುರುಕಾರುಣ್ಯವ ಬಯಸುತ್ತಿದ್ದೆ, ಕೂಡಲಸಂಗಮದೇವಾ. ॥ ೫೭ ॥

೧೦೧೮

ಅರಿವಿಂದಲರಿವೆನೆಂದಡೆ ಅರಿವಿಂಗಸಾಧ್ಯ,
ಅರಿಯದೆ ಅರಿದ ಪರಿ ಎಂತಯ್ಯಾ?
ಭಾವಿಸಿ ಬೆರೆಸುವೆನೆಂದಡೆ ಭಾವ ನಿರ್ಭಾವವೆಂದುದಾಗಿ
ಮತ್ತೆ ಭಾವಿಸಿಯಲ್ಲದೆ ಕಾಣಬಾರದಯ್ಯಾ.
ವಾಙ್ಮನಕ್ಕಗೋಚರವೆಂದಡೆ
ನುಡಿಯಲಿಲ್ಲದೆ ನಡೆ ಸಾಧ್ಯವಹ ಪರಿ ಎಂತು ಹೇಳಯ್ಯಾ?
ಹಲವು ಮಾತಿನ ನಿಲವು ಒಂದೆಂಬ
ನುಡಿಗಡಣದ ನಿಜವ ಬಲ್ಲವರಾರು ಹೇಳಯ್ಯಾ?
ನಿಮ್ಮ ಮಾತೆಂಬ ಪರತತ್ವವೊಂದಲ್ಲದೆ ಎರಡುಂಟೆ?
ಕೂಡಲಸಂಗಮದೇವ ಕಡೆಮುಟ್ಟ ನೋಡುವಡೆ
ನುಡಿಗೆಡೆಯಿಲ್ಲ, ಕೃಪೆಯಿಂದ ಕರುಣವ ಮಾಡಯ್ಯಾ ಪ್ರಭುವೆ. || ೫೮ ||

೧೦೧೯

ಅರಿವಿನ ಆಪ್ಯಾಯನಕ್ಕೆ ಅನುಭಾವವೆ ತೃಪ್ತಿ,
ಅರಿವು ನೆರೆ ಕೂಡಿ, ಆ[ಚಾ]ರವೆ ಪ್ರಾಣವಾಗಿ ವಿಶ್ರಮಿಸಿದ ಬಳಿಕ,
ಶ್ರೀಗುರು ಕೃಪೆಯ ಮಾಡಿದ ಪ್ರಾಣಲಿಂಗದ ಘನವೆಂತೆಂದಡೆ :
ಮತ್ಸ್ಯನುಂಗಿದ ಮಾಣಿಕ್ಯದಂತೆ,
ಮುತ್ತುನುಂಗಿದ ನೀರಿನಂತೆ,
ಕಣ್ಣಾಲಿ ನುಂಗಿದ ನೋಟದಂತೆ,
ಬಯಲನೊಳಕೊಂಡ ಬ್ರಹ್ಮಾಂಡದೊಳಗಿಪ್ಪ
ಸ್ವಯಾನುಭಾವಿಗಳ ಅನುಭಾವವ ತೋರಿ ಬದುಕಿಸಾ,
ಕೂಡಲಸಂಗಮದೇವಾ. || ೫೯ ||

೧೦೨೦

ಅರಿವಿನರಿತವ ಕೆಡಿಸಿತ್ತು ಬಡತನವೆಂಬ ರಾಹು,
ಉಳ್ಳವನ ಉಳುವೆಯ ಕೆಡಿಸಿತ್ತು ಮೋಹವೆಂಬ ರಾಹು,
ಕಾಬವನ ಕಾಣಿಕೆಯ ಕೆಡಿಸಿತ್ತು ಕಾಮವೆಂಬ ಕತ್ತಲೆ,
ಎನ್ನ ಮನದ ಭಯಕ್ಕಂಜಿ ನಿಮ್ಮ ಮೊರೆಹೊಕ್ಕೆ ಕೂಡಲಸಂಗಮದೇವಾ. || ೬೦ ||

೧೦೭೧

ಅರಿವಿಲ್ಲದ ಕಾಯವುಂಟೆ? ಅರಿವಿಲ್ಲದ ಪ್ರಾಣವುಂಟೆ?
ಅರಿವಿಲ್ಲದ ನಿಲವುಂಟೆ? ಭಾವವಿಲ್ಲದ ಭಕ್ತಿಯುಂಟೆ?
ಕೂಡಲಸಂಗಮದೇವಾ, ನೀವು ಪರಿಪೂರ್ಣರಾಗಿಪ್ಪಿರಾಗಿ,
ಅವಗುಣಕ್ಕೆ ತೆರಹಿಲ್ಲ. ॥ ೬೧ ॥

೧೦೭೨

ಅರಿವು ಮರವೆಯೊಳಡಗಿ, ಮರವೆ ಅರಿವಿನೊಳಡಗಿ,
ತೆರಹಿಲ್ಲದಿರ್ದನೆಂಬ ಹಮ್ಮಿದೇನೊ, ಹಮ್ಮಿದೇನೊ?
ಬ್ರಹ್ಮಾದ್ ಬ್ರಹ್ಮವ ನುಂಗಿ, ಮತ್ತಾ ಪರಬ್ರಹ್ಮನು ತಾನೆಂದೆಂಬ
ಹಮ್ಮಿದೇನೊ, ಹಮ್ಮಿದೇನೊ?
ಆದಿ ಶೂನ್ಯವು ಶೂನ್ಯ, ಮಧ್ಯ ಶೂನ್ಯವು ಶೂನ್ಯ,
ಅಂತ್ಯ ಶೂನ್ಯವು ಶೂನ್ಯ,
ಶೂನ್ಯವಾದ ಬಳಿಕ ಅಲ್ಲಿಂದತ್ತ ನಿಂದ ನಿಲವನಾರು ಬಲ್ಲರು ಹೇಳಾ?
ಬಯಲು ಚಿತ್ರಿಸಿದ ಚಿತ್ರವನಾ ಬಯಲರಿಯದಂತೆ
ಕೂಡಲಸಂಗಮದೇವಾ, ನಿಮ್ಮ ಶರಣರ ನಿಲವು. ॥ ೬೨ ॥

೧೦೭೩

ಅರಿವುವಿಡಿದು, ಅರಿವನರಿದು,
ಅರಿವೆ ನೀವೆಂಬ ಭ್ರಾಂತು ಎನಗಿಲ್ಲವಯ್ಯಾ,
ಮರಹುವಿಡಿದು, ಮರಹ ಮರೆದು,
ಮರಹು ನೀವೆಂಬ ಮರಹಿನವ ನಾನಲ್ಲವಯ್ಯಾ.
ದೇಹ ಪ್ರಾಣಂಗಳ ಹಿಂಗಿ, ದೇಹವಿಡಿದು,
ದೇಹ ನಿಮ್ಮದೆಂಬ ಭ್ರಾಂತುಸೂತಕಿ ನಾನಲ್ಲವಯ್ಯಾ.
ನಿಮ್ಮ ಅರಿದ ಅರಿವ ಭಿನ್ನವಿಟ್ಟು ಕಂಡೆನಾದಡೆ
ನಿಮ್ಮಾಣೆ ಕಾಣಾ, ಕೂಡಲಸಂಗಮದೇವಾ. ॥ ೬೩ ॥

೧೦೭೪

ಅರಿವೆ ವಸ್ತುವೆಂಬರು, ಆ ಅರಿವ ಆತ್ಮವಿರಹಿತವಾಗಿ ಕಾಬವರೊಳರೆ?
ಆತ್ಮನೆ ವಸ್ತುವೆಂಬರು, ಆ ಆತ್ಮನನು ಪ್ರಾಣವಿರಹಿತವಾಗಿ ಕಾಬವರೊಳರೆ?
ಆ ಪ್ರಾಣವನೆ ವಸ್ತುವೆಂಬರು, ಆ ಪ್ರಾಣವ ದೇಹವಿರಹಿತವಾಗಿ ಕಾಬವರೊಳರೆ?
ಅಥವಾ ಮೀರಿ ಕಂಡೆವೆಂದಡೆ, ಅವು ನಿರವಯ ವಸ್ತುಗಳು.

'ಅದೃಶ್ಯಭಾವನೋ ನಾಸ್ತಿ' ಎಂಬ ಶ್ರುತಿಯ ವಿಚಾರಿಸಲು
ನಿರವಯವಾದುವು ಭಾವಕ್ಕೆ ಬಾರವು,
ಭಾವಕ್ಕೆ ಬಾರದುವು ದೃಷ್ಟಿಗೆ ಗೋಚರಿಸವು.
ದೃಷ್ಟಿಗೆ ಗೋಚರಿಸದ ವಸ್ತುವ ಮುಟ್ಟಿ ಪೂಜಿಸಬಹುದೆ?
ಪೂಜೆಗೆ ಬಾರದು.
ಅದು ಕಾರಣ, ಕಾಯದ ಸ್ಥಲವಿಡಿದು ನೋಡಲು
ಅರಿವು ಆತ್ಮ ಪ್ರಾಣಂಗಳು ಬೇರಿಲ್ಲ.
ಅದು ಕಾರಣ, ಸಾಕಾರವಾದ ಇಷ್ಟಲಿಂಗವಿಲ್ಲದೆ
ಬಟ್ಟಬಯಲ ಜ್ಞಾನವೆ ವಸ್ತುವೆಂಬ ಕಷ್ಟದ ನುಡಿಯನೇನೆಂಬೆ?
ದೃಗ್ದೃಶ್ಯವಾದ ಇಷ್ಟಲಿಂಗದ ಘನವ
ಕೂಡಲಸಂಗಮದೇವರಲ್ಲಿ ನೀನೆ ಬಲ್ಲೆಯಲ್ಲದೆ
ನಾನೆತ್ತ ಬಲ್ಲೆನಯ್ಯಾ, ಚೆನ್ನಬಸವಣ್ಣಾ? || ೬೪ ||

೧೦೨೫

ಅರ್ಥವುಳ್ಳವರೆಲ್ಲ ಅರಸಿಂಗಂಜುವರಯ್ಯಾ,
ಭಕ್ತಿಯುಳ್ಳವರೆಲ್ಲ ಜಂಗಮಕ್ಕಂಜುವರಯ್ಯಾ,
ಸೂಳೆಗೊಲಿದವರೆಲ್ಲ ಸೂಳೆಯೆಂಜಲು ತಿಂಬರಯ್ಯಾ.
ಮಾಂಸವ ಮೆಚ್ಚಿದವರೆಲ್ಲ ಸೊಣಗನೆಂಜಲ ತಿಂಬರಯ್ಯಾ.
ಕೂಡಲಸಂಗನ ಶರಣರ ಒಕ್ಕುಮಿಕ್ಕುದ
ಲಿಂಗಕ್ಕೆ ಕೊಟ್ಟುಕೊಂಡು ಯೋಗ್ಯವಾದವರ
ನಮ್ಮ ಚಿಕ್ಕ ಬಸವಣ್ಣ ಬಲ್ಲ. || ೬೫ ||

೧೦೨೬

ಅರ್ಪಿತವ ಮಾಡುವ ಅವಧಾನವು, ಅನ್ಯವ ಸೋಂಕದ ಅವಧಾನವು,
ಅರಿಷಡ್ವರ್ಗಂಗಳ ಮುಟ್ಟಲೀಯದವಧಾನದ ಪರಿಯ ನೋಡಾ,
ಪಂಚಭೂತವೆಂಬ ಭವಿಯ ಕಳೆದು ಪ್ರಸಾದಿಯಾಗಿಪ್ಪ ಪರಿಯ ನೋಡಾ,
ಪಂಚೇಂದ್ರಿಯಂಗಳ ಗುಣವಳಿದು ಪಂಚವಿಂಶತಿತತ್ವದಲ್ಲಿ ಪರಿಣಾಮಿ
ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನು. || ೬೬ ||

೧೦೨೭

ಅರ್ಪಿತವೆಂಬೆನೆ?
ದೇವರೊಂದಿಲ್ಲವಾಗಿ, ಅರ್ಪಿಸುವ ಭಕ್ತ ಮುನ್ನವೆ ಇಲ್ಲ.

ಅರ್ಪಿತ ಅನರ್ಪಿತ ನೀನೆ ಎಂಬೆ,
ಕೂಡಲಸಂಗಮದೇವಾ. ॥ ೬೭ ॥

೧೦೨೮

ಅರ್ಪಿಸಿದ ಸುಖ ತಪ್ಪದೆ ಇಂಬುಗೊಂಡಿತ್ತಾಗಿ
ಅಲ್ಲಿಯೆ ಅರ್ಪಿತವಾಯಿತ್ತಯ್ಯಾ.
ಅಂಗವೆಂಬ ಶಂಕೆ ತಾನೆತ್ತ ಹೋಯಿತ್ತೆಂದರಿಯೆ,
ಕಾಯಸುಖವೆ ಲಿಂಗಸುಖಕ್ಕೀಡಾಯಿತ್ತು.
ಅಂತಪ್ಪ ಅರ್ಪಿತ ದಷ್ಟ ತಲೆಗೇರಿದಲ್ಲಿ
ನೀ ಮುಂತಾಗಿರ್ದೆ, ಕೂಡಲಸಂಗಮದೇವಾ. ॥ ೬೮ ॥

೧೦೨೯

ಅಲ್ಲಾ ಎನಬಾರದು, ಅಹುದೆನಬಾರದು,
ಕೂಡಲಸಂಗನ ಶರಣರ ಸಂಗ
ಕರಗಸದ ಬಾಯಿಧಾರೆಯಂತೆ ಅತಿ ಬಿರಿದಯ್ಯಾ. ॥ ೬೯ ॥

೧೦೩೦

ಅಷ್ಟವಿಧಾರ್ಚನೆ ಅರಸರಿಯದ ಬಿಟ್ಟಿ ಕಾಣಿರೇ,
ಸಗುಣ ನಿರ್ಗುಣ ಸ್ಥೂಲ ಸೂಕ್ಷ್ಮ,
ಅವು ನಿಜವನರಿವವೆ? ಅವು ತಮ್ಮ ತಾವರಿಯವು.
ಅವ ಭಿನ್ನವೆಂದರಸಲುಂಟೆ?
ಕೂಡಲಸಂಗಮದೇವಾ. ॥ ೭೦ ॥

೧೦೩೧

ಅಸುರನೈಶ್ವರ್ಯವನೆಣಿಸುವಡೆ,
ಸೀತೆಗೆ ಸರಿಮಿಗಿಲೆನಿಸುವ ಸತಿಯರೆಂಟು ಕೋಟಿ,
ಮತಿವಂತ ಶಿರಃಪ್ರಧಾನರೆಂಟು ಕೋಟಿ,
ಲೆಕ್ಕವಿಲ್ಲದ ದಳವು, ಲಕ್ಷ ಕುಮಾರರು,
ದಿಕ್ಪಾಲಕರವನ ಮನೆಯ ಬಂಧನದಲ್ಲಿಪ್ಪರು,
ಸುರಪತಿಯರೆಲ್ಲರನಾತ ಸೆರೆಮಾಡಿ ಆಳಿದ.
ಶಿವನೆ, ನೀನು ಕರುಣಿಸಿದಂತಿರದೆ,
ಪರವಧುವಿನ ಬೇಟವನನ ಪ್ರಾಣ ಕೊಂಡಿತ್ತು.
ಇದನರಿದು ಪರವಧುಗಳಿಗೆಳಸುವರ ಕಂಡು

ಗರುಡನ ಕಂಡ ಸರ್ಪ ಧರೆಗಿಳಿವಂತೆ ಅಡಗಿಪ್ಪೆನಯ್ಯಾ
ಕೂಡಲಸಂಗಮದೇವಾ. ॥ ೭೧ ॥

೧೦೩೨

ಅಸ್ತಿ ಭಾತಿಯೆಂಬ ಭಿತ್ತಿಯ ಮೇಲೆ,
ಕ್ರೀ ನಾಮ ರೂಪವೆಂಬ ಚಿತ್ರ ಬರೆಯಿತ್ತು.
ಇಲ್ಲದ ಭಿತ್ತಿಯ ಮೇಲೆ ಉಂಟೆಂಬ ಚಿತ್ರದಂತಿರ್ದಿತ್ತು.
ಅದೆಂತೆಂದಡೆ:
ಅಸ್ತಿ ಭಾತಿ ಕ್ರಿಯಾರೂಪಂ ನಾಮಚೇತ್ಯರ್ಥಪಂಚಕಂ।
ಆದ್ಯತ್ರಯಂ ಬ್ರಹ್ಮರೂಪಂ ಮಾಯಾರೂಪಂ ತಥಾದ್ವಯಂ॥
ಎಂದುದಾಗಿ–
ಎನಗಿದೇ ಮಾಯೆಯಾಗಿ ಕಾಡಿತ್ತು, ಕೂಡಲಸಂಗಮದೇವಾ. ॥ ೭೨ ॥

೧೦೩೩

ಆಪುದಹುದು:
ಕೆರೆಯ ತಪ್ಪಿ ಬಾವಿಯ ಬಿದ್ದಂತೆ,
ಮುಳ್ಳ ಕಳೆದು ದಸಿಯ ಬೆಟ್ಟಿದಂತೆ,
ಬದುಕಿದ ಹಕ್ಕಿಯ ಕಿಚ್ಚಿನೊಳಗಿಕ್ಕುವರೆ,
ಕೂಡಲಸಂಗಮದೇವಾ? ॥ ೭೩ ॥

೧೦೩೪

ಅಳವಡಿಸಿದ ಪದಾರ್ಥ ಅರ್ಪಿತಕ್ಕೆ ಸರಿಯಾಯಿತ್ತು,
ಅಳವಡಿಸದ ಮುನ್ನವೆ ಕೈಕೊಳ್ಳುತ್ತೈದಾನೆ ಶಿವನು,
ಸಂದ ಪದಾರ್ಥ ಸಲ್ಲಲಿ.
ಕೂಡಲಸಂಗಮದೇವರ ಆರೋಗಣೆಯ ಅವಸರಕ್ಕೆ
ಸಂಚಿತ ಸಯದಾನವ ತೆಗೆಸಿರೆ, ಸೊಡ್ಡಳ ಬಾಚರಸರೆ. ॥ ೭೪ ॥

೧೦೩೫

ಅಳಿವನಲ್ಲ, ಉಳಿವನಲ್ಲ, ಪ್ರಳಯವೆಂಬುದ ಮುನ್ನರಿಯನು,
ಕಳಾಕುಳರಹಿತನು, ಉಭಯಕುಳರಹಿತನು,
ಅರಿವ ಬೈಚಿಟ್ಟು ಮರೆವ ಗಮನನಲ್ಲ.
ಕೂಡಲಸಂಗಯ್ಯನೆಂಬ ಶಬ್ದಮುಗ್ಧನ
ಭಾವದ ಬಳಕೆಯಲ್ಲಿ ಗೆಲಬಹುದೆ ಹೇಳಾ? ॥ ೭೫ ॥

೧೦೩೬

ಆಗದ ಕಾಲಕ್ಕೆ ಆಗೆಂದಡಾಗದು,
ಆಗಬೇಕೆಂದು ನಾ ಬೆಂಬೀಳೆನಯ್ಯಾ.
ಆಗುಮಾಡುವ ತಂದೆ ನೀನು,
ಆಡಿ ಬಹ ಮಕ್ಕಳಿಗೆ ಊಡುವ ತಾಯಂತೆ ನೋಡಿ
ಸಲಹೆನ್ನ ಕೂಡಲಸಂಗಮದೇವಾ. ॥ ೭೬ ॥

೧೦೩೭

ಆಚಾರದ ಸುಖವನಂಗದಲ್ಲಿ ನೆಲೆಗೊಳಿಸಿ ತೋರಿದ,
ಅನುಭಾವದನುವ ಪ್ರಾಣದಲ್ಲಿ ನೆಲೆಗೊಳಿಸಿ ತೋರಿದ,
ಮಹಾಜ್ಞಾನದ ಸುಖವ ಸರ್ವಾಂಗದಲ್ಲಿ ನೆಲೆಗೊಳಿಸಿ ತೋರಿದ.
ಇಂತೀ ತ್ರಿವಿಧಸ್ಥಲನಿರ್ಣಯವನೆನಗೆ ಅರುಹಿದ ಕಾರಣ
ಕೂಡಲಸಂಗಮದೇವಯ್ಯಾ,
ಮಡಿವಾಳ ಮಾಚಯ್ಯನ ಪಾದಕ್ಕೆ ನಮೋ ನಮೋ ಎನ್ನುತ್ತಿರ್ದೆನು. ॥ ೭೭ ॥

೧೦೩೮

ಆಚಾರವನಾಚಾರವಾಯಿತ್ತು, ಸೀಮೆ ನಿಸ್ಸೀಮೆಯಾಯಿತ್ತು,
ಪ್ರಾಣಸಂಚ ತಪ್ಪಿ ಲಿಂಗಸಂಚವಾಯಿತ್ತು,
ಎಲ್ಲಿ ಶಬ್ದವಲ್ಲಿಯೆ ಲಿಂಗಸ್ವಾಯತವಾಯಿತ್ತು,
ಎಲ್ಲಿ ಸೋಂಕು ಅಲ್ಲಿಯೆ ಲಿಂಗಸ್ವಾಯತವಾಯಿತ್ತು,
ಎಲ್ಲಿ ರೂಪವಲ್ಲಿಯೆ ಲಿಂಗಸ್ವಾಯತವಾಯಿತ್ತು,
ಎಲ್ಲಿ ರುಚಿಯಲ್ಲಿಯೆ ಲಿಂಗಸ್ವಾಯತವಾಯಿತ್ತು,
ಎಲ್ಲಿ ಗಂಧವಲ್ಲಿಯೆ ಲಿಂಗಸ್ವಾಯತವಾಯಿತ್ತು,
ಕೂಡಲಸಂಗಮದೇವರ ಕರುಣರಸಾಬ್ಧಿ
ಕಡೆಗೋಡಿವರಿಯಿತ್ತಯ್ಯಾ, ಎನ್ನ ಮೇಲೆ. ॥ ೭೮ ॥

೧೦೩೯

ಆಚಾರವಿಡಿದು ಗುರು, ಆಚಾರವಿಡಿದು ಲಿಂಗ,
ಆಚಾರವಿಡಿದು ಜಂಗಮ, ಆಚಾರವಿಡಿದು ಪ್ರಸಾದ,
ಆಚಾರವಿಡಿದು ಭಕ್ತ, ಆಚಾರವಿಡಿದು ಶರಣ.
ಆಚಾರವಿಲ್ಲದಿರ್ದಡೆ ಗುರುವಲ್ಲ, ನರನು.
ಆಚಾರವಿಲ್ಲದಿರ್ದಡೆ ಲಿಂಗವಲ್ಲ, ಪಾಷಾಣ.

ಆಚಾರವಿಲ್ಲದಿರ್ದಡೆ ಜಂಗಮವಲ್ಲ, ಆಶನಧಾರಿ.
ಆಚಾರವಿಲ್ಲದಿರ್ದಡೆ ಪ್ರಸಾದವಲ್ಲ, ಎಂಜಲು.
ಆಚಾರವಿಲ್ಲದಿರ್ದಡೆ [ಭಕ್ತನಲ್ಲ, ಭವಿ].
ಆಚಾರವಿಲ್ಲದಿರ್ದಡೆ ಶರಣನಲ್ಲ, ಮರುಳು.
ಅದೆಂತೆಂದಡೆ:
ಜ್ಞಾನಹೀನಗುರೋಃ ಪ್ರಾಪ್ತಂ ಶಿಷ್ಯಜ್ಞಾನಂ ನ ಸಿಧ್ಯತಿ ।
ಮೂಲಚ್ಛಿನ್ನೇ ಯಥಾ ವೃಕ್ಷೇ ಗಂಧಂ ಪುಷ್ಪಂ ಫಲಂ ತಥಾ ॥
ಮತ್ತೆಯುಂ
ನಾಮಧಾರಕ ಶಿಷ್ಯಶ್ಚ ನಾಮಧಾರೀ ಗುರುಸ್ತಥಾ ।
ಅಂಧೋಽಂಧಕರಯುಕ್ತಶ್ಚ ತಾವುಭೌ ಪತಿತೌ ಯಥಾ ॥
ಮತ್ತೆಯುಂ
ಪಾಣಿನಾಧಾರಿತಂ ಲಿಂಗಂ ಪ್ರಾಣಸ್ಥಾನೇ ತು ನಿಕ್ಷಿಪೇತ್ ।
ತದ್ಭೇದಂ ಕುರ್ವತಸ್ತಸ್ಯ ನಚ ಲಿಂಗಂ ನ ಚಾರ್ಚನಂ ॥
ಮತ್ತೆಯುಂ
ನೇತ್ರೇ ಪರಸ್ತ್ರೀಯಾ ದಗ್ಧೇ ಹಸ್ತೌ ದಗ್ಧೌ ಪರಿಗ್ರಹಾತ್ ।
ಜಿಹ್ವಾ ದಗ್ಧಾ ಪರಾನ್ನೇನ ಕುತೋ ಮೋಕ್ಷೋ ವರಾನನೇ ॥
ಎಂದುದಾಗಿ
ಇಂತಿವೆಲ್ಲಕ್ಕೆಯೂ ಸದಾಚಾರವೆ ಕಾರಣ,
ಕೂಡಲಸಂಗಮದೇವಾ. ॥೭೯ ॥

೧೦೪೦

ಆತ್ಮನ ಸುಳುಹು ನಿಂದ ಮತ್ತೆ
ಕಾಯದ ಅವತಾರವಳಿಯಿತ್ತು.
ನೀನೆಂಬ ಭಾವವರತಲ್ಲಿ,
ಕೂಡಲಸಂಗಮದೇವರ ಭಾವ
ಪ್ರಭುದೇವರಲ್ಲಿ ಐಕ್ಯವಾಯಿತ್ತು. ॥ ೮೦ ॥

೧೦೪೧

ಆತ್ಮನೆ ಲಿಂಗವೆಂಬರು, ಆತ್ಮನ ದೇಹರಹಿತವಾಗಿ ಕಾಬವರುಂಟೆ?
ಪ್ರಾಣವೆ ಲಿಂಗವೆಂಬರು,
ಪ್ರಾಣವನು ಕಾಯವ ಬಿಟ್ಟು ಬೇರೆ ಕಾಣಬಹುದೆ?
ಕಂಡೆಹೆನೆಂದಡೆ ಅದು ನಿರವಯ, ನಿರಾಕಾರವಾದುದು,

ಭಾವಕ್ಕೆ ಬಾರದು.
ಭಾವಕ್ಕೆ ಬಾರದುದ ಪೂಜಿಸಬಹುದೆ?
ಅದು ಕಾರಣ, ಕಾಯದ ಕರಸ್ಥಲದಲ್ಲಿ ಕ್ರಿಯಾಲಿಂಗವಿಡಿದು ನೋಡಲು
ಪ್ರಾಣ ಆತ್ಮನೆಂಬವು ಬೇರಿಲ್ಲ.
ಇದು ಕಾರಣ, ಇಷ್ಟವ ಬಿಟ್ಟು ಬಿಟ್ಟಬಯಲ ವಸ್ತುವೆಂಬ
ಮಿಟ್ಟಿಯ ಭಂಡರ ನಮ್ಮ ಕೂಡಲಸಂಗನ ಶರಣರು ಮೆಚ್ಚರು. ॥ ೮೧ ॥

೧೦೪೨

ಆದಿ ಅನಾದಿಗಳಿಲ್ಲದಂದು, ಸದಾಶಿವನಿಲ್ಲದಂದು,
ಶಿವನಿಲ್ಲದಂದು, ಏನೆಂಬುದೇನು ತಾನಿಲ್ಲದಂದು,
ಕೂಡಲಸಂಗಯ್ಯ ತನ್ನ ತಾನೇನೆಂದು ಅರಿಯನಂದು. ॥ ೮೨ ॥

೧೦೪೩

ಆದಿಪುರುಷನ ಮನವು ಮಹವನಕ್ಕಾಡೆ,
ಮತ್ತಲ್ಲಿಯೆ ಆನಂದದಿಂದ ಆ ನಿರವಯವು ಬಸಲಾಯಿತ್ತು.
ಧರೆ, ಅಂಬರ, ವಾರುಧಿ ಸಹಿತ,
ಜಾರೆಯೆಂದಡೆ ಜಗದಲ್ಲಿ ನಿಂದವು ಚೌರಾಸಿಲಕ್ಷ ಜೀವಜಾಲಗಳು.
ಹೋರೆಯೆಂದಡೆ ಆಕಾಶದಲ್ಲಿ ನಿಂದರು
ಗರುಡಗಂಧರ್ವಸಿದ್ಧ ವಿದ್ಯಾಧರದೇವರ್ಕಳು
ಮೊದಲಾದ ದೇವಸಮೂಹಂಗಳೆಲ್ಲ.
ಕೂಡಲಸಂಗಮದೇವಾ,
ನೀವು ಮನದಲ್ಲಿ ಸಂಕಲ್ಪಿಸಿ ಆಗೆಂದಡೆ ಆದವು. ॥ ೮೩ ॥

೧೦೪೪

ಆದಿ ಭಕ್ತ, ಅನಾದಿ ಜಂಗಮ,
ಆದಿ ಶಕ್ತಿ, ಅನಾದಿ ಶಿವನು ನೋಡಾ.
ಎನ್ನ ಆದಿಪಿಂಡಕ್ಕೆ ನೀನೆ ಆಧಾರವಾಗಿ ತೋರಿದಡೆ,
[ಎನ್ನ] ಹೃದಯಕಮಲದಲ್ಲಿ ನಿಮ್ಮ ಕಂಡೆನು.
ಆ ಕಾಂಬ ಜ್ಞಾನವೆ ಜಂಗಮ,
ಆ ಜಂಗಮವಿಡಿದಲ್ಲದೆ ಲಿಂಗವ ಕಾಣಬಾರದು,
ಆ ಜಂಗಮವಿಡಿದಲ್ಲದೆ ಗುರುವ ಕಾಣಬಾರದು,
ಆ ಜಂಗಮವಿಡಿದಲ್ಲದೆ ಪ್ರಸಾದವ ಕಾಣಬಾರದು.

ಕಾಯ ಭಕ್ತ, ಪ್ರಾಣ ಜಂಗಮವೆಂಬ ಭೇದವ ತಿಳಿಯಲು
ಎನ್ನ ಪ್ರಾಣ ನೀವಲ್ಲದೆ ಮತ್ತಾರು ಹೇಳಯ್ಯಾ?
ಇದು ಕಾರಣ, ನಿಮ್ಮ ಘನವ ಕಿರಿದುಮಾಡಿ,
ಎನ್ನನೊಂದು ಘನವಮಾಡಿ ನುಡಿವಿರಿ, ಕೂಡಲಸಂಗಮದೇವಾ. ॥ ೮೪ ॥

೧೦೪೫

ಆದಿಯನರುಹಿದ, ಅನಾದಿಯ ತೋರಿದ,
ಇಹವ ಕೆಡಿಸಿದ, ಪರವ ನಿಲಿಸಿದ, ಘನವ ತೋರಿದ.
ಮನವ ನಿರಿಸವಿಟ್ಟು ಅನುವ ತೋರಿ ಆಯತವ ಮಾಡಿ
ತನುವ ಮರೆಸಿ ಮನವನರುಹಿದ,
ಹಿಂದಣ ಪೂರ್ವಾಶ್ರಯವ ಹಿಂದುಮಾಡಿ ತೋರಿ,
ಮುಂದಣ ಗತಿಯ ಸಂದೇಹವ ಬಿಡಿಸಿದ.
ಕೂಡಲಸಂಗಮದೇವರಲ್ಲಿ ಪ್ರಭುದೇವರ ಶ್ರೀಪಾದಕ್ಕೆ
ನಮೋ ನಮೋ ಎನುತಿರ್ದೆನು. ॥ ೮೫ ॥

೧೦೪೬

ಆದಿಯನಾದಿಯಿಂದತ್ತತ್ತ ಮುನ್ನ
ಲಿಂಗಜಂಗಮವೆಂಬುದನಾರು ಬಲ್ಲವರಿಲ್ಲವೆಂದು.
ಇದರ ಸಕೀಲಸಂಬಂಧವ ತಿಳುಹಲೆಂದು
ಮರ್ತ್ಯಕ್ಕೆ ಕಳುಹಿದನು ಶಶಿಧರನು.
ಅಂಗದ ಮೇಲೆ ಲಿಂಗವುಳ್ಳುದೆಲ್ಲವೂ ಸಂಗಮನಾಥನಲ್ಲದೆ ಮತ್ತಾರನೂ ಕಾಣೆ.
ಶಿಷ್ಯಂಗೆ ಗುರು ಉಪದೇಶವ ಮಾಡಬೇಕಲ್ಲದೆ,
ಗುರುವಿಂಗೆ ಶಿಷ್ಯನನುಗ್ರಹವ ಮಾಡಿದ ಠಾವುಂಟೆ?
ಎನ್ನ ಅರಿವಿನ ಆದಿಗೆ ನೀನೆ ಕರ್ತನೆಂದು ನಾನಿರುತಿರಲು
ನಿನಗೆ ನಾನೆನ್ನ ಅನುಗ್ರಹವ ಮಾಡುವ ಪರಿ ಎಂತಯ್ಯಾ?
ಕೂಡಲಸಂಗಮದೇವರ ಸ್ವರೂಪವೆಂದು ನಿನ್ನ ಕಂಡಿಪ್ಪೆನು
ಕಾಣಾ ಚೆನ್ನಬಸವಣ್ಣಾ. ॥ ೮೬ ॥

೧೦೪೭

ಆದಿಯ ಲಿಂಗವ ತಂದಾತನಲ್ಲಯ್ಯನು.
ಅನಾದಿಯ ಲಿಂಗವ ತಂದಾತನಲ್ಲಯ್ಯನು.
ಭಾಪುರೆ ಜಂಗಮವೆ, ನಿರ್ವಯಲನವಗ್ರಹಿಸಿದಿರಿ,

ಶಿವಂಗೋಸುಗ ಮಾಡುವ ಸಯದಾನವನು
ನಡೆಗೆಟ್ಟು ಮಾಡುವೆನು, ನುಡಿಗೆಟ್ಟು ಮಾಡುವೆನು,
ಸರ್ವಕುಳಕ್ಕೆ ನೀನೆಂದು ಅಲ್ಲಯ್ಯನ ಪ್ರಸಾದಕ್ಕೆ ಕೈಯಾನುವೆನು.
ಸಮಬ್ರಹ್ಮರ ಕೇರಿಯೊಳಗೆ ಅಲ್ಲಯ್ಯನ ಪ್ರಭೆ,
ರುದ್ರಭೂಮಿಯೊಳಗೆ ಅಲ್ಲಯ್ಯನ ಪ್ರಭೆ,
ಬಂದು ನಿಂದ ನಿಲವಿಂಗೆ ಅಲ್ಲಯ್ಯನ ಪ್ರಭೆ.
ಸಯದಾನವಿಲ್ಲದಡೆ ಎನ್ನ ನೀಡುವನು ಕೂಡಲಸಂಗಮದೇವಯ್ಯಾ. ॥ ೮೭ ॥

೧೦೪೮

ಆದಿಯಲ್ಲಿ ಸಾಧ್ಯವೆಂಬೆನೆ ಅಲ್ಲಿಂದತ್ತತ್ತ,
ಅನಾದಿಯಲ್ಲಿ ಸಾಧ್ಯವೆಂಬೆನೆ ಅಲ್ಲಿಂದತ್ತತ್ತ,
ಸಾಧ್ಯಾಸಾಧ್ಯವೆಂಬ ಸೂತಕ ಶುದ್ಧಕ್ಕತೀತ.
ಆ ಲಿಂಗವೆ ಆಲಿಂಗನವಾಗಿ ಅವಿರಳ ಸಂಪನ್ನನಾದಲ್ಲಿ,
ಭೇದಭಾವವುಂಟೆಂಬೆನೆ? ಅದೆ ಭವಕ್ಕೆ ಬೀಜ.
ಎನ್ನ ಪ್ರಾಣಲಿಂಗ ನೀವೆಂದೆ ಇಪ್ಪೆನಯ್ಯಾ
ಕೂಡಲಸಂಗಮದೇವಾ. ॥ ೮೮ ॥

೧೦೪೯

ಆದಿ ಲಿಂಗ, ಅನಾದಿ ಜಂಗಮವು,
ಆ ಜಂಗಮಕ್ಕೆ ಮಾಡಿದಡೆ ಪರಮಾನಂದ ಸುಖವಯ್ಯಾ.
ಗುರುವಿಂಗೆ ಪರಮಗುರು ಜಂಗಮವೆಂದುದು
ಕೂಡಲಸಂಗಯ್ಯನ ವಚನ. ॥ ೮೯ ॥

೧೦೫೦

ಆದುದನರಿಯೆ, ಹೋದುದನರಿಯೆ,
ಬಂದುದನರಿಯೆ, ನಿಂದುದನರಿಯೆ,
ಒಳಗನರಿಯೆ, ಹೊರಗನರಿಯೆ,
ಇಹವನರಿಯೆ, ಪರವನರಿಯೆ,
ಭಾವವನರಿಯೆ, ನಿರ್ಭಾವವನರಿಯೆ,
ಶೂನ್ಯವನರಿಯೆ, ನಿಃಶೂನ್ಯವನರಿಯೆ.
ಕೂಡಲಸಂಗಮದೇವಯ್ಯಾ,

ಇವೆಲ್ಲವ ಮಾಡಿ ಕೂಡಿದುತ ಮಡಿವಾಳ ಬಲ್ಲನಾಗಿ,
ನಾನೇನೆಂದೂ ಅರಿಯೆನಯ್ಯಾ. ॥ ೯೦ ॥

೧೦೫೧

ಆನು, ನಿಮ್ಮ ಬಂಟರ ಬಂಟ ನಾನಯ್ಯಾ,
ಆನು, ನಿಮ್ಮ ಲೆಂಕರ ಲೆಂಕ ನಾನಯ್ಯಾ,
ಆನು, ನಿಮ್ಮ ತೊತ್ತಿರ ಪಡುಗವ ತೆಗೆವ ಪಡಿದೊತ್ತಯ್ಯಾ.
ಕೂಡಲಸಂಗನ ಶರಣರಿಗೆಲ್ಲಾ ಸುಗನಬಸವನ ಬಿನ್ನಪ:
ಕವಳಿಗೆಗೆ ಸಂದಿತ್ತು
ನಿಮ್ಮ ನಿಜಪದದಲ್ಲಿ ಬೆರಸೆಂದು ಕೃಪೆಮಾಡಿರಯ್ಯಾ. ॥ ೯೧ ॥

೧೦೫೨

ಆನು ನಿಮ್ಮಲ್ಲಿ ಪ್ರಪಂಚುಪಚಾರವನರಿಯೆನಯ್ಯಾ.
ನಿಮ್ಮ ಪಾದದಲ್ಲಿ ತದ್ಗತನಾಗಿಪ್ಪೆ,
ಭಕ್ತಿ ಯುಕ್ತಿ ವಿರಕ್ತಿಯ ಉಪಚಾರವನರಿಯೆನು.
ಕೂಡಲಸಂಗಮದೇವಾ,
ಭಿನ್ನವಿಲ್ಲದ ಭೃತ್ಯಾಚಾರಕ್ಕೆ ಬಂದ ಪದಾರ್ಥವ ನೀನೆಂದೆ ಚಿತ್ತೈಸಯ್ಯಾ. ॥ ೯೨ ॥

೧೦೫೩

ಆನು ಭಕ್ತನಲ್ಲ, ಆನು ಯುಕ್ತನಲ್ಲ,
ನೀವು ಮಾಡಿದ ಸೂತ್ರದ ಬೊಂಬೆ ನಾನಯ್ಯ.
ಎನಗೆ ಬೇರೆ ಸ್ವತಂತ್ರವುಂಟೆ?
ನೀವೆನ್ನ ಮಾನಾಭಿಮಾನಕ್ಕೊಡೆಯರಾದ ಬಳಿಕ
ಎನ್ನ ತಪ್ಪ ಲೆಕ್ಕಿಸನೆ ಬಿಜಯಂಗೈವುದಯ್ಯಾ,
ಕೂಡಲಸಂಗಮದೇವಾ. ॥ ೯೩ ॥

೧೦೫೪

ಆನು ಮಾಡಿದ ತಪ್ಪನೆಣಿಸಿಹೆನೆಂದಡೆ ಗಣನೆಯಿಲ್ಲ.
ನಡೆದು ತಪ್ಪುವೆ, ನುಡಿದು ತಪ್ಪುವೆ,
ಮಾಡಿ ತಪ್ಪುವೆ, ನೀಡಿ ತಪ್ಪುವೆ,
ಅರಿದು ತಪ್ಪುವೆ, ಮರೆದು ತಪ್ಪುವೆ,
ಎನ್ನ ತಪ್ಪನೊಪ್ಪವಮಾಡಿಕೊಂಬುದಲ್ಲದೆ ಚಿತ್ತಕ್ಕೆ ತರಲಾಗದು.

ಕೂಡಲಸಂಗಯ್ಯನೆಂಬ ಗಂಡನೆನ್ನ ಬೆರಸಬೇಕೆಂದು ಕರೆಯಲಟ್ಟಿದನು,
ಶಿವಶರಣರೆಲ್ಲರಿಗೆ ಶರಣೆಂದು ಬೀಳ್ಕೊಂಬ ತವಕದಲ್ಲಿದ್ದೆನು. || ೯೪ ||

೧೦೫೫

ಆನೆತ್ತ ಬಲ್ಲೆನಯ್ಯಾ ನಿಮ್ಮ ಭಕ್ತಿಯ ಘನವ?
ಆನೆತ್ತ ಬಲ್ಲೆನಯ್ಯಾ ನಿಮ್ಮ ಶ್ರೀಪಾದದ ನಿಲವ?
ಕಾಯದ ಕಳವಳದ ಮರೆಯಲಿದ್ದವರಲ್ಲಿ ಸಂಬುಗೆಯುಳವಡುವುದೆ?
ಕೂಡಲಸಂಗಮದೇವಾ
ಎನ್ನವಗುಣವ ನೋಡದೆ ಕರುಣದಿಂದ
ಭಕ್ತಿಯ ನಿಲವ ತೋರಾ ತಂದೆ. || ೯೫

೧೦೫೬

ಆನೆ, ಭಂಡಾರ, ಲಾಯದ ಕುದುರೆಯ ಬೇಡುವರಿಲ್ಲದೆ ಬಡವಾದೆನಯ್ಯಾ.
ಬೇಡುವುದೇನು ದೇವಾ?
ಮುನ್ನ ಬೇಡಿದೆ ಸಿಂಧುಬಲ್ಲಾಳನ ವಧುವನು,
ಇನ್ನು ಬೇಡಿದಡೆ, ನಿಗಳವನಿಕ್ಕುವೆ.
ಬೇಡಿದ ಶರಣರಿಗೆ ನೀಡದಿರ್ದಡೆ ತಲೆದಂಡ
ಕೂಡಲಸಂಗಮದೇವಾ. || ೯೬ ||

೧೦೫೭

ಆರತವಡಗಿತ್ತೆನ್ನ, ಬಯಕೆ ಸಮನಿಸಿತ್ತೆನ್ನ,
ಸಂಕಲ್ಪ ಸಮನಿಸಿತ್ತೆನ್ನ, ಸ್ವಯವು ದೊರೆಕೊಂಡಿತ್ತೆನ್ನ.
ನಿಮ್ಮ ನೋಡಿ ಎನ್ನ ಕಂಗೆ ಮಂಗಳಮಯದ ಸುಖಸಂಗವಾಯಿತ್ತು.
ಅಯ್ಯಾ, ಒಳಗು ಹೊರಗು, ಹೊರಗೊಳಗೆಂಬುದ ತಿಳಿದು,
ಪ್ರಭುವಿನ ಕರುಣದಿಂದ ಕೂಡಲಸಂಗಮದೇವರಲ್ಲಿ
ತೆರಹಿಲ್ಲದಿರ್ದೆನು. || ೯೭ ||

೧೦೫೮

ಆರಾರ ಮನೆಗೆ ಹೋದಡೆ ಸಾರೆನ್ನರು, ಸರಕುಮಾಡರು,
ಆರ ಸಾರುವೆನಯ್ಯಾ, ಆರ ಹೊದ್ದುವೆನಯ್ಯಾ.
ಭಕ್ತಿಯಿಲ್ಲ–ಬಡವನೆಂದು ಒಡನೆ ನುಡಿಯರು,
ಆರ ಸಾರುವೆನಯ್ಯಾ?

ಕಾರುಣ್ಯಮೂರ್ತಿ, ನೀನಲ್ಲದೆ ಇನ್ನಾರ ಸಾರುವೆನಯ್ಯಾ,
ಕೂಡಲಸಂಗಯ್ಯಾ? ॥ ೯೮ ॥

೧೦೫೯

ಆಶೆ ಇಚ್ಛೆಗೆನ್ನ ಗಾಸಿ ಮಾಡದಿರಯ್ಯಾ,
ದಾಸೋಹಿಯಾಗಿರ್ಪ ದಾಸನಾಗಿರಿಸೆನ್ನ
ಕೂಡಲಸಂಗಮದೇವಾ, ನಿಮ್ಮ ಧರ್ಮ. ॥ ೯೯ ॥

೧೦೬೦

ಆಹ್ವಾನವಿಲ್ಲ ಪ್ರಾಣಲಿಂಗವಾಗಿ,
ವಿಸರ್ಜನವಿಲ್ಲ ಲಿಂಗ ನೆಲೆಗೊಂಡಿಪ್ಪುದಾಗಿ.
ಇದು ಕಾರಣ, ಆಹ್ವಾನ ವಿಸರ್ಜನವಿಲ್ಲ, ಶರಣನ ಪರಿ ಬೇರೆ:
ಅಂಗಸಂಗವೆ ಲಿಂಗ, ಲಿಂಗಸಂಗವೆ ಮನ,
ಕೂಡಲಸಂಗನ ಶರಣ ಸುಯಿಧಾನಿ. ॥ ೧೦೦ ॥

೧೦೬೧

ಆಹ್ವಾನಿಸಿ ಕರೆದಲ್ಲಿ ಎಲ್ಲಿರ್ದನೊ,
ಈರೇಳುಲೋಕ ಹದಿನಾಲ್ಕು ಭುವನವನೊಳಕೊಂಡಿಪ್ಪ ದಿವ್ಯವಸ್ತು?
ಮತ್ತೆ ವಿಸರ್ಜಿಸಿ ಬಿಡುವಾಗ ಎಲ್ಲಿರ್ದನೊ,
ಮುಳ್ಳೂರ ತೆರಹಿಲ್ಲದಿಪ್ಪ ಅಖಂಡವಸ್ತು?
ಬರಿಯ ಮಾತಿನ ಬಳಕೆಯ ತೂತಜ್ಞಾನವ ಬಿಟ್ಟು,
ನೆಟ್ಟನೆ ತನ್ನ ಕರಸ್ಥಲದೊಳಗಿರುತಿಪ್ಪ ಇಷ್ಟಲಿಂಗವ ದೃಷ್ಟಿಸಿ ನೋಡಲು,
ಅಲ್ಲಿ ತನ್ನ ಮನಕ್ಕೆ ಮನ ಸಂಧಾನವಾದ ದಿವ್ಯನಿಶ್ಚಯವೊದಗಿ,
ಆ ದಿವ್ಯನಿಶ್ಚಯದಿಂದ ಕುಳವಡಗಿ ಅದ್ವೈತವಪ್ಪುದು.
ಇದು ಕಾರಣ, ನಮ್ಮ ಕೂಡಲಸಂಗನ ಶರಣರು
ಆಹ್ವಾನ–ವಿಸರ್ಜನ ಎಂಬ ಉಭಯ ಜಡತೆಯ ಬಿಟ್ಟು
ತಮ್ಮ ತಮ್ಮ ಕರಸ್ಥಲದಲ್ಲಿ ನಿಶ್ಚಯಿಸಿದರಾಗಿ
ಸ್ವಯಲಿಂಗವಾದರು ಕಾಣಭೋ. ॥ ೧೦೧ ॥

೧೦೬೨

ಇಂದ್ರನಾವಾಸ, ಉಪೇಂದ್ರನ ಓಲಗ
ಚಂದ್ರಮೌಳಿಯನರಿಯದೆ ಹೋಯಿತ್ತು,

ಬಂಧಮೋಕ್ಷದ ಭವಬಂಧನ ಬಿಡದನ್ನಕ್ಕರ
ಮತ್ತೊಂದರ ಮುಖ ಜನಿಸಿತಲ್ಲಾ.
ಕೂಡಲಸಂಗಮದೇವಾ,
ಚೆನ್ನಬಸವಣ್ಣನ ಸನ್ನಿಧಿಯಿಂದಲಾನು ಬದುಕಿದೆನು. || ೧೦೨ ||

೧೦೬೩

ಇದ್ದ ಪರಿ ಇಂತುಟಿದೆ ನೋಡಯ್ಯಾ:
ನಿಂದಡೆ ನೆಳಲಿಲ್ಲ, ನಡೆದಡೆ ಹೆಜ್ಜೆಯಿಲ್ಲ,
ಭೂತಳದೊಳಗೆ ಕಂಡುದಿಲ್ಲ.
ಇಂತಪ್ಪ ಅನಿಯಮದ ಸುಳುಹು,
ಅಹುದಹುದು, ಅರಿದರಿದು
ಜಂಗಮಸ್ಥಲ ಇಂತುಟಲ್ಲದೆ, ಎಂತುಟು ಹೇಳಾ?
ಆಪ್ಯಾಯನದ ಅರಿಕೆಯು ಹೊಲಬ ಕಾಣಬಾರದು,
ಊಡಿಸಿದಡೆ ಉಂಬನೊ ಉಣ್ಣನೊ?
ಉಂಬಂಥವರಾದಡೆ ನೀಡುವೆ ಕೂಡಲಸಂಗಮದೇವರಿಗೆ
ಚೆನ್ನಬಸವಣ್ಣಾ, ನೀನಹುದಹುದೆನಲಿಕೆ. || ೧೦೩ ||

೧೦೬೪

ಇನ್ನೇವನಿನ್ನೇವೆ ಕೆಮ್ಮನೆ ಕೆಟ್ಟೆನು,
ಇನ್ನೇವನಿನ್ನೇವೆ ಕೆಮ್ಮನೆ ಕೆಟ್ಟೆನು.
ನಿಮ್ಮ ಶರಣರು ಬಂದು ಬಾಗಿಲೊಳಿರಲು,
ದಿಮ್ಮನೆ ಇದಿಳೆದ್ದು ವಂದಿಸಲರಿಯದೆ
ಕೆಟ್ಟ ಕೇಡನೇನೆಂದುಪಮಿಸುವೆನು.
ಕೂಡಲಸಂಗಮದೇವಾ,
ನಾನುಭಯಭ್ರಷ್ಟನೆಂಬುದು ಎನಗಿಂದರಿಯಬಂದಿತ್ತು. || ೧೦೪ ||

೧೦೬೫

ಇನ್ನೇವೆನಿನ್ನೇವೆನಯ್ಯಾ?
ಎನ್ನ ಮನವೆಂಬ ಮರ್ಕಟನ ದಾಳಿ ಘನವಾಯಿತ್ತು,
ಎನ್ನ ನಿಂದಲ್ಲಿ ನಿಲ್ಲಲೀಯದು,
ಎನ್ನ ಕುಳಿತಲ್ಲಿ ಕುಳ್ಳಿರಲೀಯದು,
ಕ್ಷಣದಲ್ಲಿ ಪಾತಾಳಕ್ಕೆ ಐದುತ್ತಿದೆ.

ಕ್ಷಣದಲ್ಲಿ ಆಕಾಶಕ್ಕೆ ಐದುತ್ತಿದೆ.
ಕ್ಷಣದಲ್ಲಿ ದಿಗ್ದೆಸೆಗೆ ಐದುತ್ತಿದೆ.
ಕೂಡಲಸಂಗಮದೇವಾ
ಈ ಮನವೆಂಬ ಮರ್ಕಟನ ದಾಳಿಯನೆಂದಿಗೆ ನೀಗಿ,
ಎಂದು ನಿಮ್ಮನೊಡಗೂಡುವೆನಯ್ಯಾ ॥ ೧೦೫ ॥

೧೦೬

ಇಷ್ಟಲಿಂಗಕ್ಕರ್ಪಿಸಿ, ಮೃಷ್ಟಾನ್ನವನುಂಡು,
ಇಷ್ಟಾರ್ಥಸಿದ್ಧಿಯ ಪಡೆದೆಹೆವೆಂಬ ಮರಳುಗಳು ನೀವು ಕೇಳಿರೆ:
ಪ್ರಾಣಲಿಂಗಸ್ಥಲ ನಿಮಗೆಲ್ಲಿಯದು? ಪ್ರಸಾದಸ್ಥಲ ನಿಮಗೆಲ್ಲಿಯದು?
ಓಗರವನುಂಡು ಆಗಾದೆವೆಂದಡೆ,
ಮೂಗಕೊಯ್ಯದೆ ಮಾಣ್ಬನೆ ನಮ್ಮ ಕೂಡಲಸಂಗಮದೇವನು? ॥ ೧೦೬ ॥

೧೦೭

ಇಷ್ಟಲಿಂಗವೊಂದು ಪ್ರಾಣಲಿಂಗ[ವೊಂದು, ಭಾವಲಿಂಗ]ವೊಂದೆಂಬ
ಮಿಟ್ಟಿಯ ಭಂಡರ, ಅವರ ಮಾತ ಕೇಳಲಾಗದು.
ಅಂಗಳದೊಳಗೊಬ್ಬ ಗಂಡ, ಮನೆಯೊಳಗೊಬ್ಬ ಗಂಡ,
ಹಿತ್ತಿಲೊಳಗೊಬ್ಬ ಗಂಡನೆಂಬ ಸತಿಯರ
ಲೋಕದ ಮಾನವರು ಮೆಟ್ಟಿ ಮೂಗಕೊಯ್ಯದೆ ಮಾಣ್ಬರೆ, ಅಯ್ಯಾ?
ಲಿಂಗತ್ರಯವೆಂದು ತೋರಿದವರಾರೊ?
'ಲಿಂಗಮೇಕಂ ಪರಂ ನಾಸ್ತಿ' ಎಂದು ಸದ್ಗುರುಸ್ವಾಮಿ ಅರುಹಿಂದನಾಗಿ.
ಷಟ್ತ್ರಿಂಶತ್ತತ್ವಕ್ಕೆ ಆಲಯಮಪ್ಪಂತಹ ಮಹಾಘನಲಿಂಗದ ಬೆಳಗು
ಕರಸ್ಥಲದಲ್ಲಿ, ಮನಸ್ಥಲದಲ್ಲಿ, [ಭಾವಸ್ಥಲದಲ್ಲಿ] ವೇದ್ಯವಾದ ಬಳಿಕ
ಸರ್ವಾಂಗಲಿಂಗ, ಕೂಡಲಸಂಗಯ್ಯಾ ನಿಮ್ಮ ಶರಣಂಗೆ. ॥ ೧೦೭ ॥

೧೦೮

ಇಹದ ಪೂರ್ವವ ಜರೆದು, ಪರದ ಪೂರ್ವವನರಿದು,
ಗುರುಕಾರುಣ್ಯವ ಪಡೆದು, ಅಂತರ್ಬಾಹ್ಯದ ಭವಿಯ ತೊರೆದು
ಭಕ್ತಿಪರಾಯಣರಾಗಿ ನಿಂದುದೆ ಲಿಂಗದ ನಿಜದಂಗ.
ಅದೆಂತೆಂದಡೆ:

ತ್ರಿಗುಣಂ ಪಂಚಕಂ ಚೈವ ಚತ್ವಾರಿ ಷಡ್ವಿಧೈವ ಚ।
ಸಘಾತಂ ವ್ಯಸನಂ ಚೈವ ಇತ್ಯಾದಿ ಭವಿಮಿಶ್ರಿತಂ॥
ಎಂದುದಾಗಿ, ಅಂತರಂಗದ ಭವಿಯನು ಹಿಂಗಿ,
ಅನೃತಮಸ್ಥಿರಂ ವಾಕ್ಯಂ ವಂಚನಂ ಪಙ್ಕ್ತಿಭೇದನಂ।
ಔದಾಸೀನಂ ನಿರ್ದಯತ್ವಂ ಷಡ್ವಿಧಂ ಭಕ್ತಿಮಿಶ್ರಿತಂ॥
ಎಂಬೀ ಮಾನವರಂಗದ ಭವಿಯನು ಕಳೆದು,
ಅರ್ಚನಾದಿ ಕ್ರಿಯಾಕಾಲೇ ಪ್ರಚ್ಛನ್ನಂ ಪಟಮುತ್ತಮಂ।
ಪಾಪೀ ಕೋಪೀ ಪರಿಭ್ರಷ್ಟೋ ನಾಸ್ತಿಕೋ ವ್ರತದೂಷಕಃ॥
ದುರ್ಜನಶ್ಚ ದುರಾಚಾರೀ ಧುರ್ಮುಖಶ್ಚಾಪ್ಯದೀಕ್ಷಿತಃ।
ಪ್ರಮಾದಾದ್ದೃಶ್ಯತೇ ಯೇನ ತಸ್ಯ ಪೂಜಾ ತು ನಿಷ್ಫಲಂ॥
ಎಂಬೀ ಬಹಿರಂಗದ ಭವಿಯನ್ನು ತೊಲಗಿಸಿ,
ಇಂತೀ ತ್ರಿವಿಧಭವಿಯನು ದೂರಮಾಡಿ,
ಶಿವಭಕ್ತಿಯೆ ಅಂಗವಾದ ಲಿಂಗೈಕ್ಯ ಲಿಂಗಪೂಜಕರಿಗೆ
ಪೂರ್ವವರ್ಣಾಶ್ರಮಾದಿ ಸೂತಕವಿಲ್ಲ, ಕೂಡಲಸಂಗಯ್ಯಾ, । ೧೦೮ ॥

೧೦೯

ಈ ಕೈಯಲಿ ಸುಖವು, ಈ ಕೈಯಲಿ ದುಃಖವು.
ಏಕಯ್ಯಾ, ನೀ ನಮ್ಮ ಬರಿದೆ ಬಳಲಿಸುವೆ?
ನಾನಾರ ಸೇರುವೆನಯ್ಯಾ? ಆರೂ ಇಲ್ಲದ ದೇಸಿಗ ನಾನು,
ಕೂಡಲಸಂಗಮದೇವಾ. ॥ ೧೦೯ ॥

೧೧೦

ಈರೇಳು ರತ್ನ, ಹದಿನೆಂಟು ಲಕ್ಷಗಜ,
ನಾರಿಯರು ನಾಲ್ಕು ಲಕ್ಷವು ಮೂವತ್ತೆರಡುಸಾವಿರ,
ಮಕ್ಕಳು ಹದಿನಾರು ಲಕ್ಷ,
ಅವರುಗಳೇರುವ ರಥಂಗಳು ಸೂರ್ಯನ ರಥಕ್ಕೆ ಸರಿಮಿಗಿಲೆನಿಸುವ ರಥಂಗಳು,
ಸಾಲದೆ, ಸಿರಿಗೆ ನೆಲೆಯೆನಿಸುವ ಅಸಂಖ್ಯಾತ ಪುರ,
ಮೂರುವರೆ ಕೋಟಿ ಬಂಧುಗಳು,
ಮೂವತ್ತೆಂಟು ಕೋಟಿ ಜಾತ್ಯಶ್ವ,
ಇಪ್ಪತ್ತೆಂಟು ಕೋಟಿ ಪೈಗಾವಲ ವೀರಭಟರು,
ಛಪ್ಪನ್ನ ದೇಶದ ರಾಯರುಗಳೆಲ್ಲರು ಕಪ್ಪಕಾಣಿಕೆಯಂ ತೆತ್ತು ಬಹರು.
ಕೂಡಲಸಂಗಮದೇವಾ, ನಿಮ್ಮ ಕೃಪೆ ತಪ್ಪಿದಲ್ಲಿ
ಆ ಸಗರಚಕ್ರವರ್ತಿಯರೊಂದು ಕ್ಷಣದಲ್ಲಿ ಮಡಿದರು. ॥ ೧೧೦ ॥

೧೦೭೧

ಉದಕದ ಬರವು ವಿಶ್ವಕ್ಕೆ ಹೊಸಪರಿ ಎಂಬಂತೆ
ಮಾಟವ ಮಾಡುವನು ಜಂಗಮಕ್ಕೆ,
ನಿರವಯದ ಸುಳುಹು ನಿಬ್ಬೆರಗಿನ ಬರವಿಂಗೆ.
ಕೂಡಲಸಂಗಮದೇವ ಕೇಳಯ್ಯಾ,
ಇಂತಲ್ಲದೆ ನಿಮ್ಮ ನಿಜವನರಿಯಬಾರದೆನಗೆ. ॥ ೧೧೧ ॥

೧೦೭೨

ಉದಯ ಮಧ್ಯಾಹ್ನ ಸಂಧ್ಯಾಕಾಲವ ನೋಡಿ
ಮಾಡುವ ಕರ್ಮಿ ನೀ ಕೇಳಾ:
ಉದಯವೆಂದೇನೊ ಶರಣಂಗೆ?
ಮಧ್ಯಾಹ್ನವೆಂದೇನೊ ಶರಣಂಗೆ?
ಅಸ್ತಮಾನವೆಂದೇನೊ ಶರಣಂಗೆ?
ಮಹಾಮೇರುವಿನ ಮರೆಯಲ್ಲಿರ್ದು
ತಮ್ಮ ನೆಳಲನರಸುವ ಭಾವಭ್ರಮಿತರ ಮೆಚ್ಚ,
ನಮ್ಮ ಕೂಡಲಸಂಗಮದೇವರು. ॥ ೧೧೨ ॥

೧೦೭೩

ಉರಿಯೊಳಗಣ ಕರ್ಪೂರಕ್ಕೆ ಕರಿಯುಂಟೆ ಅಯ್ಯಾ?
ಬಯಲ ಮರೀಚಿಜಲಕ್ಕೆ ಕೆಸರುಂಟೆ?
ವಾಯುವಪ್ಪಿದ ಪರಿಮಳಕ್ಕೆ ನಿರ್ಮಾಲ್ಯವುಂಟೆ?
ನೀವು ನೆರೆ ಒಲಿದ ಬಳಿಕ ಎನಗೆ ಭವವುಂಟೆ?
ಕೂಡಲಸಂಗಮದೇವಾ,
ನಿಮ್ಮ ಚರಣಕಮಲದೊಳಗೆನ್ನನಿಂಬಿಟ್ಟುಕೊಳ್ಳಯ್ಯಾ, ॥ ೧೧೩ ॥

೧೦೭೪

ಊರ ಮಾರಿಯ ಮೂಗ ಕೊಯ್ವೆ, ಆಲದ ಬ್ರಹ್ಮನ ಹಲ್ಲ ಕಳೆವೆ,
ಅಂತರದವ ನಮ್ಮ ಲಿಂಕ ನೋಡಾ,
ಆಕಾಶದವ ನಮ್ಮಾಳು ನೋಡಾ.
ಎಮಗೆ ಕೂಡಲಸಂಗಯ್ಯನುಂಟು,
ಕೆಟ್ಟು, ಜವನೆಂಬ ತರುವಲಿಗೊರೆಯ. ॥ ೧೧೪ ॥

೧೦೭೫

ಊರಿಗೆ ಹೊಸಬರು ಬಂದರೆ
ಪುರದೊಳಗಣ ಶ್ವಾನ ನೋಡಿ ಬಗುಳದೆ ಸುಮ್ಮನೆ ಬಿಡುವುದೆ?
ಊರಿಗೆ ಹೊರಗಾದ ಶರಣರು ಊರುಗಳ ಮಧ್ಯದೊಳಿರಲು
ದೂಷಕರು ದೂಷಿಸದಿಪ್ಪರೇ ಅಯ್ಯ?
ದೂಷಕರ ಧೂಮಕೇತುಗಳು ನಿಮ್ಮ ಶರಣರು,
ಕೂಡಲಸಂಗಮದೇವಾ. || ೧೧೫ ||

೧೦೭೬

ಎಡದ ಪಾದದಲೊದ್ದಡೆ ಬಲದ ಪಾದವ ಹಿಡಿವೆ,
ಬಲದ ಪಾದದಲೊದ್ದಡೆ ಎಡದ ಪಾದವ ಹಿಡಿವೆ,
ತ್ರಾಹಿ ತ್ರಾಹಿ ತಪ್ಪೆನ್ನದು, ಕ್ಷಮೆ ನಿಮ್ಮದು.
ಕೂಡಲಸಂಗಮದೇವಾ,
ನಿಮ್ಮ ಕರುಣದ ಕಂದ ನಾನು. || ೧೧೬ ||

೧೦೭೭

ಎಣಿಕೆಗೆ ಬಂದ ಸಯದಾನ ಕ್ಷಣಕ್ಕೆ ಪಾಕವಾಗಲು,
ಗಣನೆಯಿಲ್ಲದೆ ನೀಡುತ್ತಿರಲು,
ತೋರದ ಮುನ್ನವೆ ಅರ್ಪಿತವಾದವು.
ಇಂತು ಎಣಿಸಿ ನೋಡೆಹೆನೆಂದಡೆ ಮನಕೆ ಸಾಧ್ಯವಲ್ಲ,
ಬಯಲು ಬಾಯಿದೆಗೆದಂತೆ ಉಣ್ಣುತ್ತಿದ್ದಾನು,
ಕೂಡಲಸಂಗಮದೇವನು. || ೧೧೭ ||

೧೦೭೮

ಎತ್ತ ನೋಡಿದಡತ್ತ ನಿಮ್ಮ ತೇಜವನೇ ಕಾಬೆನಲ್ಲದೆ
ಮತ್ತೊಂದ ಕಾಣೆ.
ಎನ್ನ ಚಿತ್ತ ನೋವಲ್ಲಿ ನೊಂದಲ್ಲಿ ನೆನೆವಲ್ಲಿ ನೀನೇ ಇಪ್ಪೆಯಾಗಿ,
ಬೆಳಗಿರಲು ಕತ್ತಲೆಯುಂಟೆ
ಕೂಡಲಸಂಗಮದೇವಾ? || ೧೧೮ ||

೧೦೭೯

ಎನಗೆ ಜನನವಾಯಿತ್ತೆಂಬರು ಎನಗೆ ಜನನವಿಲ್ಲವಯ್ಯಾ,
ಎನಗೆ ಮರಣವಾಯಿತ್ತೆಂಬರು ಎನಗೆ ಮರಣವಿಲ್ಲವಯ್ಯಾ.
ಜನನವಾದಡೆ ನಿಮ್ಮ ಪಾದೋದಕ ಪ್ರಸಾದವ ಕೊಂಬೆ,
ಮರಣವಾದಡೆ ನಿಮ್ಮ ಶ್ರೀಚರಣವನೆಯ್ದುವೆ.
ಬಾವನ್ನದ ವೃಕ್ಷವು ಊರೊಳಗಿದ್ದಡೇನು, ಅಡವಿಯೊಳಗಿದ್ದಡೇನು
ಪರಿಮಳ ಒಂದೇ, ಕೂಡಲಸಂಗಮದೇವಾ. ॥ ೧೧೯ ॥

೧೦೮೦

ಎನಗೆ ನಾನೇ ಹಗೆ ನೋಡಯ್ಯಾ,
ಎನಗೆ ನಾನೇ ಕೆಳೆ ನೋಡಯ್ಯಾ.
ನಿಮ್ಮ ಸದ್ಭಕ್ತರೊಡನೆ ವಿರೋಧಮಾಡಿದಡೆ ಎನ್ನ ಕೊಲುವುದಾಗಿ,
ನಿಮ್ಮ ಪುರಾತನರಿಗಂಜಿ ಬೆಸಗೊಂಡಡೆ ಎನ್ನ ಕಾಯ್ವುದಾಗಿ.
ಅನ್ಯ ಹಗೆಯೆಲ್ಲಿ? ಕೆಳೆಯೆಲ್ಲಿ?
ಬಾಗಿದ ತಲೆಯ ಮುಗಿದ ಕೈಯಾಗಿರಿಸು,
ಕೂಡಲಸಂಗಮದೇವಾ. ॥ ೧೨೦ ॥

೧೦೮೧

ಎನ್ನಂಗದ ಮೇಲಿದ್ದ ಲಿಂಗವ ದಿಟಮಾಡಲರಿಯೆನು,
ಜಂಗಮವೆ ಲಿಂಗವೆಂಬ ಮಾತೆನಗೆ ಕಷ್ಟ.
ಕಲಹ ಕಡುಗೋಪಿ ನಾನಯ್ಯಾ, ದುರಾಚಾರಿ ನಾನು,
ಎನಗೆ ಕರುಣಿಸು ಕೂಡಲಸಂಗಮದೇವಾ. ॥ ೧೨೧ ॥

೧೦೮೨

ಎನ್ನಂತರಂಗದೊಳಗೆ ಅರಿವಾಗಿ,
ಎನ್ನ ಬಹಿರಂಗದೊಳಗೆ ಆಚಾರವಾಗಿ ನೀನೆಡೆಗೊಂಡು,
ಎನ್ನ ಮನದೊಳಗೆ ಘನ ನೆನಹಾಗಿ ಮೂರ್ತಿಗೊಂಡು,
ಗುರುಸ್ಥಲ ಲಿಂಗಸ್ಥಲ ಜಂಗಮಸ್ಥಲ ಪ್ರಸಾದಿಸ್ಥಲವೆಂಬ
ಚತುರ್ವಿಧವನೂ ಎನಗೆ ಸ್ವಾಯತವ ಮಾಡಿ ತೋರಿ,
ಪ್ರಾಣಲಿಂಗವೆಂಬ ಹಾದಿಯ ಸೆರಗ ತೋರಿಸಿ,
ಎಲ್ಲಾ ಅಸಂಖ್ಯಾತರನೂ ಪಾವನವ ಮಾಡಿದಿರಾಗಿ–
ಕೂಡಲಸಂಗಮದೇವಾ,

ನಿಮ್ಮಿಂದ ಸಕಲ ಸನುವುತವ ನಾನರಿದೆನಲ್ಲದೆ,
ಎನ್ನಿಂದ ನೀನಾದೆ ಎಂಬುದ ನಿಮ್ಮ ಪ್ರಮಥರು ಮೆಚ್ಚರು ನೋಡಯ್ಯಾ.॥ ೧೨೨ ॥

೧೦೮೩

ಎನ್ನಂತರಂಗ ನೀವಯ್ಯಾ, ಎನ್ನ ಬಹಿರಂಗ ನೀವಯ್ಯಾ,
ಎನ್ನ ಅರಿವು ನೀವಯ್ಯಾ, ಎನ್ನ ಮರಹು ನೀವಯ್ಯಾ,
ಎನ್ನ ಭಕ್ತಿ ನೀವಯ್ಯಾ, ಎನ್ನ ಯುಕ್ತಿ ನೀವಯ್ಯಾ,
ಎನ್ನ ಆಲಸ್ಯ ನೀವಯ್ಯಾ, ಎನ್ನ ಪರವಶ ನೀವಯ್ಯಾ,
ಸಮುದ್ರವ ಹೊಕ್ಕ ಕಾಲುವಳ್ಳದಲ್ಲಿ
ಕೊರತೆಯನರಸುವುದೆ, ಆ ಸಮುದ್ರವು?
ಎನ್ನ ಲೇಸು ಹೊಲ್ಲೆಹವೆಂಬುದು ನಿಮ್ಮದೆಂಬುದ ನೀವೆ ಬಲ್ಲಿರಿ,
ಇದಕ್ಕೆ ನಿಮ್ಮ ಪಾದವೆ ಸಾಕ್ಷಿ, ಎನ್ನ ಮನವೆ ಸಾಕ್ಷಿ, ॥ ೧೨೩ ॥
ಕೂಡಲಸಂಗಮದೇವಾ.

೧೦೮೪

ಎನ್ನ ಕರಸ್ಥಲದ ಲಿಂಗವ ಅನಿಮಿಷ ಕೊಂಡನು,
ಅನಿಮಿಷನ ಕರಸ್ಥಲದ ಲಿಂಗವ ನೀವು ಕೊಂಡಿರಿ.
ನಿಮ್ಮ ಕರಸ್ಥಲವೆ ಪರಸ್ಥಲವಾಯಿತ್ತು,
ಕುರುಹಳಿದಲ್ಲಿ ಕುರುಹ ಕೊಂಬ ಪರಿ ಎಂತಯ್ಯಾ?
ಕೊಡುವವರು ಕೊಂಬವರೊಳಗೆ ಸಿಲುಕಿದ ಬಳಿಕ
ಕೊಂಬವರು ಕೊಡುವವರೊಳಗೆ ಸಿಲುಕಿದ ಬಳಿಕ,
ಕೂಡಲಸಂಗಮದೇವಪ್ರಭುವೆ,
ನಿಮ್ಮ ಕರಸ್ಥಲದ ಲಿಂಗವೆನಗೆ ಸಾಧ್ಯವಹ ಪರಿಯೆಂತಯ್ಯಾ? ॥ ೧೨೪ ॥

೧೦೮೫

ಎನ್ನ ಕಾಯಕ್ಕೆ ಕಾಹ ಹೇಳುವರಲ್ಲದೆ ಮನಕ್ಕೆ ಕಾಹ ಹೇಳುವರಿಲ್ಲಯ್ಯಾ,
ಅಣಕದ ಮಿಂಡತನಂಗಳ ನೋಡಿ ಕಂಡೆನವ್ವಾ.
ಈತನ ಲೀಲೆಗಂಡಾನು ಬೆರಗಾದೆ.
ಕೂಡಲಸಂಗಮದೇವ ಎನ್ನ ಮನಕ್ಕೆ ಕಾಹ ಹೇಳಿದನವ್ವಾ. ॥ ೧೨೫ ॥

೧೦೮೬

ಎನ್ನ ಕಾಯದ ಕತ್ತಲೆಯ ಕಳೆಯಲರಿಯೆನು,
ಎನ್ನ ಜೀವದ ನಿಲವ ಗೆಲಲರಿಯೆನು,
ಎನ್ನ ಭಾವದ ಸೂತಕವ ಕಳೆಯಲರಿಯೆನು.
ನಾನೆಂತು ಬಲ್ಲೆನಯ್ಯಾ ನಿಮ್ಮ ಘನಮಹಿಮರ ನಿಲವ?
ಕೂಡಲಸಂಗಮದೇವಾ,
ನಿಮ್ಮ ಶರಣ ಮಡಿವಾಳ ಮಾಚಿತಂದೆಯ ಘನವ ನೀವೆ ಬಲ್ಲಿರಿ. ॥ ೧೨೬ ॥

೧೦೮೭

ಎನ್ನ ಕಾಯದ ಕತ್ತಲೆ ಹಿಂಗಿತ್ತು,
ಚೆನ್ನಬಸವಣ್ಣಾ ಇಂದಿನಲ್ಲಿ.
ಎನ್ನ ತನುಮನಧನದ ಲೋಭವಳಿದು ತಳವೆಳಗಾಯಿತ್ತು,
ಚೆನ್ನಬಸವಣ್ಣಾ ಇಂದಿನಲ್ಲಿ.
ಎನ್ನನೆಡೆಗೊಂಡ ಅಹಂಕಾರ ನಿರ್ವಯಲಾಯಿತ್ತು
ಚೆನ್ನಬಸವಣ್ಣಾ ಇಂದಿನಲ್ಲಿ.
ಕೂಡಲಸಂಗಮದೇವರ ತೃಪ್ತಿಯ ತೆರನ
ನೀನು ತೋರಿದೆಯಾಗಿ ನಾನು ಬದುಕಿದೆ ಕಾಣಾ,
ಚೆನ್ನಬಸವಣ್ಣಾ. ॥ ೧೨೭ ॥

೧೦೮೮

ಎನ್ನ ಕಾಯದ ಕರಸ್ಥಲದಲ್ಲಿ ಪ್ರಭುದೇವರ ಕಂಡೆನು,
ಎನ್ನ ಪ್ರಾಣದ ಕರಸ್ಥಲದಲ್ಲಿ ಚೆನ್ನಬಸವಣ್ಣನ ಕಂಡೆನು,
ಎನ್ನ ಸರ್ವಾಂಗದ ಕರಸ್ಥಲದಲ್ಲಿ ಮಡಿವಾಳನ ಕಂಡೆನು,
ಸಂಗನೋ ಮಡಿವಾಳನೋ ಎಂದು ನುಡಿಯಲರಿಯೆ.
ಎನ್ನೊಡಲ ಗುಣಂಗಳ ಕೆಡಿಸಿ ಕಡೆಯ ಕಾಣಿಸಿದ,
ಎನ್ನನುಳುಹಿದ ಪರಮಯೋಗಿ.
ಕೂಡಲಸಂಗಮದೇವಾ,
ಮಡಿವಾಳ ಮಾಚಿತಂದೆಗಳ ಪಾದಕ್ಕೆ
ನಮೋ ನಮೋ ಎಂಬೆನು. ॥ ೧೨೮ ॥

೧೦೮೯

ಎನ್ನ ಕಾಯದ ಕರಸ್ಥಲದಲ್ಲಿ ಅಲ್ಲಮಪ್ರಭುದೇವರ ಕಂಡೆನು,
ಎನ್ನ ಮನದ ಕರಸ್ಥಲದಲ್ಲಿ ಚೆನ್ನಬಸವಣ್ಣನ ಕಂಡೆನು,
ಎನ್ನ ಅರಿವಿನ ಕರಸ್ಥಲದಲ್ಲಿ ಮಡಿವಾಳಯ್ಯನ ಕಂಡೆನು.
ಒಳಗು ಹೊರಗು, ಹೊರಗು ಒಳಗೆಂಬ ಭೇದವನರಿಯದೆ ಇದ್ದೆನು.
ಕೂಡಲಸಂಗಮದೇವಯ್ಯಾ,
ನಿಮ್ಮ ಶರಣರು ಎನ್ನ ಪಾವನವ ಮಾಡಿದ ಪರಿಣಾಮವ
ಅಂತಿಂತೆನಲಮ್ಮದೆ ನಮೋ ನಮೋ ಎನುತ್ತಿದ್ದೆನು. ॥ ೧೨೯ ॥

೧೦೯೦

ಎನ್ನ ಕಾಯವ ಶುದ್ಧವ ಮಾಡಿದಾತ ಮಡಿವಾಳ,
ಎನ್ನ ಮನವ ನಿರ್ಮಳವ ಮಾಡಿದಾತ ಮಡಿವಾಳ,
ಎನ್ನಂತರಂಗವ ಬೆಳಗಿದಾತ ಮಡಿವಾಳ,
ಎನ್ನ ಬಹಿರಂಗವ ಬಿಡಿಸಿದಾತ ಮಡಿವಾಳ.
ಕೂಡಲಸಂಗಮದೇವಾ,
ಎನ್ನ ನಿಮಗೆ ಯೋಗ್ಯನ ಮಾಡಿದಾತ ಮಡಿವಾಳ. ॥ ೧೩೦ ॥

೧೦೯೧

ಎನ್ನ ಗಂಡ ಬರಬೇಕೆಂದು,
ಎನ್ನಂತರಂಗವೆಂಬ ಮನೆಯ ತೆರಹು ಮಾಡಿ,
ಅಷ್ಟದಳವೆಂಬ ಓವರಿಯೊಳಗೆ
ನಿಜನಿವಾಸವೆಂಬ ಹಾಸುಗೆಯ ಹಾಸಿ,
ಧ್ಯಾನವೆಂಬ ಮೇಲುಕಟ್ಟಂ ಕಟ್ಟಿ,
ಜ್ಞಾನವೆಂಬ ದೀಪವ ಬೆಳಗಿ,
ನಿಷ್ಕ್ರಿಯೆಯೆಂಬ ಉಪಕರಣಂಗಳ ಹರಹಿಕೊಂಡು,
ಪಶ್ಚಿಮದ್ವಾರವೆಂಬ ಬಾಗಿಲ ತೆರೆದು,
ಕಂಗಳೆ ಪ್ರಾಣವಾಗಿ ಬರವ ಹಾರುತ್ತಿರ್ದೆನಯ್ಯಾ.
ನಾನು, ಬಾರದಿರ್ದಡೆ ಉಮ್ಮಳಿಸಿಹೆನೆಂದು
ತಾನೆ ಬಂದು ಎನ್ನ ಹೃದಯಸಿಂಹಾಸನದ ಮೇಲೆ ಮೂರ್ತಗೊಂಡಡೆ,
ಎನ್ನ ಬಯಕೆ ಸಯವಾಯಿತ್ತು.
ಹಿಂದೆ ಹನ್ನೆರಡು ವರುಷದಲ್ಲಿದ್ದ

ಚಿಂತೆಯಿಂದು ನಿಶ್ಚಿಂತೆಯಾಯಿತ್ತು.
ಕೂಡಲಸಂಗಮದೇವರು
ಕೃಪಾಮೂರ್ತಿಯಾದ ಕಾರಣ
ನಾನು ಬದುಕಿದೆನು. ॥ ೧೩೧ ॥

೧೯೨

ಎನ್ನ ಗುರು ಪರಮಗುರು ನೀವೆ ಕಂಡಯ್ಯ,
ಎನ್ನ ಗತಿಮತಿ ನೀವೆ ಕಂಡಯ್ಯ,
ಎನ್ನ ಅರಿವಿನ ಜ್ಯೋತಿ ನೀವೆ ಕಂಡಯ್ಯ,
ಎನ್ನಂತರಂಗ ಬಹಿರಂಗದ ಮಹವು ನೀವೆ ಕಂಡಯ್ಯ.
ಕೂಡಲಸಂಗಮದೇವಾ,
ನೀವೆನಗೆ ಗುರು, ನಾ ನಿಮಗೆ ಶಿಷ್ಯನೆಂಬುದನು
ನಿಮ್ಮ ಶರಣ ಸಿದ್ಧರಾಮಯ್ಯದೇವರೆ ಬಲ್ಲರು. ॥ ೧೩೨ ॥

೧೯೩

ಎನ್ನ ತನುಮನವೆರಡನೂ
ಗುರು ಕಳೆದು ಲಿಂಗದಲಿ ಏಕವ ಮಾಡಿದನಾಗಿ
ಎನ್ನ ಅಂತರಂಗ ಬಹಿರಂಗವೆರಡೂ
ನಿಮ್ಮವು ನೋಡಾ!
ನಿಮ್ಮ ಅಂತರಂಗದೊಳಗೆ
ನಿಮ್ಮನೆ ಇಂಬಿಟ್ಟುಕೊಂಬೆ,
ನಿಮ್ಮ ಬಹಿರಂಗದೊಳಗೆ
ನಿಮ್ಮನೆ ನೀವಾಗಿ ಪೂಜಿಸುವೆ,
ನಿಮ್ಮ ಅರಿವಿಂದ ನಿಮ್ಮನೆ ಅರಿವೆ ಕಾಣಾ,
ಕೂಡಲಸಂಗಮದೇವಾ ॥ ೧೩೩ ॥

೧೯೪

ಎನ್ನ ತನುವಿಂಗೆ ನೀನೊಡೆಯ,
ಎನ್ನ ಮನಕ್ಕೆಯೂ ನೀನೊಡೆಯ,
ಎನ್ನ ಧನಕ್ಕೆಯೂ ನೀನೊಡೆಯನಾದ ಬಳಿಕ
ಎನ್ನರಿವು ನಿನ್ನದು, ಎನ್ನ ಮರಹು ನಿನ್ನದು.

ಕೂಡಲಸಂಗಮದೇವಾ,
'ಭೃತ್ಯಾಪರಾಧಃ ಸ್ವಾಮಿನೋ ದಂಡಃ'
ಎಂಬುದ ವಿಚಾರಿಸಿ ನೋಡಾ ಪ್ರಭುವೆ. || ೧೩೪ ||

೧೧೯೫

ಎನ್ನ ತನುವಿಡಿದವರ ತನುವ ಬೆರೆಸುವೆನು,
ಎನ್ನ ಮನವಿಡಿದವರ ಮನವ ಬೆರೆಸುವೆನು,
ಎನ್ನ ಶಿರವನವರ ಪಾದಕ್ಕೆ ಪೂಜೆಯ ಮಾಡುವೆನು.
ಕೂಡಲಸಂಗನ ಶರಣರನು
ಒಡಗೊಂಡು ಬಂದೆನ್ನ ಭವವ ಹರಿವೆನು. || ೧೩೫ ||

೧೧೯೬

ಎನ್ನ ನುಡಿ ಎನಗೆ ನಂಜಾಯಿತ್ತು, ಎನ್ನಅಲಗೆ ಎನ್ನ ಕೊಂದಿತ್ತು.
ಆನು ಪಾಪಿಯಯ್ಯಾ, ಆನು ಕೋಪಿಯಯ್ಯಾ.
ತರಳತನದಲ್ಲಿ ಕೆಟ್ಟೆನಯ್ಯಾ,
ಭಕ್ತಿಯ ಹೊಲಬನರಿಯದೆ ಮರುಳಾದೆನಯ್ಯಾ.
ಆಳು ಮುನಿದಡೆ ಆಳೇ ಕೆಡುವನು,
ಆಳ್ದ ಮುನಿದಡೆ ಆಳೇ ಕೆಡುವನು.
ನೀವು ಮುನಿದಡೆ ನಾನೇ ಕೆಡುವೆನಯ್ಯಾ
ಕೂಡಲಸಂಗಮದೇವಾ. || ೧೩೬ ||

೧೧೯೭

ಎನ್ನನುಭಾವದ ಗಮ್ಯವೆ, ಎನ್ನರುಹಿನ ವಿಶ್ರಾಮವೆ,
ಎನ್ನ ಭಾವದ ಬಯಕೆಯೆ, ಎನ್ನ ನಿಜದ ನಿಲವೆ,
ಎನ್ನ ಪರಿಣಾಮದ ಮೇರುವೆ,
ಎನ್ನ ಘನದ ನಿಲವೆ,
ನಿಮ್ಮ ಸುಳುಹು ಎತ್ತಲಡಗಿತ್ತೊ?
ನಿಮ್ಮ ನಾಮ ನಿರ್ನಾಮವಾಯಿತ್ತೆ?
ಎಲೆ ಪರಮಗುರುವೆ
ಕೂಡಲಸಂಗಯ್ಯನಲ್ಲಿ
ಉರಿಯುಂಡಕರ್ಪುರದಂತಾದಯಲ್ಲಾ, ಪ್ರಭುವೆ. || ೧೩೭ ||

೧೦೯೮

ಎನ್ನ ಬಂದ ಭವಂಗಳನು ಪರಿಹರಿಸಿ, ಎನಗೆ ಭಕ್ತಿಘನವನೆತ್ತಿ ತೋರಿ,
ಎನ್ನ ಹೊಂದಿದ ಶೈವಮಾರ್ಗಂಗಳನತಿಗಳೆದು,
ನಿಜವೀರಶೈವಾಚಾರವನರುಹಿ ತೋರಿ,
ಎನ್ನ ಕರಸ್ಥಲದ ಸಂಗಮನಾಥನಲ್ಲಿ ಮಾಡುವ
ಜಪ ಧ್ಯಾನ ಅರ್ಚನೆ ಉಪಚರಿಯ ಅರ್ಪಿತ ಪ್ರಸಾದಭೋಗಂಗಳಲ್ಲಿ ಸಂದಿಸಿದ
ಶೈವಕರ್ಮವ ಕಳೆದು,
ಭವಮಾಲೆಯ ಹರಿದು, ಭಕ್ತಿಮಾಲೆಯನಿತ್ತು,
ಭವಜ್ಞಾನವ ಕೆಡೆಮೆಟ್ಟಿ, ಭಕ್ತಿಜ್ಞಾನವ ಗಟ್ಟಿಗೊಳಿಸಿ,
ಭವಮಾಟಕೂಟವ ಬಿಡಿಸಿ, ಭಕ್ತಿಮಾಟಕೂಟವ ಹಿಡಿಸಿ,
ಭವಶೇಷವನುತ್ತರಿಸಿ, ಭಕ್ತಿಶೇಷವನಿತ್ತು,
ಎನಗೆ, ಎನ್ನ ಬಳಿವಿಡಿದು ಬಂದ ಶರಣಗಣಂಗಳೆಲ್ಲರಿಗೆ
ಶಿವಸದಾಚಾರದ ಘನವನರುಹಿ ತೋರಿ,
ಮರ್ತ್ಯಲೋಕದಲ್ಲಿ ಸತ್ಯಸದಾಚಾರವನು ಹರಿಸಿ, ಶಿವಭಕ್ತಿಯನುದ್ಧರಿಸಿ,
ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣ ಎನ್ನನಾಗುಮಾಡಿ ಉಳುಹಿದನಾಗಿ
ಇನ್ನೆನಗೆ ಭವವಿಲ್ಲದೆ, ಬಂಧನವಿಲ್ಲದೆ, ಭಕ್ತಿ ಮಾಟಕೂಟದ ಗೋತ್ರಿನಲ್ಲಿರ್ದ
ನಾನು ಚೆನ್ನಬಸವಣ್ಣನ ಶ್ರೀಪಾದಕ್ಕೆ
ನಮೋ ನಮೋ ಎಂದು ಬದುಕುವೆನು.

॥ ೧೩೮ ॥

೧೦೯೯

ಎನ್ನ ಭಕ್ತಿ ಎಲವದ ಕಾಯಫಲದಂತೆ ನೋಡಯ್ಯಾ,
ಹೊರಗೆ ಹೆಂಪು, ಒಳಗೆ ಬೂರವಯ್ಯಾ,
ನಿಮ್ಮ ದೇವರೆಂದು ಪೂಜಿಸಿ ಮಾನವರೆಂದು ಮರೆವೆನು.
ಸಗುಣ ನಿರ್ಗುಣವೆರಡೂ ಅಳವಡದ ಸಂದೇಹಿ ನಾನಯ್ಯಾ.
ಕೂಡಲಸಂಗಮದೇವಾ,
ಎನ್ನ ಅಪರಾಧವ ಸೈರಿಸುವಡೆ ನೀವಲ್ಲದೆ ಮತ್ತಾರನೂ ಕಾಣೆ,
ಶರಣಾರ್ಥಿ ಶರಣಾರ್ಥಿ, ಕೃಪೆಯಿಂದ ಕರುಣಿಸಿರಯ್ಯಾ, ॥ ೧೩೯ ॥

೧೧೦೦

ಎನ್ನ ಭಕ್ತಿಯ ಶಕ್ತಿಯು ನೀನೆ,
ಎನ್ನ ಯುಕ್ತಿಯ ಶಕ್ತಿಯು ನೀನೆ,
ಎನ್ನ ಮುಕ್ತಿಯ ಶಕ್ತಿಯು ನೀನೆ.

ಎನ್ನ ಮಹಾಘನದ ನಿಲವಿನ ಪ್ರಭೆಯನುಟ್ಟು
ತಳವಳಗಾದ ಸ್ವಯಜ್ಞಾನಿ
ಕೂಡಲಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ನಿಲವ
ಮಡಿವಾಳನಿಂದರಿದು ಬದುಕಿದೆನಯ್ಯಾ, ಪ್ರಭುವೆ. ॥ ೧೪೦ ॥

೧೧೦೧

ಎನ್ನ ಮನವು ನಿಮ್ಮ ಚರಣವ ಕಂಡ ಬಳಿಕ
ಬೆರಸಿಯಲ್ಲದೆ ಅಗಲಿ ಸೈರಿಸಲಾರೆನಯ್ಯಾ.
ತ್ರಾಹಿ ತ್ರಾಹಿ, ಘನಮಹಿಮಾ,
ನಿಮ್ಮ ಪಾದಾರ್ಚನೆಗೆ ಎನ್ನ ಪರಮಾನಂದಜಲವ ತುಂಬುವೆನಯ್ಯಾ.
ಪೂಜೆಯ ಮಾಡುವಡೆ ಎನ್ನ ಹೃದಯಕಮಲವನ[ರ್ಪಿ]ಸುವೆ,
ಆರತಿಯಿಂದ ಆರತಿಯನೆತ್ತುವೆ,
ಎನ್ನ ಮಹಾಪ್ರಕಾಶದ ಧೂಪವ ಬೀಸುವೆ,
ಎನ್ನ ಸ್ವಾನುಭಾವದ ಗಂಧವನೀವೆ.
ಈ ತೆರನಲ್ಲದೆ ಅಷ್ಟವಿಧಾರ್ಚನೆ ಷೋಡಶೋಪಚಾರವೆಂಬುವಕ್ಕೆ
ಬೇರೆ ತೆರನ ಕಾಣೆನಯ್ಯಾ.
ಕೂಡಲಸಂಗಮದೇವಯ್ಯಾ, ಪ್ರಭುವೆನ್ನ ಪ್ರಾಣಲಿಂಗವೆಂಬುದು
ಎನಗಿಂದು ಕಾಣಬಂದಿತ್ತು ನೋಡಯ್ಯಾ. ॥ ೧೪೧ ॥

೧೧೦೨

ಎನ್ನ ಮನವೆಂಬ ಮರ್ಕಟನು ತನುವಿಕಾರವೆಂಬ ಅಲ್ಪಸುಖದಾಸೆಗಾಡಿ,
ವೃಥಾ ಭ್ರಮೆಗೊಂಡು, ನಾನಾ ದೆಸೆಗೆ ಲಂಘಿಸಿ
ಅಳಲಿಸಿ ಬಳಲಿಸುತ್ತಿದೆ ನೋಡಾ!
ಕೂಡಲಸಂಗಮದೇವನೆಂಬ ಕಲ್ಪವೃಕ್ಷಕ್ಕೆ ಲಂಘಿಸಿ
ಅಪರಿಮಿತದ ಸುಖವನೈದದು, ನೋಡಾ. ॥ ೧೪೨ ॥

೧೧೦೩

ಎನ್ನಯ್ಯಾ ನಿಮ್ಮನರಸುತ್ತಿದ್ದೇನೆ, ಎನ್ನಯ್ಯಾ ನಿಮ್ಮನರಸುತ್ತಿದ್ದೇನೆ,
ಎನ್ನಯ್ಯಾ ಕೀಟಧ್ಯಾನದಲ್ಲಿ ನಿಮ್ಮನರಸುತ್ತಿದ್ದೇನೆ.
ಎನ್ನಯ್ಯಾ ಕೂಡಲಸಂಗಮದೇವಾ,
ಭ್ರಮರನ ಲೇಸಿನಂತೆ ಕಾರುಣ್ಯವ ಮಾಡು,
ತಪ್ಪೆನ್ನದು, ತಪ್ಪೆನ್ನದು ಶಿವಧೋ ಶಿವಧೋ. ॥ ೧೪೩ ॥

೧೧೦೪

ಎನ್ನ ವಚನರಚನೆಯು ಮೆಚ್ಚ,
ಅಡಿಗಡಿಗೆನ್ನ ಮನದ ಮೈಲಿಗೆಯು ತೊಳೆದು
ಹೋದ ಪ್ರಾಣವ ಮರಳಿ ತಂದು ರಕ್ಷಿಸಿದ.
ಕೂಡಲಸಂಗಮದೇವಯ್ಯಾ,
ಮಡಿವಾಳಯ್ಯಗಳ ಕರುಣದಿಂದ
ಮರುಳುಶಂಕರದೇವರ ನಿಲವ ಕಂಡು ಬದುಕಿದೆನು
ಕಾಣಾ ಕಿನ್ನರಿ ಬ್ರಹ್ಮಯ್ಯಾ. || ೧೪೪ ||

೧೧೦೫

ಎನ್ನ ಶಿರ ನಿಮ್ಮ ಚರಣವೊರಸೊರಸಿ ಬೆರಸಿ ಭೇದವಿಲ್ಲಯ್ಯಾ,
ಎನ್ನ ಕಾಯದ ಕಪಟ, ಎನ್ನ ಮನದ ವಿಕಾರ,
ನಿಮ್ಮ ಅಂಗುಷ್ಟದ ಮೊನೆಯು ಸೋಂಕಲೊಡನೆ ಹರಿದುದು ನೋಡಯ್ಯಾ.
ಕೂಡಲಸಂಗಮದೇವಯ್ಯಾ,
ನಿಮ್ಮ ಶ್ರೀಪಾದದ ಬೆಳಗ ಕಂಡು
ಎನ್ನ ಅಂತರಂಗದ ಕತ್ತಲೆ ಓಡಿತ್ತು. || ೧೪೫ ||

೧೧೦೬

[ಎ]ನ್ನಿಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ಮಾಡುವೆನು.
ಅವಾವುವಯ್ಯಾ ಎಂದಡೆ:
ಜಲಗಂಧಾಕ್ಷತಂ ಚೈವ ಪುಷ್ಪಂ ಚ ಧೂಪದೀಪಯೋ।
ನೈವೇದ್ಯಂ ಚೈವ ತಾಂಬೂಲಂ ಯಥೇಚ್ಛಾಷ್ಟವಿಧಾರ್ಚನಂ॥
ಇನ್ನು ಷೋಡಶೋಪಚಾರಗಳು:
ಸುಖತಲ್ಪಂ ಸುವಸ್ತ್ರಂ ಚ ಆಭರಣಾನುಲೇಪನಂ।
ಛತ್ರ ಚಾಮರ ವ್ಯಜನಂ ದರ್ಪಣಂ ನಾದ ವಾದ್ಯಯೋ॥
ನೃತ್ಯಂ ಗೀತಂ ತಥಾ ಸ್ತೋತ್ರಂ ಪುಷ್ಪಾಂಜಲೀ ಪ್ರಣಮ್ಯಕಂ।
ಪ್ರದಕ್ಷಿಣಂ ಚ ಮೇ ಯುಕ್ತಂ ಷೋಡಶಂ ಚೋಪಚಾರಕಂ॥
ಈ ಕ್ರಮವಿಡಿದು ಇಷ್ಟಲಿಂಗಾರ್ಚನೆಯ ಮಾಡಿ
ನಿಮ್ಮಲ್ಲಿ ಕೂಡುವೆನು,
ಕೂಡಲಸಂಗಮದೇವಾ. || ೧೪೬ ||

೧೧೦೭

ಎಮ್ಮಯ್ಯನ ಬಲ್ಲವರು ಒಮ್ಮೆಯೂ ಅರ್ಪಿಸರು,
ಅವರರ್ಪಿಸುವನ್ನಬರ ಎಮ್ಮಯ್ಯ ಸುಮ್ಮನಿರನು.
ಬೆಂದ ಬಿಸಿಯಾರಿದಡೆ ಪ್ರಾಣೇಶನೊಲ್ಲ,
ಕೂಡಲಸಂಗಮದೇವನುಪಚಾರದರ್ಪಿತವನೋಗಡಿಸುವ. ॥ ೧೪೭ ॥

೧೧೦೮

ಎಮ್ಮವರಿಗೆ ಸಾವಿಲ್ಲ, ಎಮ್ಮವರು ಸಾವನರಿಯರು,
ಸಾವೆಂಬುದು ಸಯವಲ್ಲ.
ಲಿಂಗದಲ್ಲಿ ಉದಯವಾದ ನಿಜೈಕ್ಯರಿಗೆ
ಆ ಲಿಂಗದಲ್ಲಿಯಲ್ಲದೆ ಬೇರೆ ಮತ್ತೊಂದೆಡೆಯಿಲ್ಲ.
ಕೂಡಲಸಂಗಮದೇವರ ಶರಣ ಸೊಡ್ಡಳ ಬಾಚರಸರು
ನಿಜಲಿಂಗದ ಒಡಲೊಳಗೆ ಬಗಿದು ಹೊಕ್ಕಡೆ,
ಉಪಮಿಸಬಲ್ಲವರ ಕಾಣೆನು. ॥ ೧೪೮ ॥

೧೧೦೯

ಎಲ್ಲರ ಪ್ರಾಣಲಿಂಗ ಒಂದೆ ಕಂಡಯ್ಯಾ,
ಎನ್ನ ಪ್ರಾಣಲಿಂಗ ಬೇರೆ ಕಂಡಯ್ಯಾ.
ಕೂಡಲಸಂಗಮದೇವ ಕೇಳಯ್ಯಾ,
ಜಂಗಮವೆನ್ನ ಪ್ರಾಣಲಿಂಗ ಕಂಡಯ್ಯಾ. ॥ ೧೪೯ ॥

೧೧೧೦

ಏನೆಂದುಪಮಿಸುವೆನಯ್ಯಾ?
ತನ್ನಿಂದ ತಾ ತೋರದೆ, ಗುರುಮುಖದಿಂದ ತೋರಿದ ತನ್ನ ನಿಲವ,
ನಿರುಪಮನು.
ಶಬ್ದಮುಗ್ಧವಾಗಿ, ಇದ್ದೆಡೆಯನಿದಿರಿಂಗೆ ತೋರದೆ
ಇರವೆ ಪರವಾಗಿರ್ದ ಅಜಡನು.
ಇನನುದಯಕಾಲಕ್ಕೆ ಕುಕ್ಕುಟ ಧ್ವನಿದೋರುವಂತೆ
ಘನಮಹಿಮರ ದರ್ಶನದಿಂದ ಸತ್ಪ್ರಾಣವವ
ತಾನಾಗಿ ನುಡಿದ ಮೂಲಿಗನು,
ಕೂಡಲಸಂಗಮದೇವರಲ್ಲಿ

ಬೆರೆಸಿ ಬೇರಿಲ್ಲದಿಪ್ಪ ಮರುಳುಶಂಕರದೇವರ ನಿಲವ
ಪ್ರಭುದೇವರು ಸಿದ್ಧರಾಮಯ್ಯದೇವರು
ಹಡಪದಪ್ಪಣ್ಣ ನಿಂದ ಕಂಡು
ಎನ್ನ ಜನ್ಮ ಸಫಲವಾಯಿತ್ತಯ್ಯಾ. || ೧೫೦ ||

೧೧೧೧

ಏರಂಡದ ಬಿತ್ತಿನಂತೆ, ರಸವಾರಿಯಂತೆ,
ಪಶುವಿನ ಪಿಸಿತದಲ್ಲಿ ತಲೆದೋರುವ ಅಮೃತದಂತೆ,
ಕಾಯವಿಡಿದು ಬಂದಡೆ ನಿನಗಾ ಭಾವವಿಲ್ಲ.
ಕೂಡಲಸಂಗಮದೇವರಲ್ಲಿ
ಪ್ರಭುದೇವರ ಸುಳುಹು ಅಗಮ್ಯವಾಯಿತ್ತು. || ೧೫೧ ||

೧೧೧೨

ಒಂದು ಬಾಗಿಲಲ್ಲಿ ಇಬ್ಬರ ತಡೆವೆ,
ಎರಡು ಬಾಗಿಲಲ್ಲಿ ಮೂವರ ತಡೆವೆ,
ಆರು ಬಾಗಿಲಲ್ಲಿ ಒಬ್ಬನ ತಡೆವೆ.
ಒಂಬತ್ತು ಬಾಗಿಲಲ್ಲಿ ನಿಂದು ನೋಡಲಾಗಿ
ಕೂಡಲಸಂಗಮದೇವರಲ್ಲಿ
ಆನೆತ್ತ ಹೋದೆನೆಂದರಿಯೆ. || ೧೫೨ ||

೧೧೧೩

ಒಂದೆತ್ತಿಗೈವರು ಗೊಲ್ಲರು,
ಅಯ್ವರಯ್ವರಿಗೆ ಐದೈದಾಗಿ ಐವರಾಳಯ್ಯಾ.
ತಮ್ಮ ತಮ್ಮಿಚ್ಛೆಗೆ ಹರಿಹರಿದಾಡಿ
ತಾವು ಕೆಟ್ಟು, ಎತ್ತನು ಕೆಡಿಸಿದರಯ್ಯಾ.
ಎತ್ತಿನ ಹೊಯ್ಲ ನ್ನಾರಿಗೆ ಹೇಳುವೆ
ಕೂಡಲಸಂಗಮದೇವಯ್ಯಾ. || ೧೫೩ ||

೧೧೧೪

ಒಡನಿರ್ದ ಸತಿಯೆಂದು ನಚ್ಚಿರ್ದೆನಯ್ಯಾ,
ಕೈವಿಡಿದ ಸಜ್ಜನೆಯೆಂದು ನಂಬಿರ್ದೆನಯ್ಯಾ.
ಅಯ್ಯಾ, ನಮ್ಮಯ್ಯನ ಕೈನೊಂದಿತು,

ತೆಗೆದುಕೊಡಾ ಎಲೆ ಚಂಡಾಲಗಿತ್ತಿ,
ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದಡೆ
ಕೂಡಲಸಂಗಮದೇವನಲ್ಲದೆ ಆರೂ ಇಲ್ಲ. || ೧೫೪ ||

೧೧೧೫

ಒಡಲಿಲ್ಲದ ಭಕ್ತನ ಪರಿಯ ನೋಡಾ,
ಮನಪ್ರಾಣಮುಕ್ತ, ಭವರಹಿತಜಂಗಮದ ಪರಿಯ ನೋಡಾ.
ಸಿಡಿಲ ಮಿಂಚಿನ ಬೆಳಗನೊಂದೆಡೆಯಲ್ಲಿ ಹಿಡಿಯಲುಂಟೆ?
ಉಭಯ ಒಂದಾದವರ ಕಂಡಡೆ,
ನೀವೆಂಬೆ ಕೂಡಲಸಂಗಮದೇವಾ. || ೧೫೫ ||

೧೧೧೬

ಒಡಲುಗೊಂಡು ಹುಟ್ಟಿದ ಘಟಕ್ಕೆ ಅಷ್ಟೋತ್ತರಶತವ್ಯಾಧಿ.
ಆದಕ್ಕೆ ನಾನಾ ಔಷಧಿಯ ತಂದು ಹೊರೆವರು,
ಆ ಪರಿಯ ನಾನದ ಹೊರೆಯೆನು.
ಅದೇನು ಕಾರಣವೆಂದಡೆ :
ಭವರೋಗವೈದ್ಯ, ಭವಹರನೆಂಬ ಬಿರಿದು ನಿಮ್ಮದಾಗಿ.
ಇದು ಕಾರಣ ಕೂಡಲಸಂಗಮದೇವಾ,
ನಿಮ್ಮ ಪುರಾತನರ ಪ್ರಸಾದವಲ್ಲದೆ ಕೊಂಡಡೆ ನಿಮ್ಮಾಣೆ. || ೧೫೬ ||

೧೧೧೭

ಒಡವೆ ಭಂಡಾರ ಕಡವರ ದ್ರವ್ಯವ
ಬಡ್ಡಿ ಬೆವಹಾರಕ್ಕೆ ಕೊಟ್ಟು
ಮನೆಯ ಗೋಂಟಿನಲ್ಲಿ ಹೂಯಿದುಕೊಂಡಿದ್ದೆನಾದಡೆ
ಅದು ಎನ್ನರ್ಥವಲ್ಲ, ಅನರ್ಥವೆಂದೆಂಬೆ.

ಸಂಗಮದೇವಾ, ನೀನು ಜಂಗಮರೂಪಾಗಿ ಬಂದು
ಆ ಧನವನು ನೀನು ಬಲ್ಲಂತೆ ಎನ್ನ ಮುಂದೆ ಸೂರೆಗೊಳುತಿರ್ದಡೆ,
ನಾನು ಬೇಕು ಬೇಡೆಂದು ಮನದಲ್ಲಿ ಮರುಗಿದೆನಾದಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ, ಮನದೊಡೆಯ ನೀನೆ ಬಲ್ಲೆ.

ಕಾಮನೇಮವೆಂಬ ಸಿಂಧುಬಲ್ಲಾಳನ ವಧುವ
ಸರ್ವಭುವನದೊಡೆಯ ಸಂಗಮದೇವರು ಬೇಡುವಂತಲ್ಲ.

ಎನ್ನ ಸತಿ ನೀಲಲೋಚನೆ ಪೃಥ್ವಿಗಗ್ಗಳೆಯ ಚೆಲುವೆ,
ಆಕೆಯನು ಸಂಗಮದೇವಾ, ನೀನು ಜಂಗಮರೂಪಾಗಿ ಬಂದು
ಎನ್ನ ಮುಂದೆ ಸಂಗವ ಮಾಡುತ್ತಿರಲು
ಎನ್ನೊಡನಿರ್ದ ಸತಿಯೆಂದು ಮಾಯಕ್ಕೆ ಮರುಗಿದೆನಾದಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ, ಮನದೊಡೆಯ ನೀನೆ ಬಲ್ಲೆ.

ಪ್ರತ್ಯಕ್ಷವಾಗಿ ಸಿರಿಯಾಳಸೆಟ್ಟಿ ಚಂಗಳವ್ವೆಯ ಮನೆಗೆ ಬಂದು
ಅವರ ಮಗನ ಬೇಡುವಂತಲ್ಲ.
ಸಂಗಮದೇವಾ, ನಿಮ್ಮ ಹೆಸರ ಚಿಕ್ಕಸಂಗಯ್ಯನಿದ್ದಾನೆ.
ನೀನು ಜಂಗಮರೂಪಾಗಿ ಬಂದು, ಆತನ ಹಿಡಿದು
ಎನ್ನ ಮುಂದೆ ಪಡಗುಡಿಯ ಕಟ್ಟಿ, ಚಿನಿಖಂಡವ ಮಾಡಿ
ಬಾಣಸವ ಮಾಡುವಲ್ಲಿ,
ಎನ್ನ ಉದರದಲ್ಲಿ ಬಂದ ಪುತ್ರನೆಂದು ಮಾಯಕ್ಕೆ ನಾನು ಮರುಗಿದೆನಾದಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ, ಮನದೊಡೆಯ ನೀನೆ ಬಲ್ಲೆ.

ಇಂತೀ ತ್ರಿವಿಧವೂ ಹೊರಗಣವು.
ಎನ್ನ ನೋವಿನೊಳಗಲ್ಲ, ಎನ್ನ ಬೇನೆಯೊಳಗಲ್ಲ.
ಇನ್ನು ನಾನಿಪೇನೆ? ಕದ್ದ ಕಳ್ಳನ ಕಟ್ಟುವಂತೆ ಕಟ್ಟಿ,
ನೀನು ಜಂಗಮರೂಪಾಗಿ ಬಂದು
ಎನ್ನಂಗದ ಮೇಲೆ ಶಸ್ತ್ರವನಿಕ್ಕಿ ನೋಡು,
ಬಸಿದ ಶೂಲಪ್ರಾಪ್ತಿಯ ಮಾಡಿ ನೋಡು,
ಸೂಜಿಯ ಮೊನೆಯಂತಿರ್ದ ಶೂಲದ ಮೇಲಿಕ್ಕಿ ನೋಡು,
ನವಖಂಡವ ಮಾಡಿ ಕಡಿಕಡಿದು ನೋಡು,
ಆ ಶೂಲವೈದೈದು ಮುಖವಾಗಿ ಹಾಯುವಾಗ ಹರಿಕಿನಿಸಿ ನೋಡು.

ಈ ರೀತಿಯಲ್ಲಿ ಎನ್ನ ಭಂಗಬಡಿಸಿ ನೋಡಿದಡೆಯೂ
ಲಿಂಗಾರ್ಚನೆಯ ಮಾಡುವುದ ಬಿಡೆ,
ಜಂಗಮದಾಸೋಹವ ಮಾಡುವುದ ಬಿಡೆ,
ಪಾದತೀರ್ಥಪ್ರಸಾದವ ಕೊಂಬುದ ಬಿಡೆ.

ಇಂತೀ ತ್ರಿವಿಧಕ್ಕೆ ಲೋಪವ ಮಾಡಿಬಿಟ್ಟೆನಾದಡೆ,
ನಿಮ್ಮಾಣೆ, ನಿಮ್ಮ ಪ್ರಮಥರಾಣೆ.
ಇಷ್ಟರೊಳಗೆ ತಪ್ಪುಳ್ಳಡೆ ಮೂದಲಿಸಿ ಮೂಗಕೊಯಿ,
ಕೂಡಲಸಂಗಮದೇವಾ. || ೧೫೭ ||

೧೧೧೮

ಒಡೆದ ಮಂಚು ಮರಳಿ ಮಡಕೆಯಾಗಬಲ್ಲುದೆ?
ಕೆಟ್ಟ ವ್ರತಗೇಡಿ ಭಕ್ತನಾಗಬಲ್ಲನೆ?
ಬಾಳೆಗೆ ಫಲವೆ ಕಡೆ. ಚೇಳಿಗೆ ಗರ್ಭವೆ ಕಡೆ.
ಕೊಳು ಮಾರೆಡೆಯುಂಟು, ಸೀರೆ ಮಾರೆಡೆಯುಂಟು,
ಭಕ್ತಿ ಮಾರೆಡೆಯುಂಟೆ, ಕೂಡಲಸಂಗಮದೇವಾ? ॥ ೧೫೮ ॥

೧೧೧೯

ಒಡೆಯರುಳ್ಳಾಳಿಂಗೆ ಕೇಡಿಲ್ಲ ಕಾಣಿರೊ!
ಊರೆನ್ನದೆ ಅಡವಿಯೆನ್ನದೆ, ಆಳಸರಸಿ ಬಹ [ಆಳ್ದ]ರುಂಟೆ?
ಜೋಳವಾಳಿಂಗೆ ಬಿಜ್ಜಳಂಗೆ ಆಳಾದಡೇನು?
ವೇಳೆವಾಳಿಂಗೆ ಕೂಡಿಕೊಂಡಿಪ್ಪ ಕೂಡಲಸಂಗಮದೇವ. ॥ ೧೫೯ ॥

೧೧೨೦

ಒತ್ತಿ ಹೊಸೆದ ಕಿಚ್ಚ ನಾ ಮಾಡಿದೆನೆಂದು ಮುಟ್ಟಿ ಹಿಡಿದಡೆ,
ಕೈ ಬೇಯದಿಹುದೆ?
ಎನ್ನಿಂದಾಯಿತ್ತು, ಎನ್ನಿಂದಾಯಿತ್ತು, ಎನ್ನಿಂದಾಯಿತ್ತು ಎನ್ನದಿರು ಮನವೆ,
ನಾನು ಮಾಡಿದೆನೆನ್ನದಿರು ಮನವೆ.
ಕೂಡಲಸಂಗಮದೇವ ಕೇಳಯ್ಯಾ,
ಚೆನ್ನಬಸವಣ್ಣನ ಪಾದಕ್ಕೆ ನಮೋ ನಮೋ ಎಂಬೆನು. ॥ ೧೬೦ ॥

೧೧೨೧

ಓಡದಿರು, ಓಡದಿರು ನಿನ್ನ ಬೇಡುವಾತ ನಾನಲ್ಲ ಶಿವನೆ,
ನೋಡುವೆನು ಕಣ್ಣತುಂಬ, ಆಡಿ ಪಾಡಿ ನಲಿದಾಡುವೆ.
ಬೇಡೆನ್ನ ಕೂಡೆ ಮಾತಾಡಲಾಗದೆ, ಎಲೆ ಶಿವನೆ.
ಕೂಡಲಸಂಗಮದೇವಾ, ನೀನಾಡಿಸುವ ಬೊಂಬೆ ನಾನು. ॥ ೧೬೧ ॥

೧೧೨೨

ಓದಿನ ಹಿರಿಯರು, ವೇದದ ಹಿರಿಯರು, ಶಾಸ್ತ್ರದ ಹಿರಿಯರು,
ಪುರಾಣದ ಹಿರಿಯರು, ವೇಷದ ಹಿರಿಯರು, ಭಾಷೆಯ ಹಿರಿಯರು,
ಇವರೆಲ್ಲರು ತಮ್ಮ ತಮ್ಮನೆ ಮೆರೆದರಲ್ಲದೆ ನಿಮ್ಮ ಮೆರೆಸುದಿಲ್ಲ.

ತಮ್ಮ ಮರೆದು ನಿಮ್ಮ ಮೆರೆದಡೆ ಕೂಡಿಕೊಂಡಿಪ್ಪ
ನಮ್ಮ ಕೂಡಲಸಂಗಮದೇವರು. || ೧೬೨ ||

೧೧೨೩

ಓದಿಸುವಣ್ಣಗಳೆನ್ನ ಮಾತಾಡ ಕಲಿಸಿದರಲ್ಲದೆ
ಮನಕ್ಕೆ ಮಾತಾಡ ಕಲಿಸಲಿಲ್ಲವಯ್ಯಾ.
ಧನಕ್ಕೆ ಮುನಿವರಲ್ಲದೆ, ಎನ್ನ ಮನಕ್ಕೆ ಮುನಿವರಿಲ್ಲಯ್ಯಾ.
ಧನಕ್ಕೆ ಮುನಿವರಿಗೆ ಮುನಿದು, ಎನ್ನ ಮನಕ್ಕೆ ಮುನಿದ
ಕೂಡಲಸಂಗಮದೇವಾ, ಮಡಿವಾಳ ಮಾಚಯ್ಯನು. || ೧೬೩ ||

೧೧೨೪

ಓಹೋ ನಾನೊಬ್ಬರಿಗೆಯೂ ಉಪದೇಶವ ಮಾಡಲಮ್ಮೆನು,
ಮುನ್ನಲಾದವರು ತಮ್ಮಿಂದ ತಾವಾದರು,
ಅವರೆಲ್ಲರೂ ನಿಜಲಿಂಗೈಕ್ಯರು, ನಾನೇನುವ ಮಾಡಿತಿಲ್ಲ,
ತತ್ವವ ಹಿಡಿದವರಿಗೆ ತೊತ್ತಾಗಿ ನಡೆವೆನು.
ಅಮರಗಣಂಗಳು ಸಾಕ್ಷಿಯಾಗಿ,
ಕೂಡಲಸಂಗಮದೇವರ ಮುಂದೆ
ಭಾಷೆಪ್ರಸಾದವನಿಕ್ಕಲಮ್ಮೆನಯ್ಯಾ, ಚೆನ್ನಬಸವಣ್ಣಾ. || ೧೬೪ ||

೧೧೨೫

ಕಂಗಳ ಮುಂದಣಿಂದ ಶ್ರೀಗುರುಲಿಂಗ ಹಿಂಗಿದಡೆ,
ವ್ರತಕ್ಕೆ ಭಂಗವಾದುದೆಂದು ತಂದುಕೊಟ್ಟ ಶ್ರೀಗುರು
ಕರಸ್ಥಲದಲ್ಲಿ ಪ್ರಾಣಲಿಂಗವ.
ಆ ಲಿಂಗ ಮುಟ್ಟಲೊಡನೆ,
ತನು ಪ್ರಸಾದ, ಮನ ಪ್ರಸಾದ, ಧನ ಪ್ರಸಾದವಾಯಿತ್ತು.
ಇಂತು ಸರ್ವಾಂಗಪ್ರಸಾದವಾಯಿತ್ತು, ಕೂಡಲಸಂಗಮದೇವಾ. || ೧೬೫ ||

೧೧೨೬

ಕಂಗಳಲ್ಲಿ ಕರಸ್ಥಳದ ನೋಟ, ಅಂಗವಿಕಾರವೆಂಬುದನರಿಯ ನೋಡಾ,
ಮನದ ಕೊನೆಯ ಮೊನೆಯ ಮೇಲಣ ಅನುಭಾವ ಗಮನಗೆಟ್ಟು,
ಭಾವ ನಿರ್ಭಾವವೆಂಬುದನರಿಯ, ನೋಡಾ.

ಕೂಡಲಸಂಗಮದೇವರಲ್ಲಿ
ಪ್ರಭುದೇವರಿಂದಲಾನು ಬದುಕಿದೆನು ಕಾಣಾ, ಚೆನ್ನಬಸವಣ್ಣಾ. ॥ ೧೬೬ ॥

೧೧೨೭

ಕಂಗಳಿಲ್ಲದ ನೋಟ, ಲಿಂಗವಿಲ್ಲದ ಮಾಟ, ಜಂಗಮವಿಲ್ಲದೂಟ,
ಪ್ರಸಾದವಿಲ್ಲ[ದ] ಪರ, ಹಿಂಗಿತ್ತು ಶಿವಲೋಕವಿನ್ನೆಲ್ಲಿಯದೊ?
ಲಿಂಗಕ್ಕೆ ಮಾಡಿದ ಬೋನವ ಸಿಂಬಕ ತಿಂಬಂತೆ
ಹಿಂಗಿತ್ತು ಶಿವಲೋಕವಿನ್ನೆಲ್ಲಿಯದೊ?
ಬಂದ ಸಮಯವನರಿಯದೆ ಉದರವ ಹೊರೆವವರ
ಕೂಗಿಡೆ ನರಕದಲ್ಲಿಕ್ಕನೆ ಕೂಡಲಸಂಗಮದೇವ? ॥ ೧೬೭ ॥

೧೧೨೮

ಕಂಗಳೆ ಕರುಳಾಗಿ ಉರವಣಿಸಿ ಬಪ್ಪವನ
ಬರವ ನೋಡಾ, ಇರವ ನೋಡಾ.
ಪರವ ನೋಡಾ, ಇಹಪರವ ನೋಡಾ, ಇಹಪರವೊಂದಾದ ಘನವ ನೋಡಾ,
ಎಲೆ, ಘನಕ್ಕೆ ಘನವ ನೋಡಾ.
ಕರುವಿಟ್ಟ ರೂಪಿನಂತೆ ಕಂಗಳೆರಡು ಹಳಚದೆ
ಭುಗಿಲನೆ ನಡೆತಹ.
ಇಂತಪ್ಪ ಗರುವ ಪ್ರಭುವ ಕಂಡೆನೈ
ಕೂಡಲಸಂಗಮದೇವಾ. ॥ ೧೬೮ ॥

೧೧೨೯

ಕಂಗಳೊಳಗೆ ಕರುಳಿಲ್ಲ, ಕಾಯದೊಳಗೆ ಮಾಯವಿಲ್ಲ,
ಮನದೊಳಗೆ ಅಹಂಕಾರವಿಲ್ಲ.
ದೇಹವೆಂದರಿಯೆ, ನಿರ್ದೇಹವೆಂದರಿಯೆ
ಜಂತ್ರದ ಸೂತ್ರದಂತೆ ಇಪ್ಪ ನಿಬ್ಬೆರಗಿನ ಮೂರ್ತಿಯ ನೋಡಾ!
ಲಿಂಗಜಂಗಮದ ಒಕ್ಕುಮಿಕ್ಕ ಪ್ರಸಾದವ ಕೊಂಡು,
ಮಿಕ್ಕು ಮೀರಿ ನಿಂದ ಮಹಾಪ್ರಸಾದಿಯ ನೋಡಾ!
ತನ್ನನರಿದಹರೆಂದು ಜಗದ ಕಣ್ಣಿಂಗೆ ಮಾಯದ ಮಂಜು ಕವಿಸಿ,
ನಿಜಪದದಲ್ಲಿ ತದುಗತನಾದನು.
ಕೂಡಲಸಂಗಮದೇವರಲ್ಲಿ ಮರುಳುಶಂಕರದೇವರ
ನಿಲವ ನೋಡಾ, ಚೆನ್ನಬಸವಣ್ಣಾ. ॥ ೧೬೯ ॥

೧೧೩೦

ಕಂಡಡೆ ಕಡುಸುಖಿವೆನಗೆ, ಕಾಣದಿರ್ದಡೆ ಅವಸ್ಥೆಯಯ್ಯಾ.
ತವಕದ ಸ್ನೇಹ ದರ್ಶನದಲ್ಲಿ ತರಹರವಾಯಿತ್ತು.
ಕೂಡಲಸಂಗಮದೇವಯ್ಯಾ,
ನಿಮ್ಮ ಶ್ರೀಪಾದವ ಕಂಡು ಧನ್ಯನಾದೆನು. || ೨೬೦ ||

೧೧೩೧

ಕಂಡಮಂಡಗೆ ಬೆಲ್ಲ ದ್ರಾಕ್ಷೆ ಸಕ್ಕರೆ,
ಸರಿಭಾಗವಾದ ಹೊಸ ಹೆಸರ ಭಕ್ಷ್ಯ ಪನ್ನಿಪ್ಪಂಡುಗ,
ಸುಲಿಗಡಲೆಯ ಕಜ್ಜಾಯ ಹದಿನೆಂಟು ಖಂಡುಗ,
ಅಕಾಲ ಮಾವಿನಹಣ್ಣು ಇಪ್ಪತ್ತುನಾಲ್ಕು ಲಕ್ಷ,
ಕಡೆಯಿಲ್ಲದ ಕದಳೀಫಲ, ಚಾರಬೀಜ ಎಂಬತ್ತು ಖಂಡುಗ,
ತವರಾಜ ಹೆತ್ತುಪ್ಪ, ಹಲಸಿನ ಹಣ್ಣು ಮನ ಮೇರೆ,
ಹಾಲಹೆನೆ ಹದಿನೆಂಟು ಖಂಡುಗ,
ಉತ್ತುತ್ತಿ, ಚಿಲುಪಾಲಘಟ್ಟಿ ಕಟ್ಟಣೆಯಿಲ್ಲ.
ಮನವೊಲಿದ ಕಜ್ಜಾಯವನಾರೋಗಣೆಯ ಮಾಡು ದೇವಾ,
ಕೂಡಲಸಂಗಮದೇವಾ.

೧೧೩೨

ಕಂಡಹರೆಂದು ಕಣ್ಗೆ ಮರೆಮಾಡಿದ,
ಕೇಳಿಹರೆಂದು ಕಿವಿಗೆ ಮರೆಮಾಡಿದ,
ಮುಟ್ಟಿಹರೆಂದು ಕೈಗೆ ಮರೆಮಾಡಿದ,
ಸೋಂಕಿಹರೆಂದು ತನುವಿಂಗೆ ಮರೆಮಾಡಿದ,
ನೆನೆದಹರೆಂದು ಮನಕ್ಕೆ ಮರೆಮಾಡಿದ,
ಅರಿದಹರೆಂದು ಅಂತರಂಗದಲ್ಲಿ ಮರೆಮಾಡಿದ,
ಪೂಜಿಸಿಹರೆಂದು ಕ್ರೀಗೆ ಮರೆಮಾಡಿದ.
ಕೂಡಲಸಂಗಮದೇವರೊಡನೆ, ಅಹಂಕಾರವ ಮಾಡಿ
ಕೆಟ್ಟ ಕೇಡನೇನೆಂದುಪಮಿಸುವೆನು. || ೧೭೨ ||

೧೧೩೩

ಕಕ್ಷೆ ಕರಸ್ಥಲ ಉತ್ತಮಾಂಗ ಉರಸೆಜ್ಜೆ ಅಂಗಸೋಂಕು ಅಮಳೋಕ್ಯವೆಂಬುವ
ನಾನು ಮನದಲ್ಲಿ ಅರಿಯದಂದು,

ಭಾವ ನಿರ್ಭಾವವೆಂಬುದನರಿದು
ಆಯತ ಸ್ವಾಯತವ ಮಾಡಲ್ಕೆ ಬಂದ ಪದಾರ್ಥವು
ಲಿಂಗಮುಖದಲ್ಲಿ ಅರ್ಪಿತವಾಗದೆಂದು,
ಜಂಗಮಮುಖದಲ್ಲಿ ಬಂದ ಪದಾರ್ಥವಲ್ಲದೆ ಅರ್ಪಿತವಾಗದೆಂದು,
ಆ ಜಂಗಮವನೆನ್ನ ಮನದಲ್ಲಿ ನೆನೆದುಕೊಂಡು
ಆ ಜಂಗಮದಾಸೋಹಕ್ಕೆ ಎನ್ನ ಮನವು ವೇದ್ಯವಾದಲ್ಲಿ,
ಅಂಗದ ಮೇಲೆ ಲಿಂಗವುಳ್ಳುದೆಲ್ಲವೂ ಸಂಗಮನಾಥನೆಂಬುದು,
ಲಿಂಗವೂ ಹುಸಿ, ಜಂಗಮವೂ ಹುಸಿಯೆಂದು
ಪರವಾದಿ ಬಿಜ್ಜಳನು ಸಂಪಾದಿಸುವಲ್ಲಿ,
ಅವರನು ಆದಿಗಣೇಶ್ವರನೆಂದರಿಯದೆ ತರ್ಕಿಸುವಲ್ಲಿ,
ಅವನೆನ್ನ ಭಕ್ತಿಗೆ ಒರೆಗಲ್ಲಾದಲ್ಲಿ,
ಆತನು ಭಕ್ತಿಯ ಪಥವಲ್ಲೆಂಬುದ, ನಾನಹುದೆಂಬುದ–
ಈ ಎರಡನೂ ನೀನು ಸೂತ್ರಧಾರಿಯಾಗಿ ಆಡಿಸುವಲ್ಲಿ,
ಶಿವಭಕ್ತಿಯ ಮುಖ ಮುಸುಕು ತೆಗೆವಲ್ಲಿ,
ಮೂವತ್ತಾರು ಕೊಂಡೆಯವ ಪರಿಹರಿಸಿ
ಎಂಬತ್ತೆಂಟು ಪವಾಡವ ಮೆರೆವಲ್ಲಿ,
ಮುನ್ನೂರರುವತ್ತು ಸತ್ತ ಪ್ರಾಣವನೆತ್ತುವಲ್ಲಿ
ಅಂದು ನೀನೇನಾಗಿರ್ದೆ ಹೇಳಾ,
ಕೂಡಲಸಂಗಮದೇವಾ. ೧೭೩ ॥

೧೧೩೪

ಕಡಿ[ಯೆ] ಕುಳ್ಳಿರಿಸಿದಲ್ಲಿ,
ಕತ್ತಿಯನೆತ್ತಿ ಹೊಡೆ[ಯೆ] ಹೊಡೆ[ದು] ಬದುಕಿದವರುಂಟು, ತಲೆಯ
ಕಡಲ ನಡುವೆ ಹಡಗೊ[ಡೆ]ದು
ಹಲಗೆಯ ಹಿಡಿದು ತಡಿಗೆ ಸೇರಿ ಬದುಕಿದವರುಂಟು,
ಎನ್ನೊಡೆಯ ಕೂಡಲಸಂಗಮದೇವ
ಬರೆದ ಬರಹವ ತೊಡೆಯಬಲ್ಲರೆ?
ಹರಿ ಸುರ ಬ್ರಹ್ಮಾದಿಗಳು. ॥ ೧೭೪ ॥

೧೧೩೫

ಕತ್ತಲೆಯ ನುಂಗಿದ ದೀಪದ ಬೆಳಗಿನಂತೆ,
ಕರ್ದಮವನೀಂಟಿದ ಸುಜಲದಂತೆ,
ಮಧುರರಸವನರಿದ ಜಿಹ್ವೆಯಂತೆ,

ಎನ್ನ ಕಂಗಳಿಗೆ ದೃಷ್ಟವಾಗಿ, ಮನಕ್ಕೆ ಮನೋಹರವಾಗಿ
ಕೂಡಲಸಂಗಮದೇವರಲ್ಲಿ
ಪ್ರಭುದೇವರ ಸುಳುಹು ಚಿಹ್ನವಾಯಿತ್ತು. ॥ ೧೭೫ ॥

೧೧೩೬

ಕತ್ತೆ[ಯ] ಕರವೆತ್ತಿ ಕರವೆತ್ತಿ ಕರೆದಡೆ
ಅದೆತ್ತಣ ವಾರ್ತೆಯೆಂದು ಬಲ್ಲುದು?
ಕುಬುದ್ಧಿಯುಳ್ಳವ[ರಿಗೆ] ಸುಬುದ್ಧಿಯ ಹೇಳಿದಡೆ
ಕುಬುದ್ಧಿ ಮಾ[ಣ್ಬು]ದೆ ಕೂಡಲಸಂಗಮದೇವಾ? ॥ ೧೭೬ ॥

೧೧೩೭

ಕಪ್ಪೆಯ ಶಿರದ ಮೇಲೆ ಎಪ್ಪತ್ತೆರಡು ಪುರವ ಕಂಡೆ,
ಆ ಪುರದೊಳಗೊಬ್ಬ ನಾರಿಯು ಕಂಡೆ,
ಆ ನಾರಿಯ ಕೈಯಲ್ಲಿ ನಾರಿವಳ ಸಸಿಯು ಕಂಡೆ.
ಇಂತಪ್ಪ ಬೆಡಗಿನ ಕೀಲ ಬಲ್ಲಾತನೆ
ಪ್ರಾಣಲಿಂಗಸಂಬಂಧಿಯೆಂದೆನಯ್ಯಾ,
ಕೂಡಲಸಂಗಮದೇವಾ. ॥ ೧೭೭ ॥

೧೧೩೮

ಕಬ್ಬಿನ ಮೇಲೆ ಜೇನಿಟ್ಟಿತ್ತೆಂಬರು,
ಅವು ಒಂದರ ಸಿಹಿಯನೊಂದರಿಯವು.
ಭಕ್ತ ಜಂಗಮದ ನಡುವೆ ಅರ್ಥ ಪ್ರಾಣ ಅಭಿಮಾನವೆಂಬ ಸಿಗುರು
ಕಾಡಿತ್ತು ಕಾಣಾ, ಕೂಡಲಸಂಗಮದೇವಾ. ॥ ೧೭೮ ॥

೧೧೩೯

ಕರಿಗೊರಳು ಮೆರೆವ ಚತುರ್ಭುಜ ಎಳೆವಾವಿನ ಕುಂಡಲವನಿಕ್ಕಿ,
ಪೊಳೆವ ತ್ರಿಶೂಲ ವೃಷಭವಾಹನದೇವ,
ಉಮೆಯೊಡನೆ ಸಾರ್ದು
ಬೇಡಿದ ವರವೀವನೇ ಕೂಡಲಸಂಗಮದೇವ. ॥ ೧೭೯ ॥

೧೧೪೦

ಕರ್ತನಟ್ಟಿದಡೆ ಮರ್ತ್ಯದಲ್ಲಿ ಮಹಾಮನೆಯ ಕಟ್ಟಿದೆ,
ಸತ್ಯಶರಣರಿಗೆ **ತೊತ್ತು** ಭೃತ್ಯನಾಗಿ ಸವೆದು ಬದುಕಿದೆನು.
ಕರ್ತನ ಬೆಸನು ಮತ್ತೆ ಬರಲೆಂದಟ್ಟಿದಡೆ,
ಕೂಡಲಸಂಗಮದೇವರ ನಿರೂಪಕ್ಕೆ ಮಹಾಪ್ರಸಾದವೆಂದೆನು. || ೧೮೦ ||

೧೧೪೧

ಕಲ್ಪಿತವ ಕಳೆದ, ಅಕಲ್ಪಿತವ ತಿಳುಹಿದ,
ಮನವ ಮಾಣಿಸಿ ಘನವ ನೆಲೆಗೊಳಿಸಿದ.
ತನುವ ಕೆಡಿಸಿ, ಅನುವ ಸ್ಥಾಪ್ಯವ ಮಾಡಿ,
ಅಂತರಂಗದಲ್ಲಿ ಮಹಾಜ್ಞಾನವ ತುಂಬಿದ,
ಬಹಿರಂಗದಲ್ಲಿ ಸದಾಚಾರವ ನೆಲೆಗೊಳಿಸಿದ.
ನಿಮ್ಮ ನಿಲವನೆನಗೆ ಒರೆದೊರೆದು ಹೇಳಿ ತೋರಿಸಿ,
ಎನ್ನ ನಿಮ್ಮ ಶ್ರೀಪಾದಕ್ಕೆ ಯೋಗ್ಯನ ಮಾಡಿದ.
ಕೂಡಲಸಂಗಮದೇವಯ್ಯಾ, ನಿಮ್ಮ ಮಹಾಮನೆಯಲ್ಲಿ
ಮಡಿವಾಳನೂ ನಾನೂ ಕೂಡಿ ಸುಖದಲ್ಲಿ ಇದ್ದೆವಯ್ಯಾ. || ೧೮೧ ||

೧೧೪೨

ಕಲ್ಲೊಳಗೆ ಹೊನ್ನುಂಟು, ಮರನೊಳಗೆ ಅಗ್ನಿಯುಂಟು,
ಹಾಲೊಳಗೆ ತುಪ್ಪವುಂಟು,
ಅಂತರಾಮಿಯಲ್ಲಿ ಶಿವನಿಹನು.
ಇದೇನು ಕಾರಣ ಕತ್ತಲೆ ಕಾಣಬಾರದು,
ತೋರಬಲ್ಲ ಗುರು ಸುಳಿಯನು, ಕೂಡಲಸಂಗಮದೇವಾ. || ೧೮೨ ||

೧೧೪೩

ಕಾಣಬಾರದ ಘನವ ಕರಸ್ಥಲದಲ್ಲಿ ತೋರಿದ,
ಹೇಳಬಾರದ ಘನವ ಮನಸ್ಥಲದಲ್ಲಿ ತೋರಿದ,
ಉಪಮಿಸಬಾರದ ಘನವ ನಿಮ್ಮ ತೃಪ್ತಿಯ ಮುಖದಲ್ಲಿ ತೋರಿದ.
ಇಂತೀ ತ್ರಿವಿಧವು ಏಕಾರ್ಥವಾಗಿಹ ಭೇದವ
ಚೆನ್ನಬಸವಣ್ಣನು ತೋರಿದನಾಗಿ ಆನು ಬದುಕಿದೆನು ಕಾಣಾ
ಕೂಡಲಸಂಗಮದೇವಾ. || ೧೮೩ ||

೧೧೪೪

ಕಾಣಬಾರದ ವಸ್ತು ಕೈಗೆ ಸಾರಿತ್ತಯ್ಯಾ,
ಆನಂದದಿಂದ ಆಡುವೆ ಹಾಡುವೆನಯ್ಯಾ.
ಎನ್ನ ಕಣ್ಣ ತುಂಬಿ ನೋಡುವೆ
ಎನ್ನ ಮನವೊಲಿದು ಭಕ್ತಿಯ ಮಾಡುವೆ
ಕೂಡಲಸಂಗಯ್ಯಾ ನಿನಗೆ. ॥ ೧೬೪ ॥

೧೧೪೫

ಕಾಮದಹನವ ಮಾಡಿದನು, ದಕ್ಷನ ಯಜ್ಞವ ಕೆಡಿಸಿದನು,
ಒಳ್ಳೆಯ ತ್ರಿಪುರವನುರುಹಿದನು,
ಹಾಳಾಹಳವನೊಮ್ಮೆ ಧರಿಸಿದನು,
ನಮ್ಮ ಕೂಡಲಸಂಗಮದೇವನು. ॥ ೧೬೫ ॥

೧೧೪೬

ಕಾಮ್ಯ ಕಲ್ಪಿತಂಗಳಿಲ್ಲದೆ, ನಿಮ್ಮಿಂದ ನೀವೆ ಸ್ವಯಂಭುವಾಗಿದ್ದಿರ[ಲ್ಲಾ],
ನಿಮ್ಮ ಪರಮಾನಂದದ ಪ್ರಭಾಪರಿಣಾಮದಲ್ಲಿ ಒಂದನಂತಕಾಲವಿದ್ದಿರಲ್ಲಾ,
ನಿಮ್ಮಾದ್ಯಂತವ ನೀವೆ ಅರಿವುತಿದ್ದಿರಲ್ಲಾ,
ನಿಮ್ಮ ಸ್ವಭಾವದುದಯವ ನೀವೆ ಬಲ್ಲಿರಿ, ಕೂಡಲಸಂಗಮದೇವಾ. ॥ ೧೬೬ ॥

೧೧೪೭

ಕಾಯದ ಕಪಟವು ಬಿಡದೆನಗಿನ್ನೆಂತಯ್ಯಾ?
ಮಾಯಾಪ್ರಪಂಚಿನ ಬಲೆಯೊಳಗೆ ಸಿಲುಕಿದೆ,
ವಾಯುದ ಸಂಭ್ರಮವಧಿಕ ಹಿರಿದೆನಗೆ,
ಇದಾವ ಭಾವದ ಮುಖವೆಂದರಿಯದೆ
ಜ್ಞಾನಶೂನ್ಯವಾಗಿರ್ದೆನಯ್ಯಾ.
ಅಷ್ಟಮದಂಗಳನು ಸೃಷ್ಟಿಸಿಯಿದ್ದಿರಾಗಿ
ಕಟ್ಟುಗ್ರದಿಂದ ನಿಮ್ಮ ಕಾಣಲೀಯವು.
ಎನ್ನ ತನುವಿನ ಅವಗುಣ, ಮನದ ಮರ್ಕಟತನ ಬಿಡದು,
ನೀನೇ ಗತಿ ಕೂಡಲಸಂಗಮದೇವಾ,
ನಿಮ್ಮ ಶರಣರ ಇರವನರಿಯದೆ ಭವದುಃಖಿಯಾದೆನಯ್ಯಾ. ॥ ೧೬೭ ॥

೧೧೫೮

ಕಾಯದ ಕಳವಳದಲ್ಲಿ ಹುಟ್ಟಿ ಲಿಂಗವನರಿಯುದಂ[ತವರಿ]ರಲಿ,
ಷಡು ಮಹಾವೇದ ಶಾಸ್ತ್ರಾಗಮಪುರಾಣದರ್ಥವನೋದಿ
ಲಿಂಗ ಉಂಟು, ಇಲ್ಲೆಂಬ ಅಜ್ಞಾನಿಗಳಂತಿರಲಿ.
ಷಡುಶೈವರು ಹಂಚಾಗಿ ಹೋದರು.
ಎಂತು ನಿಜಲಿಂಗವಂತಂಗೆ ಸರಿಯೆಂಬೆ?
ಅದ್ವೈತಿಗಳೆಲ್ಲಾ ಲಿಂಗಾರಾಧನೆ ಹುಸಿಯೆಂದು
ಬುದ್ಧಿತಪ್ಪಿ ಕ್ರಮಗೆಟ್ಟು ಹೋದರು,
ಬ್ರಹ್ಮ ನಾನೆಂದು ಶಿರವ ಹೋಗಾಡಿಕೊಂಡನು,
ಬ್ರಹ್ಮಾದಿದೇವತೆಗಳು ಮಹಾಲಿಂಗಕ್ಕೆ ದೂರವಾಗಿ ಹೋದರು,
ಹಮ್ಮಿಲ್ಲದ ಕಾರಣ
ಕೂಡಲಸಂಗನ ಶರಣರು ಜಗವಂದ್ಯರಾದರು. || ೧೫೮ ||

೧೧೫೯

ಕಾಯದ ಕುರುಹುವಿಡಿದು ಬಂದೆನೆಂಬ
ಆ ಭಾವದ ಇರವೇತಕ್ಕೆ ನಿಮಗೆ?
ಅಂಬರದ ಚಾಪ ಮುಗಿಲೊಳಗೆ ಹೊಂದಿತ್ತೆ?
ಬೇರೊಂದರಲ್ಲಿ ಸಂದಿತ್ತೆ? ಅದರಂಗದ ಛಾಯೆ.
ಪ್ರಭುದೇವರ ನಿಂದ ಸುಳುಹು
ಕೂಡಲಸಂಗಮದೇವರಲ್ಲಿ
ಭಿನ್ನವಿಲ್ಲದೆ ನಿಂದ ಕಾಯದಂ[ದ]. || ೧೫೯ ||

೧೧೬೦

ಕಾಯದ ಕೈಯಲ್ಲಿ ಕರಸ್ಥಲ,
ಪ್ರಾಣದ ಕೈಯಲ್ಲಿ ಜಂಗಮಸ್ಥಲ,
ಈ ಉಭಯಭಾವದ ಶಿವಲಿಂಗಾರ್ಚನೆ ಪರಮಾನಂದಸುಖಸ್ಥಲ.
ಕಾಯ ಭಕ್ತ, ಪ್ರಾಣ ಜಂಗಮ,
ಆವುದ ಘನವೆಂಬೆನಾವುದ ಕಿರಿದೆಂಬೆ?
ಕೂಡಲಸಂಗನ ಶರಣರು ಬಂದಡೆ ಉಪಚಾರಕ್ಕೆ ಇಂಬಿಲ್ಲ,
ಕರುಣದಿಂದ ಬರಹೇಳಾ, ಅಪ್ಪಣ್ಣಾ. || ೧೬೦ ||

೧೧೫೧

ಕಾಯದ ಲಜ್ಜೆಯ ಕಲ್ಪಿತವ ಕಳೆದು,
ಜೀವದ ಲಜ್ಜೆಯ ಮೋಹವನಳಿದು,
ಮನದ ಲಜ್ಜೆಯ ನೆನಹ ಸುಟ್ಟು,
ಭಾವದ ಕೂಟ ಬತ್ತಲೆಯೆಂದರಿದು,
ತವಕದ ಸ್ನೇಹ ವ್ಯವಹಾರಕ್ಕೆ ಹುಗದು.
ಕೂಡಲಸಂಗಮದೇವಯ್ಯಾ,
ಎನ್ನ ಹೆತ್ತ ತಾಯಿ ಮಹದೇವಿಕ್ಕನ ನಿಲವ ನೋಡಯ್ಯಾ ಪ್ರಭುವೆ. ॥ ೧೯೧ ॥

೧೧೫೨

ಕಾಲದಿಂದ ಕಡೆಮುಟ್ಟ ಮಾಡಿದ ಲೇಸು
ಒಂದು ದಿನ ಉದಾಸೀನವ ಮಾಡಿದಡೆ
ಅದೆಲ್ಲವು ವ್ಯರ್ಥವಾಗಿ ಹೋಹುದು ಕೇಳಯ್ಯಾ.
ಸಾವಿರ ನೋಂಪಿಯ ನೋಂತು ಒಂದು ಬಾರಿ ಹಾದರವನಾಡಿದಡೆ
ಆ ನೋಂಪಿಯೆಲ್ಲವು ನೀರಲ್ಲಿ ನೆರೆದು ಹೋಹಂತೆ ಕೇಳಯ್ಯಾ.
ನಾನು ಎಷ್ಟು ಭಕ್ತಿಯ ಮಾಡಿದಡೇನು?
ನಿಮ್ಮ ಶರಣರ ಮನವೆಳ್ಳನಿತು ನೊಂದಡೆ,
ಎನ್ನ ಭಕ್ತಿಯಭಿಮಾನ ಹೋಯಿತ್ತಯ್ಯಾ.
ಕೂಡಲಸಂಗಮದೇವಾ,
ನಿಮ್ಮ ಶರಣರ ಮುನಿಸನಾವಪರಿಯಲ್ಲಿ ತಿಳುಹುವೆ
ಹೇಳಾ, ಎಲೆ ಪ್ರಭುವೆ. ॥ ೧೯೨ ॥

೧೧೫೩

ಕಾಲ ಮುಟ್ಟಲಮ್ಮದ ಸಮುದಾನ, ಕಲ್ಪಿತವಿಲ್ಲದ ಸಮುದಾನ.
ಅನಂತರತಿ ಎಂಬ ಹೆಂಗೂಸು ಮುಟ್ಟದ ಸಮುದಾನ,
ಫಾಳಲೋಚನನೆಂಬ ಜಂಗಮ ಮುಟ್ಟದ ಸಮುದಾನ.
ಎಲ್ಲಿಯೂ ಮುಟ್ಟದ ಸಮುದಾನವ ನಿಮಗರ್ಪಿಸಿದೆನು—
ಆರೋಗಿಸಯ್ಯಾ ಪ್ರಭುವೆ, ಕೂಡಲಸಂಗಮದೇವಾ. ೧೯೩

೧೧೫೪

ಕಾಲಲಿ ಕಟ್ಟಿದ ಗುಂಡು, ಕೊರಳಲಿ ಕಟ್ಟಿದ ಬೆಂಡು,
ತೇಲಲೀಯದು ಗುಂಡು, ಮುಳುಗಲೀಯದು ಬೆಂಡು,

ಇಂತಪ್ಪ ಸಂಸಾರಶರಧಿಯ ದಾಂಟಿಸಿ
ಕಾಲಾಂತಕನೆ ಕಾಯೋ, ಕೂಡಲಸಂಗಯ್ಯಾ. ॥ ೧೯೪ ॥

೧೧೫೫

ಕಾಲಿಲ್ಲದೆ ನಡೆವನು, ಕೈಯಿಲ್ಲದೆ ಹಿಡಿವನು,
ಕಣ್ಣಿಲ್ಲದೆ ನೋಡುವನು ಸಹಜವಾಗಿ.
ಮೈಯಿಲ್ಲದ ಬಣ್ಣ, ಮಥನವಿಲ್ಲದ ಕೂಟ.
ಸ್ವೈರವೆರಗಾಗಿ ಸಿಡಿಯ ಮೇಲೆ,
ಒಡಲು ತನ್ನನರಿಯದು, ಒಡಲ ತಾನರಿಯನು.
ಬಿಡದೆ ಎನ್ನ ಬೆಂಬತ್ತಿ ಬಂದ ಪರಿಯ ನೋಡಾ.
ಜಡವಿಡಿದ ಎನ್ನ ಕಾಯದ ಕಳವಳವ ತಿಳುಹಲೆಂದು,
ಅಡಿಗಡಿಗೆ ಅನುಭಾವವ ತೋರುತ್ತಲಿದ್ದಾನೆ.
ಕುಳ್ಳಿತ್ತೆಡೆಯಲ್ಲಿ ಕುಂಟ, ನಿಂದಿದ್ದೆಡೆಯಲ್ಲಿ ಹೆಳವ.
ಎಲ್ಲಿ ನೋಡಿದಡಲ್ಲಿ ಪರಿಪೂರ್ಣನು.
ಮೆಲ್ಲಮೆಲ್ಲನೆ ಒಳಗ[ನ]ರಿದು ತೋರುತ್ತೈದಾನೆ.
ಬಲ್ಲವರೆಲ್ಲಾ ಬದುಕಿಯೆಂದು
ರಚ್ಚುಲ್ಲರಿಯ ಮೇಲೊಂದು ಬೆಳುಗೊಡೆಯ ಹಿಡಿದು
ಬಲ್ಲಿದನಾನೆಯ ತಡೆದು ನಿಲಿಸಬಲ್ಲನು.
ಕೂಡಲಸಂಗಮದೇವರ ಮಹಾಮನೆಯಲ್ಲಿ
ಪ್ರಭುದೇವರ ಮೂರೆಯ ಹೊಕ್ಕು ಬದುಕಿದೆನು. ॥ ೧೯೫ ॥

೧೧೫೬

ಕೀಟಕ ಸೂತ್ರದ ನೂಲಗೂಡಮಾಡಿ ಸುತ್ತಿರ್ಪಂತೆ
ಸೂತ್ರಕ್ಕೆ ನೂಲನೆಲ್ಲಿಂದ ತಂದಿತ್ತಯ್ಯಾ?
ರಾಟಿಯಿಲ್ಲ, ಅದಕ್ಕೆ ಹಂಜಿ ಮುನ್ನವೆ ಇಲ್ಲ, ನೂತವರಾರೋ?
ತನ್ನೊಡಲ ನೂಲ ತೆಗೆದು ಪಸುಿಸಿ, ಅದರೊಳು ಪ್ರೀತಿಯಿಂದೂಲಿದಾಡಿ,
ತುದಿಯಲ್ಲಿ ತನ್ನೊಳಗದ ಮಡಗಿಕೊಂಡಿಪ್ಪಂತೆ,
ತನ್ನಿಂದಾದ ಜಗವ ತನ್ನೊಳಗೈದಿಸಿಕೊಳಬಲ್ಲ
ನಮ್ಮ ಕೂಡಲಸಂಗಮದೇವರು. ॥ ೧೯೬ ॥

೧೧೫೭

ಕುಂಡಲಿಗನೊಂದು ಕೀಡೆಯ ತಂದು
ತನ್ನಂತೆ ಮಾಡಿತಲ್ಲಾ, ಎಲೆ ಮಾನವಾ,
ಕೇಳಿ ನಂಬಯ್ಯಾ, ನೋಡಿ ನಂಬಯ್ಯಾ,
ಎಲೆ ಮಾನವಾ.
ತ್ವಚ್ಚಿಂತಯಾ ಮಹಾದೇವ ತ್ವಾಮೇವೈತಿ ನ ಸಂಶಯಃ।
ಭ್ರಮದ್ಭ್ರಮರಚಿಂತಾಯಾಂ ಕೀಟೋಽಪಿ ಭ್ರಮರಾಯತೇ॥
ಕೂಡಲಸಂಗನ ಶರಣರ ಅನುಭಾವ
ಇದರಿಂದ ಕಿರುಕುಳವೆ,
ಎಲೆ ಮಾನವಾ? ॥ ೧೯೭ ॥

೧೧೫೮

ಕುಲವನರಸುವರೆ ಇದರೊಳು? ಛಲವನರಸುವರೆ?
ಹೊಲೆಗೇರಿಯಲೊಂದು ಎಲುವಿನ ಮನೆಗಟ್ಟಿ
ತೊಗಲಹೊದಿಕೆ, ನರವಿನ ಹಂಜರ
ಕುಲವನರಸುವರೆ?
ಹೊಲತಿ ಹೊಲೆಯ[ನು] ಹೋಗಿ
ಹೊಲೆಯಲ್ಲಿ ಮಿಂದಡೆ
ಹೊಲೆ ಹೋಯಿ[ತ್ತಿ]ಲ್ಲ, ಕುಲ ಹೋಗಲಿಲ್ಲ.
ಕಂಬಳಿಯೊಳಗೆ ಕೂಳಕಟ್ಟಿ ಕೂದಲನರಸುವರೆ?
ಇಂಥ ಡಂಬಕರ ಕೂಡಲಸಂಗಮದೇವರು ಮೆಚ್ಚರಯ್ಯಾ. ॥ ೧೯೮ ॥

೧೧೫೯

ಕುಲವ ನೋಡದೆ, ಛಲವ ನೋಡದೆ,
ನಿಲವ ನೋಡದೆ ಕೂಡಿದ ಬಳಿಕ,
ಅಲ್ಲಿ ಹೆಚ್ಚು ಕುಂದನರಸಲುಂಟೆ?
ಮುಂದುವರಿದು ಜಂಗಮಕ್ಕೆ ಭಕ್ತಿಯ ಮಾಡೆಂದು
ನಿಮ್ಮ ಕಾರುಣ್ಯವನುಪದೇಶವ ಮಾಡಿದ ಬಳಿಕ
ಬಂದುದ ಬಂದಂತೆ ಸಮನಿಸಿಕೊಳ್ಳಬೇಕಲ್ಲದೆ
ಅಂತಿಂತೆನಬಾರದು ಕೇಳಯ್ಯಾ.

ನೀನು ನಿರಾಕಾರ, ಸಾಕಾರವೆಂಬೆರಡು
ಮೂರ್ತಿಯ ಧರಿಸಿಪ್ಪೆಯಾಗಿ,
ಒಂದ ಜರೆದು ಒಂದ ಹಿಡಿದಿಹೆನೆಂದಡೆ
ಅದೆ ಕೊರತೆ ನೋಡಾ ಪ್ರಭುವೆ, ಕೂಡಲಸಂಗಮದೇವಾ. ॥ ೧೯ ॥

೧೧೬೦

ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗಂಗಳು
ಭವರಾಟಳದಲ್ಲಿ ತಿರುಗುತ್ತಿಪ್ಪಲ್ಲಿ
ಅನಂತ ಕೋಟ್ಯನುಕೋಟಿ ಯುಗಂಗಳು
ಮಡಿದುಹೋದವು,
ಅನಂತ ಜಲಪ್ರಳಯಂಗಗಳು
ಸುರಿದು ಹೋದವು.
ಹದಿನಾಲ್ಕು ಲೋಕಂಗಳೆಂಬ ಅನಂತಕೋಟಿ ಬ್ರಹ್ಮಾಂಡಗಳೆಲ್ಲ
ಲಯವಾಗಿ ಹೋದವು.
ಇದರೊಳಗೆ ಆವ ಲೋಕದಲ್ಲಿ ಆವ ಯುಗದಲ್ಲಿ
ಪ್ರಾಣಲಿಂಗ, ಲಿಂಗಪ್ರಾಣವೆಂಬ ಭೇದವನರುಹಿದವರಾರು ಹೇಳಾ?
ಗಂಗೆ ಗೌರೀವಲ್ಲಭರು ಮೊದಲಾದ
ಅನಂತಕೋಟಿ ರುದ್ರಾದಿಗಳೆಲ್ಲರೂ
ಪ್ರಾಣಲಿಂಗಸಂಬಂಧದ ಹೊಲಬನರಿಯದೆ
ಅಣಿಮಾದಿ ಚತುರ್ವಿಧ ಫಲಪ್ರಾಪ್ತಿಗೆ ಒಳಗಾದರು.
ಶಿವಾಚಾರದ ವಿಚಾರವನರಿಯದೆ
ಜಗವು ಕೆಟ್ಟುಹೋಹುದೆಂದು
ಪರಮಪುರುಷಾರ್ಥಕಾರಣವಾಗಿ ಮರ್ತ್ಯದಲ್ಲಿ ಅವತರಿಸಿ,
ಗುರುಲಿಂಗಜಂಗಮಪಾದೋದಕಪ್ರಸಾದವೆಂಬ
ಪಂಚಾಚಾರಸ್ಥಲವ ನೆಲೆಗೊಳಿಸಿ,
ಷಡುಸ್ಥಲವೆಂಬ ಮಹಾನುಭಾವವಮಂ
ಕರತಳಾಮಳಕವಾಗಿ ಸ್ಥಿತಗೊಳಿಸಿ,
ಪ್ರಾಣಲಿಂಗ, ಲಿಂಗಪ್ರಾಣವೆಂಬ ಭೇದವನೆನಗೆ ತಿಳುಹಿ,
ಎನ್ನ ಭ್ರಾಂತಿಸೂತಕವ ಬಿಡಿಸಿ,
ಲಿಂಗೈಕ್ಯವೆಂಬುದನೆನಗೆ ತೋರಿದೆಯಾಗಿ
ನಿನ್ನಿಂದಲಾನು ಸಂಗನಬಸವಣ್ಣನೆಂಬ ಹೆಸರುವಡೆದೆನು.

ಕೂಡಲಸಂಗಮದೇವರು ಸಾಕ್ಷಿಯಾಗಿ
ಎನಗೆ ನೀನು ಪರಮಾರಾಧ್ಯ ಕಾಣಾ, ಚೆನ್ನಬಸವಣ್ಣಾ. ॥ ೨೦೦ ॥

೧೧೬೧

ಕೆದರಿದ ತಲೆಯು, ತೊನೆವ ನಡೆಯು,ಹಣೆಯು ಬುಗುಟಿನ,
ಕರಸ್ಥಲದ ಅನಿಮಿಷದಿಂದ ಬಹಿರಂಗವ[ವಧಾ]ನ ತಪ್ಪಿ,
ಇದಿರುಗೊಯಿಲು ತಾಗಿ ಪುರ್ಬೊಡೆದು,
ಕಣ್ಣು ತರಿದು, ಕಿವಿ ಹರಿದು,
ಜೋಲುವ ರಕ್ತಧಾರೆಯು, ಗಾಳಿಯು ಧೂಳಿಯು ಮಳೆಯು ಜೋರಿನ,
ಬೆನ್ನ ಬಾಸುಳದ, ಎಡಬಲದ ಬರಿಯು ತದ್ದಿನ,
ಮುಳ್ಳುದರಹಿನ, ಕಂಕುಳ ಸೀಳ ಕಂಡು
ನೋಡುವ ಜನರು ಬೆರಗಾಗೆ–
ಪೊರವಾರಿನ ಮರೆಯು ದಿಗಂಬರದ ಬಣಗು ಸುರಿವುತ್ತ,
ಆಪ್ಯಾಯನವರತು, ಬಿದ್ದು ಮೊಳಕಾಲೊಡೆದು,
ಹೊಸ ಹುಣ್ಣಿನ ರಕ್ತದ ಜೋರು ಹರಿದು,
ಮುಂಗಾಲ ಕಣೆ [ಒ]ಳೆದು, ಕಣಕಾಲ ಸಂದು ತಪ್ಪಿ,
ಕಿರುಬೆರಳು ಎಡಹಿ, ಹೆಬ್ಬೊಟ್ಟೊಡೆದ ಗಾಯದ,
ಉರುಗು ಟೊಂಕದ, ಪೆರಚು ಗುಂಟನ
ನೋಡಾ ಚೆನ್ನಬಸವಣ್ಣಾ.
ಅತ್ಯಂತ ಮಲಿನ ಕೂಡಲಸಂಗಮದೇವರ ಕುರುಹು ವಿಪರೀತ,
ನೋಡುವಡೆ ಭಯಂಕರವಾಗಿದೆ ನೋಡಯ್ಯಾ, ॥ ೨೦೧ ॥

೧೧೬೨

ಕೆರೆಯು ತೂಂಬಿನಾಪ್ಯಾಯನದಂತೆ,
ಪ್ರಭುದೇವಾ ನಿಮ್ಮ ಆಪ್ಯಾಯನವು.
ಕೆರೆಯು ತೂಂಬ ಬಿಡಲೊಡನೆ ಹಲವು ಕದಳಿಗಳೆಲ್ಲಾ [ತ]ಣಿದವಯ್ಯಾ.
ಪರಿಣಾಮವೆಂಬ ಕೆರೆಗೆ ಪ್ರಭುವೆಂಬ ತೂಂಬನುಚ್ಚಲು,
ಅಸಂಖ್ಯಾತರೆಂಬ ಕದಳಿಗಳೆಲ್ಲಾ [ತ]ಣಿದವಯ್ಯಾ.
ಕೂಡಲಸಂಗಮದೇವಾ, ನಿಮ್ಮ ಶರಣ ಪ್ರಭುದೇವರು
ಸರ್ವಜೀವದಯಾಪಾರಿಗಳೆಂಬುದು ಇಂದೆನಗೆ ಅರಿಯ ಬಂದಿತಯ್ಯಾ. ॥ ೨೦೨ ॥

೧೧೬೩

ಕೆಳಗೇಳು ಲೋಕ, ಮೇಲೇಳು ಲೋಕ–
ಇಂತೀ ಹದಿನಾಲ್ಕು ಲೋಕಕ್ಕೆ ನೀನೊಡೆಯ,
ನಿನಗೆನ್ನ ಪಾಲಕರು ಭಕ್ತರೊಡೆಯರು.
ನಮ್ಮವರಿಂದ ನಿನ್ನ ಸೂತಕ ಹೋಯಿತ್ತಲ್ಲದೆ
ನಿನ್ನಿಂದ ಒಂದು ತೃಣ ಮುಡಿಯದು ಕಾಣಾ,
ಕೂಡಲಸಂಗಮದೇವಾ. ॥ ೨೦೩ ॥

೧೧೬೪

ಕೇಳಿ ಭೋ! ಕೇಳಿ ಭೋ! ವಿಪ್ರರೆಲ್ಲರೂ
ಬ್ರಹ್ಮಾಂಡಪುರಾಣದಲ್ಲಿ ನಿಮ್ಮ ಬ್ರಹ್ಮ ನುಡಿದ ವಾಕ್ಯವು:
ವಿಪ್ರಾಣಾಂ ವೇದವಿದುಷಾಂ ವೇದಾಂತಜ್ಞಾನವೇದಿನಾಂ।
ಸಿತೇನ ಭಸ್ಮನಾ ಕಾರ್ಯಂ ತ್ರಿಪುಂಡ್ರಮಿತಿ ಪದ್ಮಭೂ॥ ಎಂದುದಾಗಿ
ನಂಬಿ ಧರಿಸಿ ಭೋ! ವಿಪ್ರರೆಲ್ಲರೂ ಶ್ರೀಮಹಾಭಸಿತವ.
ಇದ ನಂಬಿಯೂ ನಂಬದೆ ಅಜ್ಞಾನದಿಂದ ಶ್ರೀಮಹಾಭಸಿತವ ಬಿಟ್ಟು,
ಮಣ್ಣು ಮಸಿ ಮರದ ರಸಂಗಳ
ಮೋಹದಿಂದ ನಿಮ್ಮ ಹಣೆಯಲ್ಲಿ ಬರೆದುಕೊಂಡಿರಾದಡೆ
ನಮ್ಮ ಕೂಡಲಸಂಗಮದೇವರಲ್ಲಿ,
ನಿಮ್ಮ ಅಧಿದೈವವೇ ನಿಮ್ಮ ಕಿವಿ ಮೂಗ ಕೊಯಿದು,
ಇಟ್ಟಿಗೆಯಲೊರಸಿ, ಕನ್ನಡಿಯ ತೋರಿ,
ನಡೆಸಿ ನರಕದಲ್ಲಿ ಕೆಡುಹದೆ ಬಿಡ ಕಾಣಿ ಭೋ!
ಇದನರಿದು ಮರೆಯದೆ ಧರಿಸಿ ಭೋ!
ಕೆಡಬೇಡ, ಕೆಡಬೇಡ,
ಮಹತ್ತಪ್ಪ ಶ್ರೀಮಹಾಭಸಿತವ ಧರಿಸಿ ಮುಕ್ತರಾಗಿರೇ. ॥ ೨೦೪ ॥

೧೧೬೫

ಕೈಯಲ್ಲಿ ಮುಟ್ಟಿದ ಪದಾರ್ಥ ಕೈಯೊಳಗೆ ಐಕ್ಯ,
ಕಂಗಳು ತಾಗಿದ ಪದಾರ್ಥ ಕಂಗಳೊಳೈಕ್ಯ,
ನಾಲಗೆ ತಾಗಿದ ಪದಾರ್ಥ ನಾಲಗೆಯೊಳಗೈಕ್ಯ.
ನೀಡುವ ಪರಿಚಾರಕರು ಬೇಸತ್ತರಲ್ಲದೆ
ಆರೋಗಣೆಯ ಮಾಡುವ ದೇವನೆತ್ತಲೆಂದರಿಯನು.

ಬ್ರಹ್ಮಾಂಡವನೊಡಲೊಳಗಡಗಿಸಿಕೊಂಡು ಬಂದ ದೇವಂಗೆ
ಆರೋಗಣೆಯ ಮಾಡಿಸಿಹೆನೆಂಬ ಅಹಂಕಾರದಲ್ಲಿ ಇದ್ದೆನಾಗಿ,
ನಾನು ಕೆಟ್ಟ ಕೇಡನೇನೆಂಬೆನಯ್ಯಾ?
ಕೂಡಲಸಂಗಮದೇವರ ತೃಪ್ತಿಯ ತೆರನ ಬಲ್ಲಡೆ ಹೇಳಾ
ಮಡಿವಾಳ ಮಾಚಯ್ಯ. || ೨೦೫ ||

೧೧೬೬

ಕೈಹಾರ ನೀಡಿದಡೆ ಮನಹಾರ ಕೊಳ್ಳುತ್ತೈದಾನೆ,
ಅಹುದಹುದು, ಸ್ವಾಮಿಯ ಹಸಿವು ಲೋಕಕ್ಕೆ ಹೊಸತು.
ಕೂಡಲಸಂಗಮದೇವ ನೆರೆ ಹಸಿದ, ಮೊರಮೊರದಲ್ಲಿ ನೀಡಿ. || ೨೦೬ ||

೧೧೬೭

ಕೊಂಡುದಿಲ್ಲ ಕೊಟ್ಟುದಿಲ್ಲ, ಲಗ್ಗವಿಲ್ಲ ವಿಲಗ್ಗವಿಲ್ಲ,
ನಮಗೆ ನಿಮಗೆ ಸಂಬಂಧವಿಲ್ಲ,
ನಮಗೆ ನಿಮಗೆ ಭಾವಭೇದವಿಲ್ಲ,
ಕೂಡಲಸಂಗಮದೇವಾ, ಇರು, ಇರದೆ ಮಾಣು. || ೨೦೭ ||

೧೧೬೮

ಕೊಡುವಾತ ಸಂಗ, ಕೊಂಬಾತ ಸಂಗ ಕಾಣಿರೆಲವೊ.
ನರಮಾನವರು ಕೊಡುವರೆಂಬವರ ಬಾಯಲ್ಲಿ
ಬಾಲಹುಳುಗಳು ಸುರಿಯವೆ?
ಮೂರು ಲೋಕಕ್ಕೆ ನಮ್ಮ ಕೂಡಲಸಂಗಯ್ಯ ಕೊಡುವ || ೨೦೮ ||
ಕಾಣಿರೆಲವೊ.

೧೧೬೯

ಕೋಟಿ ರುದ್ರರು ಮಡಿದರು,
ಅನಂತಕೋಟಿ ಬ್ರಹ್ಮವಿಷ್ಣುಗಳು ಮಡಿದರು,
ನರರು, ಸುರರು, ಗರುಡ ಗಂಧರ್ವರು ಮಡಿದರು.
ಅವರ ಮಡಿಯೊಳಗೆ ತಾನಾಗದೆ,
ತಾನೊಂದು ಹೊಸ ಬಿಳಿದ ಮಡಿಮಾಡಿ

ಎಸಗುಡಕೊಟ್ಟು ಎನ್ನ ಬದುಕಿಸಿಕೊಂಡಾತ,
ಮಡಿವಾಳ ಕಾಣಾ, ಕೂಡಲಸಂಗಮದೇವಾ. || ೨೦೯ ||

೧೧೭೦

ಕೋಡಗವೇಡಿಸಬೇಡೆಂದಡೆ ಮಾಣದಯ್ಯಾ,
ತೋಡುವ ಹೆಗ್ಗಣ ಮಾಳಿಗೆ ಎಂದಡೆ ಮಾಣದಯ್ಯ,
ಗಾಡಿಗ ದೂಷಕನವರವರನಾಡುವುದೆ ನೇಮ.
ಕೂಡಲಸಂಗಮದೇವಾ, ಇದವರ ಕಾಯಕವಯ್ಯಾ. || ೨೧೦ ||

೧೧೭೧

ಕ್ರಿಯಾಚಾರವಿಲ್ಲದ ಗುರುವಿನ ಕೈಯಿಂದ
ದೀಕ್ಷೆ, ಉಪದೇಶವ ಕೊಳ್ಳಲಾಗದು.
ಕ್ರಿಯಾಚಾರವಿಲ್ಲದ ಶಿಲೆಯ ಲಿಂಗವೆಂದು ಪೂಜಿಸಲಾಗದು.
ಕ್ರಿಯಾಚಾರವಿಲ್ಲದ ಭೂತಪ್ರಾಣಿಗಳಲ್ಲಿ
ಜಂಗಮವೆಂದು ಪಾದೋದಕ ಪ್ರಸಾದವ ಕೊಳಲಾಗದು.
ಇಂತಪ್ಪ ಆಚಾರವಿಲ್ಲದ, ಅನಾಚಾರವ ಬಳಸುವ ದುರಾಚಾರಿಗಳಲ್ಲಿ
ಉಪದೇಶವ ಹಡೆದು, ಪಾದೋದಕಪ್ರಸಾದವ ಕೊಂಡವಂಗೆ
ಅಘನಾಸ್ತಿಯಾಗದು, ಮುಂದೆ ಅಘೋರ ನರಕ ತಪ್ಪದು
ಕಾಣಾ, ಕೂಡಲಸಂಗಮದೇವಾ. || ೨೧೧ ||

೧೧೭೨

ಕ್ರಿಯಾಜ್ಞಾನಸಂಬಂಧವೆಂದು ನುಡಿವರು–
ಕ್ರಿಯಾಜ್ಞಾನಸಂಬಂಧವೆಂತಿರ್ಪುದೆಂದರಿಯರು.
ಕ್ರೀಯಲ್ಲಿ ಅಂಗಲಿಂಗಸಂಬಂಧವನರಿಯರು,
ಜ್ಞಾನದಲ್ಲಿ ಲಿಂಗಜಂಗಮಸಂಬಂಧವನರಿಯರು.
ಕ್ರೀಯಲ್ಲಿ ಅರ್ಪಿತಪ್ರಸಾದಸಂಬಂಧವನರಿದು,
ಜ್ಞಾನದಲ್ಲಿ ತೃಪ್ತಿಪರಿಣಾಮವನರಿದು.
ಕ್ರೀಯೊಳಗಿರ್ದು ಜ್ಞಾನಸಂಪನ್ನನಾಗಿರಬಲ್ಲ ಶರಣಂಗೆ
ಕ್ರಿಯೆಯೆ ತನು, ಜ್ಞಾನವೆ ಪ್ರಾಣ.
ತನು ಲಿಂಗವಾಗಿ, ಪ್ರಾಣ ಜಂಗಮವಾಗಿ,
ತನುವ ಸಯವಮಾಡಿ, ಪ್ರಾಣವ ಲಿಂಗಜಂಗಮಕ್ಕರ್ಪಿಸಿ,

ನಿರಂತರ ಸಾವಧಾನಿಯಾಗಿರಬಲ್ಲ ಪ್ರಸಾದಿಗಳ
ಎನಗೊಮ್ಮೆ ತೋರಿ ಸಲಹಾ, ಕೂಡಲಸಂಗಮದೇವಾ. || ೨೧೨ ||

೧೧೭೩

ಗಾಂಧಾರಿ ಮಾಂಧಾರಿಯೆಂಬ ಅಹೋರಾತ್ರಿಯಲ್ಲಿ
ಲಿಂಗವ ಪೂಜಿಸಬೇಕು.
ಊರಕೋಳಿ ಕೂಗದ ಮುನ್ನ, ಕಾಡನವಿಲು ಒದರದ ಮುನ್ನ,
ಲಿಂಗವ ಪೂಜಿಸಬೇಕು.
ಗೋವುಗಳ ಕೊಲುವ ಪಾಪಿಯ ದನಿಯ ಕೇಳದ ಮುನ್ನ,
ತುಂಬಿ ಮುಟ್ಟಿ ಪುಷ್ಪ ನಿರ್ಮಾಲ್ಯವಾಗದ ಮುನ್ನ
ಲಿಂಗವ ಪೂಜಿಸಬೇಕು.
ಅದೆಂತೆಂದಡೆ:
ಯೋ ಲಿಂಗಮರ್ಧರಾತ್ರೌ ತು ಶುಚಿರ್ಭೂತ್ವಾ ಪ್ರಪೂಜಯೇತ್।
ಅಗ್ನಿಷ್ಟೋಮಸಹಸ್ರಸ್ಯ ಧರ್ಮಸ್ಯ ಲಭತೇ ಫಲಂ॥
ಎಂದುದಾಗಿ,
ಶುದ್ಧಾಂತಃಕರಣನಾಗಿ ಶಿವಪೂಜೆಯ ಮಾಡಬೇಕು,
ಆತಂಗೆ ಅಗ್ನಿಷ್ಟೋಮ ಸಹಸ್ರಫಲವಹುದು.
ತನ್ನೊಡನೆ ಮಲಗಿರ್ದ ಸತಿಯನೆಬ್ಬಿಸದೆ ಶಿವಲಿಂಗಕ್ಕೆರೆವ
ಸದ್ಭಕ್ತನ ಶ್ರೀಪಾದವ ತೋರಿ ಬದುಕಿಸಯ್ಯಾ,
ಕೂಡಲಸಂಗಮದೇವಾ. || ೨೧೩ ||

೧೧೭೪

ಗಿರಿಯ ಶಿಖರದ ಮೇಲೆ ಕುಳಿತುಕೊಂಡು, ಜಡೆಯನೇರಿಸಿಕೊಂಡು
ಹುತ್ತೇರಿ ಹಾವು ಸುತ್ತಿರ್ದಡೇನಯ್ಯಾ?
ಕೃತಯುಗ ತ್ರೇತಾಯುಗ ದ್ವಾಪರ ಕಲಿಯುಗದೊಡನೊಡನೆ
ಸವೆದ ಪಾಷಾಣ!
ನಮ್ಮ ಕೂಡಲಸಂಗನ ಶರಣರ ಪ್ರಸಾದಜೀವಿಗಳಲ್ಲದವರು
ಏಸು ಕಾಲವಿರ್ದಡೇನು, ಅದರಂತು ಕಾಣಿರಣ್ಣಾ. || ೨೧೪ ||

೧೧೭೫

ಗುರುಕಾರುಣ್ಯವಿಡಿದು ಬಂದ ತನ್ನ ಕರಸ್ಥಲದ ಇಷ್ಟ ಲಿಂಗದಲ್ಲಿ ದೃಷ್ಟಿನಟ್ಟು,
ಭಾವಸಂಪನ್ನನಾಗಿ ನಿಂದು, ನಿಜವನ್ನೈದಲರಿಯದೆ
ಪವನಮುಖದಿಂದ ಲಿಂಗವನರಿದೆನೆಂಬುದೆ ದ್ರೋಹ.

ಇಡಾ ಪಿಂಗಳ ಸುಷುಮ್ನಾನಾಳವ ಬಲಿದು
ಲಿಂಗವ ಕಂಡೆಹೆನೆಂಬ ಕ್ರೂರಕರ್ಮಿಗಳನು ಕೂಡಲಸಂಗಯ್ಯ
ಕೆಡಹಿ ಮೂಗಕೊಯ್ವ ಕಾಣಿರೊ. || ೨೧೫ ||

೧೧೭೬

ಗುರುಕಾರುಣ್ಯವೆ ಸದಾಚಾರ, ಗುರುಕಾರುಣ್ಯವೆ ಸದಾಚಾರ,
ಗುರುಕಾರುಣ್ಯವೆ ಪ್ರಸಾದರುಚಿ.
ಮುಂದೆ ಗುರು, ಹಿಂದೆ ಲಿಂಗ ಕೂಡಲಸಂಗಮದೇವಾ. || ೨೧೬ ||

೧೧೭೭

ಗುರು ಮುಂತಾಗಿ ಕೊಂಡುದು ಪ್ರಸಾದವಲ್ಲ,
ಲಿಂಗ ಮುಂತಾಗಿ ಕೊಂಡುದು ಪ್ರಸಾದವಲ್ಲ,
ಜಂಗಮ ಮುಂತಾಗಿ ಕೊಂಡುದು ಪ್ರಸಾದವಲ್ಲ,
ಪ್ರಸಾದ ಮುಂತಾಗಿ ಕೊಂಡುದು ಪ್ರಸಾದವಲ್ಲ,
ಅಂತಪ್ಪ ಪ್ರಸಾದವೆ ಬೇಕು.
ಅಂತಪ್ಪ ಪ್ರಸಾದವ ತೋರಿ
ಬದುಕಿಸಯ್ಯಾ, ಕೂಡಲಸಂಗಮದೇವಾ. || ೨೧೭ ||

೧೧೭೮

ಗುರುಲಿಂಗಜಂಗಮದ ಹೆಸರಿನಿಂದ ಕಾಯಕವ ಮಾಡಿ,
ಗುರು ಚರಕೆ ವಂಚಿಸಿ,
ತಾಯಿ ತಂದೆ, ಬಂಧು ಬಳಗ, ಹೆಂಡತಿ, ಒಡಹುಟ್ಟಿದವರು
ಎಂದು ಸಮಸ್ತಪದಾರ್ಥವ ಚಾಗೆಯ ಮಾಡುವನೊಬ್ಬ
ಭಕ್ತದ್ರೋಹಿ ನೋಡಾ, ಕೂಡಲಸಂಗಮದೇವಾ. || ೨೧೮ ||

೧೧೭೯

ಗುರುಲಿಂಗಜಂಗಮದ ಘನಪ್ರಸಾದವ ಪಡಕೊಂಡು,
ಅಂಗವಿಕಾರಕ್ಕೆ ಭುಂಜಿಸುವ ಅವಿಚಾರಿಗಳ ವಿವರವೆಂತೆಂದಡೆ:
ಆದಿಸ್ವಾದಿ ಅನಾಹತ ಹೃದಯ ದೀನಸ್ಥಿತಿಯ ತಿಳಿಯವೆ,
ಆದಿ ಅನಾದಿಯ ಭೇದಿಸಲರಿಯದೆ,

ಆದಿಪ್ರಸಿದ್ಧವಾದ ಪರಮಗುರುವಿನಲ್ಲಿ
ಸಮಯದ ಹಂಗಿಂಗೆ ಗಡಣಿಸಿಕೊಂಡು, ಬಲಭಿಚಾರಿಗಳು
ನುಗ್ಗಿಯ ಬೀಜ, ಮಾವಿನ ಬೀಜ, ದಂಟುದಡಿ ಮೊಲಾದ ನಾನಾ ಕಠಿಣಂಗಳನು,
ಅಂಗವಿಕಾರಕ್ಕೆ ಭುಂಜಿಸುವ ಭಕ್ಷಿಸುವ ಭವಕರ್ಮಿಗಳು.
ಅಂಗವಿಕಾರಕ್ಕೆ ಭೂತನಂತೆ ಒಟ್ಟಿಕೊಂಡು,
ಕರಿ ಸೂಕರನಂತೆ ಅಗ್ನಿಯಲ್ಲಿ ಸುಡು ಎಂಬ ಲಿಂಗದ್ರೋಹಿಗೇಕೊ ಪ್ರಸಾದ?
ಅಂತಪ್ಪ ಪರಮಪಾತಕರಿಗೆ ಪಾದೋದಕ ಪ್ರಸಾದವ ಕೊಡಲಾಗದು.
ಇಂತಪ್ಪ ಪ್ರಸಾದದಿಂದೊಗೆದ ಕಠಿಣವನು ಅಗ್ನಿಯಲ್ಲಿ ದಗ್ಧವ ಮಾಡಲಾಗದು.
ಬೆಂಕಿಯಲ್ಲಿ ಸುಡು ಎಂಬುದಕ್ಕೆ ಕುರಿಯ ಹೋಮವೆ?
ಮಾತಂಗಿಯ ಮಕ್ಕಳ ಸಂತಾನವೆ?
ಸತ್ತರೆ ಸುಡಿಸಿಕೊಂಬ ಶ್ವಪಚ ಮಾತಂಗಿಯ
ಮಕ್ಕಳ ಸಂತಾನವನೇನೆಂಬೆನಯ್ಯಾ!
ಆ ಶಿವನ ಪ್ರಸಾದವ ಸುಡುವರೆ?
ಸತ್ತ ಹಾರುವನ ಅಗ್ನಿಯಲ್ಲಿ ಸುಡು ಎಂಬ ದ್ರೋಹಿಗೇಕೊ ಪ್ರಸಾದ?
ಅರಿಯದುದೆಲ್ಲ ಜ್ಞಾನದೊಳು ಅರಿದು,
ಅರುಹಿಸಿಕೊಂಡ ಬಳಿಕ ತಿಳಿದಾಚರಿಸುವುದು,
ಭಕ್ತಿಜ್ಞಾನವೈರಾಗ್ಯವಿಡಿದಾಚರಿಸುವುದೆ ಗುರುಭಕ್ತಿ.
ಇಂತಪ್ಪ ಗುರುಮಾರ್ಗಾಚಾರವಸಾಧ್ಯವೆಂಬವರಿಗೆ
ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪಾದೋದಕವಿಲ್ಲ, ಪ್ರಸಾದವಿಲ್ಲ.
ಆ ಪ್ರಸಾದವಿಲ್ಲದವಂಗೆ ಪಂಚಾಚಾರವಿಲ್ಲ,
ಆ ಪಂಚಾಚಾರವಿಲ್ಲದವಂಗೆ ಪ್ರಸಾದವಿಲ್ಲ.
ಇಂತಪ್ಪ ಪ್ರಸಾದವಿಲ್ಲದವಂಗೆ ಯುಕ್ತಿಯೆಂಬುದು ಎಂದೆಂದಿಗೂ ಇಲ್ಲ.
ಅವಂಗೆ ಇಹವಿಲ್ಲ, ಪರಕ್ಕೆ ಸಲ್ಲನೆಂಬ ಗುರುವಚನವುಂಟು,
ಪ್ರಭುವೆ ನಿಮ್ಮಾಣೆ, ಕೂಡಲಸಂಗಮದೇವಾ. || ೨೧೯ ||

೧೧೮೦

ಗುರುಲಿಂಗಜಂಗಮವ ನಂಬಿ ಕರೆದಡೆ, ಓ ಎಂಬ ಶಿವನು.
ನಂಬದೆ ಕರೆದಡೆ ಓ ಎಂಬನೇ ಶಿವನು?
ನಂಬಲರಿಯರು, ನಚ್ಚಲರಿಯರು ಡಂಭಿನ ಭಕ್ತರು.
ನಂಬದೆ ನಚ್ಚದೆ ಬರಿದೆ ಕರೆದಡೆ ಶಂಭು ಮೌನದಲ್ಲಿಪ್ಪ
ನಮ್ಮ ಕೂಡಲಸಂಗಮದೇವರು. || ೨೨೦ ||

೧೧೮೧

ಗುರುವಚನವ ತನ್ನೊಳಗಿಂಬಿಟ್ಟುಕೊಂಡ ಪ್ರಸಾದಿಯು ಪ್ರಸಾದಿಯೆಂಬೆ.
ಲಿಂಗವಚನವ ತನ್ನೊಳಗಿಂಬಿಟ್ಟುಕೊಂಡ ಪ್ರಸಾದಿಯು ಪ್ರಸಾದಿಯೆಂಬೆ.
ಜಂಗಮವಚನವ ತನ್ನೊಳಗಿಂಬಿಟ್ಟುಕೊಂಡ ಪ್ರಸಾದಿಯು ಪ್ರಸಾದಿಯೆಂಬೆ.
ಪ್ರಸಾದವಚನವ ತನ್ನೊಳಗಿಂಬಿಟ್ಟುಕೊಂಡ ಪ್ರಸಾದಿಯು ಪ್ರಸಾದಿಯೆಂಬೆ.
ಇಂತೀ ಚತುರ್ವಿಧ ಸಂಪನ್ನ ಕೂಡಲಸಂಗಯ್ಯನಲ್ಲಿ ಚೆನ್ನಬಸವಣ್ಣನು. ॥ ೨೨೧ ॥

೧೧೮೨

ಗುರುವಿಂಗೆ ತನುವ ಕೊಟ್ಟು, ಲಿಂಗಕ್ಕೆ ಮನವ ಕೊಟ್ಟು,
ಜಂಗಮಕ್ಕೆ ಧನವ ಕೊಟ್ಟು,
ಇಂತೀ ತ್ರಿವಿಧಕ್ಕೆ ತ್ರಿವಿಧವ ಕೊಟ್ಟು ನಾನು ಶುದ್ಧನಾದೆನು
ಕಾಣಾ, ಕೂಡಲಸಂಗಮದೇವಾ. ॥ ೨೨೨ ॥

೧೧೮೩

ಗುರುವಿಂಗೆ ನೀನೆ ಕರ್ತ, ಲಿಂಗಕ್ಕೆ ನೀನೆ ಕರ್ತ, ಜಂಗಮಕ್ಕೆ ನೀನೆ ಕರ್ತ,
ಪ್ರಸಾದಕ್ಕೆ ನೀನೆ ಕರ್ತ, ಉಪದೇಶಕ್ಕೆ ನೀನೆ ಕರ್ತ.
ಕೂಡಲಸಂಗಮದೇವರು ಸಾಕ್ಷಿಯಾಗಿ,
ಎನಗೆಯೂ ನೀನೆ ಕರ್ತನಾದ ಕಾರಣ, ನಾನು ಬೇಕೆನಲಮ್ಮೆ ಬೇಡೆನಲಮ್ಮೆ
ಕಾಣಾ, ಚೆನ್ನಬಸವಣ್ಣಾ. ॥ ೨೨೩ ॥

೧೧೮೪

ಗುರುವಿನಲ್ಲಿ ಸ್ವಾಯತ, ಲಿಂಗದಲ್ಲಿ ಸನ್ನಿಹಿತ,
ಜಂಗಮದಲ್ಲಿ ಸದರ್ಥನು,
ಪ್ರಸಾದದಲ್ಲಿ ಪರಿಣಾಮಿ.
ಇಂತೀ ಚತುರ್ವಿಧದಲ್ಲಿ ಸನ್ಮತನು,
ಕೂಡಲಸಂಗಯ್ಯನಲ್ಲಿ ಚೆನ್ನಬಸವಣ್ಣನು. ॥ ೨೨೪ ॥

೧೧೮೫

ಗುರುವುಪದೇಶವುಳ್ಳವರ ಗುರುವೆಂದೆ ಕಾಣೆನು,
ಲಿಂಗಾಂಗಸಂಗಿಗಳ ನಿಜಲಿಂಗವೆಂದೆ ಕಾಣೆನು,
ಜಂಗಮಾರ್ಚಕರ ಸರ್ವಾಂಗಲಿಂಗಿಗಳೆಂದೆ ಕಾಣೆನು.

ಕೂಡಲಸಂಗಮದೇವರಲ್ಲಿ ಸಹಜಭಕರ ಕಂಡಡೆ,
ಅವರ ನೀನೆಂದೇ ನಚ್ಚಿ ಮೆಚ್ಚಿ
ಅಚ್ಚೊತ್ತಿದಂತಿಪ್ಪನಯ್ಯಾ ಚೆನ್ನಬಸವಣ್ಣಾ. || ೨೨೫ ||

೧೧೮೬

ಗುರು ಸ್ವಾಯತವಾದ ಬಳಿಕ ಗುರುವ ಮರೆಯಬೇಕಯ್ಯಾ,
ಲಿಂಗ ಸ್ವಾಯತವಾದ ಬಳಿಕ ಲಿಂಗವ ಮರೆಯಬೇಕಯ್ಯಾ,
ಜಂಗಮಸ್ವಾಯತವಾದ ಬಳಿಕ ಜಂಗಮವ ಮರೆಯಬೇಕಯ್ಯಾ,
ಪ್ರಸಾದ ಸ್ವಾಯತವಾದ ಬಳಿಕ ಪ್ರಸಾದವ ಮರೆಯಬೇಕಯ್ಯಾ.
ಇಂತೀ ಗುರುಲಿಂಗಜಂಗಮಪ್ರಸಾದದಲ್ಲಿ ಪರಿಣಾಮಿಯಾಗಿ,
ಸಮಯಭಕ್ತಿಯಲ್ಲಿ ಸಂತೋಷಿಯಾಗಿ ಬದುಕಿದೆನು ಕಾಣಾ,
ಕೂಡಲಸಂಗಮದೇವಾ. || ೨೨೬ ||

೧೧೮೭

ಗುರಿಯನೆಚ್ಚವನೇ ಬಿಲ್ಲಾಳು,
ಇರಿದು ರಣದಲ್ಲಿ ತಿ[ರುಗದವ]ನೇ ಮಾಸಾಳು,
ದಾರಿದ್ರ್ಯ[ವ]ನೆ ಪರಿದವನೇ ದಯಾಳು,
ಗುರುಪಾದಭಕ್ತಿಯುಳ್ಳವನದೇ ಬಾಳು,
ಕೂಡಲ ಸಂಗಮದೇವನ ಶರಣರಾಳು. || ೨೨೭ ||

೧೧೮೮

ಘನಗಂಭೀರವಾರುಧಿಯೊಳಗೆ ತೋರುವ ವೀಚಿಗಳು
ಆ ವಾರುಧಿಯ ಬಿಟ್ಟು ತೋರಬಲ್ಲವೆ?
ತೋರಿದಡೆ ಆ ವಾರುಧಿ ತನ್ನ ತಾ ಜರೆದುಕೊಂಬುದೆ?
ನಿಮ್ಮೊಳಡಗಿದ ಪ್ರಮಥರೆಲ್ಲರ ಗುಣಾದಿಗುಣಂಗಳೆಲ್ಲವನು ನಿಮ್ಮಡಿಗಳೆತ್ತಲುಂಟೆ?
ಜಗದೊಳಗೆ ಕೂಡಿ ಪರಿಪೂರ್ಣನಾದ ಬಳಿಕ,
ಇದಿರ ನೋಡಿ ಜರೆದು ನುಡಿವ ಠಾವಾವುದು ಹೇಳಯ್ಯಾ?
ಕೂಡಲಸಂಗಮದೇವಯ್ಯಾ,
ನಿಮ್ಮ ನೀವು ಪರಿಣಾಮಿಸಿಕೊಂಬುದಲ್ಲದೆ ಭಿನ್ನವ ಮಾಡಲುಂಟೆ? || ೨೨೮ ||

೧೧೮೯

ಘನವನರಿದು ಘನವ ವೇಧಿಸಿ
ಘನಗುರುವ ತನ್ನೊಳಗೆ ಬೈಚಿಟ್ಟ ಪರಿಣಾಮಿಯ ನೋಡಾ!
ಗುರುಲಿಂಗಜಂಗಮದಲ್ಲಿ ತನುಮನಧನವ ವೇಧಿಸುವ ಪರಿಯು ನೋಡಾ!
ಕಾಯಪ್ರಸಾದದಲ್ಲಿ ಸ್ವಾಯತವ ಮಾಡಿಕೊಂಡಿಪ್ಪ ಪರಿಯ ನೋಡಾ!
ಷಡುಸ್ಥಲದಲ್ಲಿ ಸ್ವಾಯತವಾದ,
ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನು. ॥ ೨೨೯ ॥

೧೧೯೦

ಚಂದ್ರನು ಅಮೃತಕರನಾದಡೇನಯ್ಯಾ,
ಒಳಗಣ ಕಳಂಕ ಬಿಡದನ್ನಕ್ಕರ?
ಸೂರ್ಯ ಮಹಾಪ್ರಕಾಶನಾದಡೇನಯ್ಯಾ,
ಅಸ್ತಮಾನಕ್ಕೆ ಅಸ್ತಂಗತನೆಂಬ ಹೀನ ಬಿಡದನ್ನಕ್ಕರ?
ಆನು ನಿಮ್ಮ ಕೃಪೆಯ ಪಡೆದು ಫಲವೇನಯ್ಯಾ,
ನಿಮ್ಮ ಶರಣರು ಎನ್ನ ಮೇಲೆ ಮುನಿದು ಹೋದ ಬಳಿಕ?
ಕೂಡಲಸಂಗಮದೇವಯ್ಯಾ, ನಿಮ್ಮ ಶರಣರ ಮನದಲ್ಲಿ
ಎನ್ನ ಮೇಲೆ ಕರುಣ ಪುಟ್ಟಿಬಪ್ಪಂತೆ ಮಾಡಯ್ಯಾ. ॥ ೨೩೦ ॥

೧೧೯೧

ಚಂದ್ರಶಿಲೆಯಲ್ಲಿ ಪಾವಕ ಹುಟ್ಟಿ,
ಇಡಾಪಿಂಗಳ ಮಧ್ಯದಲ್ಲಿ ಅನಿಲ ತುಂಬಿ,
ಅರಿದರಿದು ನಿಮ್ಮ ನೆನೆವ ಪರಿಕರ ಹೊಸತು,
ಅರಿವಡೆ ತಲೆಯಿಲ್ಲ, ಹಿಡಿವಡೆ ಒಡಲಿಲ್ಲ,
ಕೂಡಲಸಂಗಮದೇವಾ,
ನಿಮ್ಮ ಶರಣನ ಪರಿ ಇಂತುಟು, ಅರಿದರಿದು. ॥ ೨೩೧ ॥

೧೧೯೨

ಚಿನ್ಮಯ ಚಿತ್ಪ್ರಕಾಶ ಚಿದಾನಂದ ಲಿಂಗವೆ,
ಎನ್ನ ಹೃದಯಕಮಲದಲ್ಲಿ ಬೆಳಗಿ ತೋರುವ ಪರಂಜ್ಯೋತಿ,
ಎನ್ನ ಕರಸ್ಥಲಕ್ಕನುವಾದ ಧರ್ಮಿ,
ಎನ್ನ ಕಂಗಳ ಕೊನೆಯಲ್ಲಿ ಮೂರ್ತಿಗೊಂಡಿಪ್ಪೆಯಯ್ಯಾ,
ಕೂಡಲಸಂಗಮದೇವಯ್ಯಾ. ॥ ೨೩೨ ॥

೧೧೯೩

ಚೆನ್ನಬಸವರಾಜದೇವರೆನ್ನ ಶಿಷ್ಯನಾದನೆಂದಡೆ ಏನಗಾದ ಘನವೇನಯ್ಯಾ!
ಆದಿಯ ತೋರಿದ ಚೆನ್ನಬಸವನು,
ಅನಾದಿಯ ತೋರಿದ ಚೆನ್ನಬಸವನು,
ಆದಿಯನಾದಿಯಿಂದತ್ತತ್ತಲಾದವರನೆ ತೋರಿದ ಚೆನ್ನಬಸವನು.
ಕೂಡಲಸಂಗಮದೇವಾ, ಚೆನ್ನಬಸವರಾಜದೇವರೆನ್ನ
ಮಾತಾಪಿತರಯ್ಯಾ. ॥ ೨೩೩ ॥

೧೧೯೪

ಜಂಗಮಕ್ಕೆ ಮಾಡಿ ಗತಿಯ ಪಡೆದೆಹೆನೆಂಬ
ಬೆವಹಾರದ ಭಕ್ತರು ನೀವು ಕೇಳಿರಯ್ಯಾ.
ಜಂಗಮಕ್ಕೆ ಮಾಡಿ, ಗತಿಯ ಪಡೆದೆಹೆನೆಂಬ,
ಭಕ್ತಿವ್ಯರ್ಥರು ನೀವು ಕೇಳಿರಯ್ಯಾ.
ಅಗ್ನಿಮುಖದಲ್ಲಿ ಪಾಕವಾದ ಸಸಿ ತೆನೆಯಪ್ಪುದೆ?
ಶಶಿಧರಂಗೆ ಮಾಡಿದಡೆ ಫಲವಪ್ಪುದು,
ಆ ಫಲದಾಯಕನೆ ಮರಳಿ ಭವಕ್ಕೆ ಬಹನು.
ಜಂಗಮಕ್ಕೆ ಮಾಡಿದಡೆ ಫಲವಿಲ್ಲ, ಮರಳಿ ಭವವಿಲ್ಲ.
ಕಿಚ್ಚಿನ ಕಣಜದಲ್ಲಿ ಬೀಜವ ತುಂಬಿ
ಬಿತ್ತುವ ದಿನಕ್ಕರಸಿದಡುಂಟೆ, ಕೂಡಲಸಂಗಮದೇವಾ? ॥ ೨೩೪ ॥

೧೧೯೫

ಜಂಗಮವೆ ಜ್ಞಾನರೂಪು, ಭಕ್ತನೆ ಆಚಾರರೂಪವೆಂಬುದು
ತಪ್ಪದು ನೋಡಯ್ಯಾ.
ನಾನು ನಿಮ್ಮಲ್ಲಿ ಆಚಾರಿಯಾದಡೇನಯ್ಯಾ, ಜ್ಞಾನವಿಲ್ಲದನ್ನಕ್ಕರ?
ತಲೆಯಿಲ್ಲದ ಮುಂಡದಂತೆ.
ಜ್ಞಾನ ಉದಯವಾಗದ ಮುನ್ನವೆ ತಲೆದೋರುವ ಆಚಾರವುಂಟೆ ಜಗದೊಳಗೆ?
ಜ್ಞಾನದಿಂದ ಆಚಾರ, ಜ್ಞಾನದಿಂದ ಅನುಭಾವ, ಜ್ಞಾನದಿಂದ ಪ್ರಸಾದವಲ್ಲವೆ,
ಜ್ಞಾನವನುಳಿದು ತೋರುವ ಘನವ ಕಾಣೆನು.
ಎನ್ನ ಆಚಾರಕ್ಕೆ ನೀನು ಜ್ಞಾನರೂಪಾದ ಕಾರಣ
ಸಂಗನಬಸವಣ್ಣನೆಂಬ ಹೆಸರುವಡೆದೆನು.
ಅನಾದಿ ಪರಶಿವನು ನೀನೆ ಆಗಿ,
ಘನಚೈತನ್ಯಾತ್ಮಕನೆಂಬ ಮಹಾಜ್ಞಾನವು ನೀನೆ ಆದೆಯಲ್ಲದೆ,

ನಾನೆತ್ತ, ಶಿವತತ್ತ್ವವೆತ್ತಯ್ಯಾ?
ಕೂಡಲಸಂಗಮದೇವರು ಸಾಕ್ಷಿಯಾಗಿ,
ನಾನು ಪ್ರಭುದೇವರ ತೊತ್ತಿನ ಮಗನೆಂಬುದ
ಮೂರು ಲೋಕವೆಲ್ಲವೂ ಬಲ್ಲುದು ಕಾಣಾ, ಪ್ರಭುವೆ. ॥ ೨೩೫

೧೧೯೬

ಜಂಗಮವೆ ತನ್ನ ಪ್ರಾಣಲಿಂಗವೆಂದರಿದ ಸದ್ಭಕ್ತಂಗೆ
ಜಂಗಮದ ಪ್ರಸಾದವಿಲ್ಲದೆ ಲಿಂಗಪ್ರಸಾದವ ಕೊಳಲಾಗದು,
ಜಂಗಮದ ಪ್ರಸಾದವು ಲಿಂಗಕ್ಕೆ ಸಲ್ಲದೆಂದು ಶಂಕಿಸಲಾಗದು.
ಅದೆಂತೆಂದಡೆ, ವೀರಾಗಮದಲ್ಲಿ:
ಜಂಗಮಾದಿಗುರೂಣಾಂ ಚ ಅನಾದಿ ಸ್ವಯಲಿಂಗವತ್ ।
ಆದಿಪ್ರಸಾದ ವಿರೋಧೇ ಇಷ್ಟೋಚ್ಛಿಷ್ಟಂ ತು ಕಿಲ್ಬಿಷಂ ॥ ಎಂದುದಾಗಿ
ಪ್ರಾಣ ಭಾವದಲ್ಲಿ ಸಂಬಂಧವಾಗಿ ಇಷ್ಟಕ್ಕೂ ಸಂದಿತ್ತು.
ಈ ಭೇದವನರಿದು ಜಂಗಮದ ಪ್ರಸಾದವಿಲ್ಲದೆ
ಲಿಂಗದ ಪ್ರಸಾದವ ಕೊಳಲಾಗದು ವೀರಮಾಹೇಶ್ವರರು,
ಕೂಡಲಸಂಗಮದೇವಾ. ॥ ೨೩೬

೧೧೯೭

ಜಂಗಮವೆ ಲಿಂಗವೆಂಬ ಭಾವ ಫಲಿಸಿದಡೆ ಇಂದಿನ ಪುಣ್ಯಕ್ಕೆ ಸರಿಯುಂಟೆ?
ಲಿಂಗದ ಒಡಲ ಮನೆಮಾಡಿಪ್ಪ ಜಂಗಮವೆನ್ನ ಕಣ್ಣಮುಂದೆ ಸುಳಿದಡೆ
ಇಂದೆನ್ನ ಭಾಗ್ಯಕ್ಕೆ ಕಡೆಯಿಲ್ಲ.
ಆ ಜಂಗಮವೆ ದಿಟಕ್ಕೆನ್ನ ಮನೆಗೆ ಬಂದಡೆ
ಸಲುಗೆಯ ವರವ ಪಡೆವೆನು ಕಾಣಾ,
ಕೂಡಲಸಂಗಮದೇವರಲ್ಲಿ
ಚೆನ್ನಬಸವಣ್ಣಾ, ನೀನಹುದೆನಲಿಕೆ. ॥ ೨೩೭

೧೧೯೮

ಜಂಗಮಸೇವೆಯೆ ಗುರುಪೂಜೆಯೆಂದರಿದ,
ಜಂಗಮಸೇವೆಯೆ ಲಿಂಗಪೂಜೆಯೆಂದರಿದ,
ಜಂಗಮಸೇವೆಯೆ ತನ್ನಿರವೆಂದರಿದ,
ಜಂಗಮಸೇವೆಯೆ ತನ್ನ ನಿಜವೆಂದರಿದ,
ಜಂಗಮಸೇವೆಯೆ ಸ್ವಯವೆಂದರಿದ,

ಜಂಗಮಸೇವೆಯೆ ನಿತ್ಯಪದವೆಂದರಿದ.
ಇದು ಕಾರಣ, ನಮ್ಮ ಕೂಡಲಸಂಗಮದೇವರಲ್ಲಿ
ಜಂಗಮಪ್ರಾಣಿಯಾದ ಚಂದಯ್ಯನ ಹಳೆಮಗನಾಗಿ,
ಆತನ ಶ್ರೀಚರಣಕ್ಕೆ ಶರಣೆಂದು ಶುದ್ಧನು,
ಆ ಮಹಾಮಹಿಮನ ಘನವ ನಾನೆತ್ತ ಬಲ್ಲೆನಯ್ಯಾ ಪ್ರಭುವೆ? ೨೩೮

೧೧೯೯

ಜಗತ್ತೆಂಬ ಯಂತ್ರದ ಹಾಹೆ ಹೇಂಗೆಂದರಿಯಲು
ಅಜ್ಞಾನವೆಂಬ ತುಷದ ಚೋಹವ ತೊಡಿಸಿ,
ಅಹಂ ಮಮತೆಯೆಂಬ ಸೊಕ್ಕ ಸಿಕ್ಕಿ, ಬಾರದ ಭವದ ಬಟ್ಟೆಯಲ್ಲಿ ಬರಿಸಿ,
ಕಾಣದ ಕರ್ಮ ದುಃಖವ ಕಾಣಿಸಿ, ಉಣ್ಣದ ಅಪೇಯವನುಣಿಸಿ,
ಮಾರಾರಿ ವಿನೋದಿಸಿದೆಯಯ್ಯಾ, ಕೂಡಲಸಂಗಮದೇವಾ. ॥ ೨೩೯ ॥

೧೨೦೦

ಜಗತ್ರಯದ ಹೊ[ಲೆ]ಯನೆಲ್ಲವನು ಉದಕ ಒಳಕೊಂಬುವುದು.
ಉದಕದ ಪೂರ್ವಾಶ್ರಯವ ಕಳೆವನಾರಳವಲ್ಲ. ಅದೆಂತೆಂದಡೆ:
ಯದಾ ಪೃಥ್ವಿತ್ರಯಾಣಾಂ ಚ ತದಾ ಜಲಂ ನಿರ್ಮಲಿನಕಂ ।
ಮಹಾಲಿಂಗಂ ತು ಪೂಜಾನಾಂ ವಿಶೇಷಂ ಪಾಕಂ ಭವೇತ್
ಎಂದುದಾಗಿ. ಅದಕ್ಕೆ ಮತ್ತಂ:
ಪ್ರಥಮಂ ಮಾಂಸತೋಯಾನಾಂ ದ್ವಿತೀಯಂ ಮಾಂಸಗೋರಸಃ
ತೃತೀಯಂ ಮಾಂಸನಾರೀಣಾಂ ತಸ್ಯ ತೈಲಂ ವಿಧೀಯತೇ ॥ ಎಂದುದಾಗಿ,
ಯಥಾ ಉದಕದಿಂದಲಿ ಅಗ್ನಿಯಿಂದಲಿ
ಪಾಕವಾದ ದ್ರವ್ಯಪದಾರ್ಥಂಗಳೆಲ್ಲವು
ಜೀವಮಯವೆಂದು ಹೇಳುತ್ತಿರ್ದವಾಗಿ,
ಆ ದೋಷದಿಂದಲಾದ ಭೋಜನವನು
ಲಿಂಗಕ್ಕೆ ಸಮರ್ಪಿಸಲಾಗದು. ಅದೆಂತೆಂದಡೆ:
ಭೂಮಿದ್ರವ್ಯಂ ಯಥಾ ಮಾಂಸಂ ಪ್ರಾಣಿದ್ರವ್ಯಂ ಯಥಾ ಮಧುಃ
ಸರ್ವಭೂತಮಯೋ ಜೀವಂ ಜೀವೋ ಜೀವೇನ ಭಕ್ಷಿತಂ ॥ ಎಂದುದಾಗಿ
ಇಂತು ಉದಕದ ಪೂರ್ವಾಶ್ರಯವು, ಭೋಜನದ ಪೂರ್ವಾಶ್ರಯವು,
ಹೇಗೆ ಹೋಹುದಯ್ಯಾ ಎಂದಡೆ:
ಉದಕದ ಪೂರ್ವಾಶ್ರಯವು [illegible] ಹೋಯಿತ್ತು,
ಭೋಜನದ ಪೂರ್ವಾಶ್ರಯವು [illegible] ಪ್ರಸಾದದ [illegible] ಹೋಯಿತ್ತು.
ಇದು ಕಾರಣ, ಈ ವರ್ಮ [illegible]

ಪ್ರಭುದೇವರ ವಳಿ ಬಸವಣ್ಣನ ವಂಶಕ್ಕಲ್ಲದೆ
ಮತ್ತಾರಿಗೂ ಅಳವಡದು ಕಾಣಾ ಕೂಡಲಸಂಗಮದೇವಾ. ॥ ೨೪೦ ॥

೧೨೦೧

ಜನನವಿಲ್ಲದ ಜನಿತನು ನೀನು ನೋಡಯ್ಯಾ,
ಜನಿಯಿಸಿ ಸಂಸಾರವನರಿಯದ ನಿರ್ವಿಕಾರಿ ನೀನು ನೋಡಯ್ಯಾ,
ಭವಬಂಧನಗಳಿಲ್ಲದ ನಿತ್ಯನಿಜತತ್ವವು ನೀನು ನೋಡಯ್ಯಾ,
ನಿನ್ನ ಚರಣಸೇವೆಯ ಮಾಡಿ, ಎನ್ನ ಭವ ಹರಿಯಲೆಂದಿಪ್ಪೆನಲ್ಲದೆ,
ನಿಮ್ಮ ಘನವೆಂತೆಂದು ಅರಿಯೆ ನೋಡಯ್ಯಾ.
ಕೂಡಲಸಂಗಮದೇವಾ,
ನೀನು ಕೊಂಡಾಡಲಾನು ಪ್ರಾಪ್ತನೆ ಹೇಳಾ ಪ್ರಭುವೆ. ॥ ೨೪೧ ॥

೧೨೦೨

ಜನನಸೂತಕ, ಕುಲಸೂತಕ, ರಜಃಸೂತಕ, ಎಂಜಲಸೂತಕ, ಪ್ರೇತಸೂತಕ
ಎಂಬಿವಾದಿಯಾದ ಸರ್ವಸೂತಕಂಗಳು
ಅಂಗಲಿಂಗ ಸಂಬಂಧಿಗಳಾದ ಲಿಂಗಭಕ್ತರಿಗಿಲ್ಲ ನೋಡಾ, ಅದೆಂತೆಂದೊಡೆ:
ಆದಿಬಿಂದುರ್ಭವೇದ್ಬೀಜಂ ಬೀಜಮಧ್ಯಸ್ಥಿತಂ ಕುಲಂ ।
ಬೀಜಂ ನಾಸ್ತಿ ಕುಲಂ ನಾಸ್ತಿ ತಸ್ಮೈ ಶಿವಕುಲಂ ಭವೇತ್ ॥ ಎಂದುದಾಗಿ,
ಪೂರ್ವಾಚಾರವನಳಿದು ಪುನರ್ಜಾತನಾಗಿ,
ಅಂಗದ ಮೇಲೆ ಲಿಂಗಸಾಹಿತ್ಯನಾದ ಭಕ್ತಂಗೆ
ಜನನಸೂತಕವೆಂಬುದೆ ಪಾತಕ ನೋಡಾ
ಶಿವಭಕ್ತರಾದ ಬಳಿಕ ಭವಿನೇಮಸ್ತರ ಕಳೆದು
ಶಿವಕುಲವೆ ಕುಲವಾದ ಭಕ್ತರಿಗೆ ಕುಲಸೂತಕವೆಂಬುದೆ ಪಾತಕ ನೋಡಾ,
ಗುರುಪಾದತೀರ್ಥ, ಲಿಂಗಪಾದತೀರ್ಥ, ಜಂಗಮಪಾದತೀರ್ಥ ಆದಿಯಾದ
ಲಿಂಗೋದಕ, ಪಾದೋದಕ, ಪ್ರಸಾದೋದಕ ಎಂಬ ತ್ರಿವಿಧೋದಕದಲ್ಲಿ
ಸರ್ವಪಾಕಪ್ರಯತ್ನ, ನಾನಾ ಕ್ರಿಯಾವಿಧಾನ, ಸ್ನಾನಪಾನಂಗಳಿಂದ
ಬಾಹ್ಯಾಭ್ಯಂತರಂ ಶುಚಿಯಾದ, ಶುದ್ಧನಿರ್ಮಲದೇಹಿಯಾದ ಭಕ್ತಂಗೆ
ರಜಃಸೂತಕವೆಂಬುದೆ ಪಾತಕ ನೋಡಾ.
ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಯುಕ್ತವಾದ ಸದಾಸನ್ನಹಿತ ಭಕ್ತಂಗೆ
ಎಂಜಲಸೂತಕವೆಂಬುದೆ ಪಾತಕ ನೋಡಾ.
ಗುರುವಿನಿಂ ಜನನ, ಚರಲಿಂಗದಿಂ ಸ್ಥಿತಿ,
ಪರಮಪಾವನ ಘನಮಹಾಲಿಂಗದೊಳೈಕ್ಯ. ಅದೆಂತೆಂದೊಡೆ:

ಸದ್ಗುರುಪಾಣಿಜಾತಸ್ಯ ಸ್ಥಿತೇ ಸದ್ಭಕ್ತಸಂಗಿನಾಂ।
ಲೀಯತೇ ಚ ಮಹಾಲಿಂಗೀ ವೀರಶೈವೋತ್ತಮೋತ್ತಮಃ॥ ಎಂದುದಾಗಿ,
ನಿಜಲಿಂಗೈಕ್ಯವಾದ ಸದ್ಭಕ್ತಂಗೆ
ಪ್ರೇತಸೂತಕವೆಂಬುದೆ ಪಾತಕ ನೋಡಾ.
ಇಂತೀ ಪಂಚಸೂತಕವನುಳ್ಳ ಪಾತಕಂಗಳ
ಪಂಚಾಚಾರಯುಕ್ತನಾದ ಸದ್ಭಕ್ತಂಗೆ ಕಲ್ಪಿಸುವ
ಪಂಚಮಹಾಪಾತಕರ ಅಘೋರ ನರಕದಲ್ಲಿಕ್ಕುವ ಕೂಡಲಸಂಗಯ್ಯ. ॥ ೨೪೨ ॥

೧೨೦೩

ಜಿಹ್ವೆ ಗುರು, ಕಂಗಳು ಲಿಂಗ, ನಾಸಿಕವಾಚಾರ,
ಹಸ್ತ ಜಂಗಮ, ಶ್ರೋತ್ರ ಪ್ರಸಾದ.
ಈ ಪಂಚಾಚಾರಸಂಜ್ಞೆಯನು,
ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಯೋಗಸಂಜ್ಞೆಯನೆನಗೆ
ನೀ ಕರುಣಿಸಲಾಯಿತ್ತು, ಕೂಡಲಸಂಗಮದೇವಾ. ॥ ೨೪೩ ॥

೧೨೦೪

ಜ್ಞಾನ ಬಾ, ಮಾಯೆ ಹೋಗೆಂದು ಕಳುಹುತ್ತಿದ್ದೇನೆ,
ಅರಿವು ಬಾ, [ಮರೆವು ಹೋಗೆಂ]ದು ಕಳುಹುತ್ತಿದ್ದೇನೆ,
ನಿಃಕಲ ಬಾ, ಸಕಲ ಹೋಗೆಂದು ಕಳುಹುತ್ತಿದ್ದೇನೆ,
ನಿಃಪ್ರಪಂಚ ಬಾ, ಪ್ರಪಂಚ ಹೋಗೆಂದು ಕಳುಹುತ್ತಿದ್ದೇನೆ.
ಕೂಡ[ಲ ಸಂಗ]ಮದೇವರಲ್ಲಿ ಬಸವಣ್ಣನ ಬಲ್ಲವರನೊಳಗೆ ಕೂಡಿ
ಅರಿಯದವರ ಹೊರಗೆ ತಡವುತ್ತಿದ್ದೇನೆ. ॥ ೨೪೪ ॥

೧೨೦೫

ತನು ದೊರೆಕೊಂಡಡೆ ಮನ ದೊರೆಕೊಳ್ಳದು,
ಮನ ದೊರೆಕೊಂಡಡೆ ತನು ದೊರೆಕೊಳ್ಳದು,
ತನುಮನ ದೊರೆಕೊಂಡಡೆ ಧನ ದೊರೆಕೊಳ್ಳದು,
ತನುಮನಧನ ದೊರೆಕೊಂಡಡೆ ಸತಿಸುತರೆಡೆಯಾಟ ದೊರೆಕೊಳ್ಳದು,
ಸತಿಸುತರೆಡೆಯಾಟ ದೊರೆಕೊಂಡಡೆ
ಜಂಗಮಕ್ಕೆ ಮಾಡುವ ವರ್ಮ ದೊರೆಕೊಳ್ಳದಯ್ಯಾ,
ಕೂಡಲಸಂಗಮದೇವಾ. ॥ ೨೪೫ ॥

೧೨೦೬

ತನುಮುಟ್ಟಿದ ಭಕ್ತಿಗೆ ತನುವೆ ಅರ್ಪಿತ,
ಮನಮುಟ್ಟಿದ ಭಕ್ತಿಗೆ ಮನವೆ ಅರ್ಪಿತವಯ್ಯಾ,
ಎನ್ನ ತನುಮನವೆರಡು ನಿಮ್ಮ ಚರಣಕ್ಕೆ ವೇದ್ಯ ನೋಡಯ್ಯ.
ಅದೆಂತೆಂದಡೆ:
ದೀರ್ಘದಂಡನಮಸ್ಕಾರಂ ನಿರ್ಲಜ್ಜೋ ಗುರುಸನ್ನಿಧೌ।
ಶರೀರಮರ್ಥಪ್ರಾಣಂ ಚ ಸದ್ಗುರುಭ್ಯೋ ನಿವೇದಯೇತ್॥
ಎಂದುದಾಗಿ, ತ್ರಾಹಿ ತ್ರಾಹಿ ಶರಣಾರ್ಥಿ ಶರಣಾರ್ಥಿ
ನೀವೆ ಬಲ್ಲಿರಿ, ಕೂಡಲಸಂಗಮದೇವಪ್ರಭುವೆ. ॥ ೨೪೬ ॥

೧೨೦೭

ತನುವ ಕೊಟ್ಟೆನೆಂದು ನುಡಿದು, ಗುರುವಚನಕ್ಕೆ ದೂರವಾದೆ,
ಮನವ ಕೊಟ್ಟೆನೆಂದು ನುಡಿದು, ಲಿಂಗಮುಖಕ್ಕೆ ದೂರವಾದೆ,
ಧನವ ಕೊಟ್ಟೆನೆಂದು ನುಡಿದು, ಜಂಗಮಮುಖಕ್ಕೆ ದೂರವಾದೆ.
ಕೂಡಲಸಂಗಮದೇವಯ್ಯಾ,
ನಿಮಗೆ ಮಾಡಿದೆನೆಂದು ನುಡಿದು ಕೆಟ್ಟ ಕೇಡಿಂಗೆ ಕಡೆಯಿಲ್ಲ. ॥ ೨೪೭ ॥

೧೨೦೮

ತನುವ ಬೇಡಿದಡೀವೆ, ಮನವ ಬೇಡಿದಡೀವೆ,
ಧನವ ಬೇಡಿದಡೀವೆ ನಿಮ್ಮ ಶರಣಂಗೆ.
ಎನಗೆ ಬೇಕೆಂಬ ಭಾವ ಮನದಲ್ಲಿ ಹೊಳೆದಡೆ
ಘನಮಹಿಮ, ನಿಮ್ಮ ಪಾದದಾಣೆ.
ಮನ ವಚನ ಕಾಯದಲ್ಲಿ ನೀವಲ್ಲದೆ ಮತ್ತೊಂದನರಿದಡೆ
ಕೂಡಲಸಂಗಮದೇವಾ, ಭವ ಘೋರದಲ್ಲಿಕ್ಕಯ್ಯಾ. ॥ ೨೪೮ ॥

೧೨೦೯

ತನುವಿಡಿದಿಹುದು ಪ್ರಕೃತಿ, ಪ್ರಕೃತಿವಿಡಿದಿಹುದು ಪ್ರಾಣ,
ಪ್ರಾಣವಿಡಿದಿಹುದು ಜ್ಞಾನ, ಜ್ಞಾನವಿಡಿದಿಹುದು ಗುರು.
ಇಂತೀ ಗುರುಲಿಂಗಜಂಗಮಪ್ರಸಾದವ
ಸಗುಣವೆಂದು ಹಿಡಿದು ನಿರ್ಗುಣವೆಂದು ಕಂಡ
ಸಂದೇಹಿ ವ್ರತಗೇಡಿಗಳನೇನೆಂಬೆ?
ಅಂತವರ ಮುಖವ ತೋರದಿರು ಕೂಡಲಸಂಗಮದೇವಾ. ॥ ೨೪೯ ॥

೧೨೧೦

ತನುವೆಂತಿರ್ದಡೇನಯ್ಯಾ ಮನ ನಿರ್ಮಳವಾಗಿರ್ದಡೆ ಸಾಲದೆ?
ಎಂತಿರ್ದಡೇನು ಲಿಂಗಭಕ್ತ? ಎಂತಿರ್ದಡೇನು ಲಿಂಗಶರಣ?
ಎಂತಿರ್ದಡೇನು ನೋಡಯ್ಯಾ.
ಶಿಶು ನೊಂದಡೆ ತಾಯಿ ನೊಂದಂತೆ ಕೂಡಲಸಂಗಮದೇವಾ. ॥ ೨೫೦ ॥

೧೨೧೧

ತಾನಿಲ್ಲದೆ ತಾ ಮಾಡುವ ಸಹಜನು, ತಾನಿಲ್ಲದೆ ತಾ ನೀಡುವ ಸಹಜನು,
ತಾ ಬೇರಿಲ್ಲದೆ ಬೆರಸಿಹ ನಿಜಪದದೊಳು.
ಏನೊಂದರ ಹಮ್ಮಿಲ್ಲ[ದ] ಸಹಜ ಸುಜ್ಞಾನಿಯ
ಮಾಟದ ಕೂಟದ ಸ್ಥಲದೊಳು ಕೂಡಿಹ
ಕೂಡಲಸಂಗನನದೇನೆಂದುಪಮಿಸುವೆ. ॥ ೨೫೧ ॥

೧೨೧೨

ತಾ ಸವಿದಲ್ಲದೆ ಆ ಸವಿಯ ಲಿಂಗಕ್ಕರ್ಪಿಸಲಾಗದು.
ಅದೇನು ಕಾರಣವೆಂದಡೆ,
ಆ ಲಿಂಗವು ಕಹಿ–ಸಿಹಿಯರಿಯದಾಗಿ.
ಇದು ಕಾರಣ,
ಕಹಿ ಎಂದು ಕಳೆದು, ಸಿಹಿ ಎಂದು ಕೊಂಡಡೆ,
ಕೊಂಡುದು ಕಿಲ್ಬಿಷ, ಕೂಡಲಸಂಗಮದೇವಾ. ॥ ೨೫೨ ॥

೧೨೧೩

ತಿಂಬ ಗಂದೆಯ ಮೇಲೆ ಉಗುರು ಬಿದ್ದಂತಾಯಿತು,
ಎನ್ನ ಹಿಂದನೆಚ್ಚರಿಸಿ, ಮುಂದಣ ಸ್ಥಿತಿಗತಿಯನರುಹಿ,
ಸಂದೇಹವ ಬಿಡಿಸಿದೆ.
ಎನ್ನ ಕಂದುಕಲೆಯ ಕಳೆವ ತಂದೆ ನೀನಿರುತ್ತಿರಲು,
ಎನಗಿನ್ನಾವ ದಂದುಗವೂ ಇಲ್ಲ ನೋಡಾ.
ಬಂದ ಕಾರ್ಯದ ಹದನಿನ್ನೆಂದು ಸಯವಪ್ಪುದು?
ಕೂಡಲಸಂಗಮದೇವರು ಎನ್ನನಿತ್ತ ಬಾರೆಂಬ
ಕಾಲವ ತಿಳುಹಾ, ಚೆನ್ನಬಸವಣ್ಣಾ. ॥ ೨೫೩ ॥

೧೨೧೪

ತಿರುಕರೆನ್ನದಿರಿ ಭೋ! ಎನ್ನ ತಂದೆಗಳನು,
ತಿರುಕರೆನ್ನದಿರಿ ಭೋ! ಎನ್ನ ಬಂಧುಗಳನು,
ತಿರುಕರೆನ್ನದಿರಿ ಭೋ! ಎನ್ನ ದೇವರನು,
ತಿರುಕರೆನ್ನದಿರಿ ಭೋ! ಎನ್ನ ಒಡೆಯರನು.
ದೇಹಿ ಎಂದಡೆ ನಾಸ್ತಿ ಎಂಬವರ
ಬೇಹು ನೋಡಬಂದ ಕಾಣಾ, ಕೂಡಲಸಂಗಮದೇವ. ॥ ೨೫೪ ॥

೧೨೧೫

ತೊಂಡಿಲ ಮುಡಿದುಕೊಂಡು
ತಮ್ಮ ತಮ್ಮ ಗಂಡರ ಹಿಂದುಗೊಂಡು
ನಾಡ ಮಿಂಡರ ನೋಡುತ್ತಲಿ
ಇಂದು ನಮ್ಮ ಹುಲಿ ಹೋಯಿತ್ತು ಬನ್ನಿರೆ.
ಗಂಡರ ಗಂಡನವ್ವಾ ಕೂಡಲಸಂಗ,
ಕಂಡಡೆ ಮೂಗ ಕೊಯಿವಾ. ॥ ೨೫೫ ॥

೧೨೧೬

ತೊತ್ತಿನ ತೊತ್ತಿನ ಮರುದೊತ್ತಿನೊಡನೆ
ಮುನಿವುದು ನಿಮಗೆ ಗುಣವೆ?
ಅಯ್ಯಾ ಅಯ್ಯಾ, ನಿಮ್ಮ ಧರ್ಮದವ ನಾನಯ್ಯಾ.
ಒಮ್ಮಿಂಗೆ ಕೃಪೆಮಾಡಿ ಕರುಣಿಸಯ್ಯಾ.
ಕೂಡಲಸಂಗಮದೇವಾ,
ಇಲಿಗಂಜಿ ಮನೆ ಸುಡುವರುಂಟೆ? ॥ ೨೫೬ ॥

೧೨೧೭

ತೊರೆಯುದಕವ ಕೆರೆಯುಂಡು ತೃಪ್ತವಾಗಲು
ಆ ಕೆರೆಯುದಕವ ಹಲವು ಕೆಲವು ಸ್ಥಾವರ ಜಂಗಮಗಳುಂಡು ತೃಪ್ತಿವಡೆವಂತೆ,
ಪ್ರಭುದೇವರ ತೃಪ್ತಿ ಅಸಂಖ್ಯಾತಮಹಾಗಣಂಗಳೆಲ್ಲಕ್ಕೆ ತೃಪ್ತಿಯಾಯಿತ್ತು ನೋಡಾ.
ಬಸುರುವೆಂಡತಿ ಉಂಡಲ್ಲಿ ಒಡಲ ಶಿಶು ತೃಪ್ತಿಯಾದಂತೆ,
ಸಚರಾಚರವೆಲ್ಲವು ತೃಪ್ತಿಯಾದವು ನೋಡಾ.
ಕೂಡಲಸಂಗಮದೇವಾ,

ನಿಮ್ಮ ಶರಣ ಪ್ರಭುದೇವರ ಪ್ರಸಾದಮಹಿಮೆಗೆ
ನಮೋ ನಮೋ ಎಂಬೆನು. ॥ ೨೫೭ ॥

೧೨೧೮

ತೋರಲಿಲ್ಲದ ಸಿಂಹಾಸನದ ಮೇಲೆ
ಹೇಳಬಾರದ ಘನವು ಬಂದೆರಗಿದಡೆ,
ತೋರಿ ಮೆರೆವ ಸಂಗಮನಾಥನು ಎದ್ದು ಹೋದನು.
ನೀಡ ನೀಡ ಸಯದಾನವೆಲ್ಲವೂ ನಿರ್ವಯಲಾಯಿತ್ತು,
ಮಾಡಮಾಡ ಸಯದಾನವ ಮರಳಿನೋಡಲಿಲ್ಲ.
ಇದನೇನ ಹೇಳುವೆ ಅನಿಯಮ ಚರಿತ್ರವನು?
ಇದೆಂತುಪಮಿಸುವೆನು ವಿಸ್ಮಯವನು?
ಕೂಡಲಸಂಗಮದೇವರ ತೃಪ್ತಿಯ ತೆರನ ಬಲ್ಲಡೆ
ಹೇಳಯ್ಯಾ, ಚೆನ್ನಬಸವಣ್ಣಾ. ॥ ೨೫೮ ॥

೧೨೧೯

ತೋರುವನಯ್ಯಾ ಶಿವನು, ಅಡಗುವನಯ್ಯಾ ಶಿವನು.
ಕಂಗಳ ಮುಂದೆ ಕಾಯಗೊಂಡು,
ಮನದ ಮುಂದೆ ಕನಸಾಗಿ ಕಾಡುವನಯ್ಯಾ ಶಿವನು,
ಒಂದೆಡೆಯಲ್ಲಿದ್ದು ಹಲವೆಡೆಯಲ್ಲಿ ತೋರುವನು,
ಹಲವೆಡೆಯಲ್ಲಿದ್ದು ಒಂದೆ ರೂಪಾಗಿಪ್ಪನು.
ಕೂಡಲಸಂಗಮದೇವನು ಚಿನುಮಯನಾಗಿ,
ಎನಗೆ ಅಸಾಧ್ಯವಾದನು. ॥ ೨೫೯ ॥

೧೨೨೦

ತ್ರಿವಿಧವನಿತ್ತು, ರೂಹು ಮಾತು ಬಳಿಕುಂಟೆ ಅಯ್ಯಾ?
ತನುವ ಕೊಡೆನಾಗಿ ಇದಿರುತ್ತರವಿದೆ,
ಮನವ ಕೊಡೆನಾಗಿ ಆನೆಂಬಹಂಕಾರವಿದೆ,
ಧನವ ಕೊಡೆನಾಗಿ ಪ್ರಪಂಚಿನ ಬಳಕೆಯಿದೆ.
ಕೂಡಲಸಂಗಮದೇವಯ್ಯಾ, ಎಂತು ಭಕ್ತನಪ್ಪೆನು? ॥ ೨೬೦ ॥

೧೨೨೧

ತ್ರಿವಿಧೋದಕದ ವಿವರವೆಂತೆಂದಡೆ:
ಲಿಂಗೋದಕ, ಪಾದೋದಕ, ಪ್ರಸಾದೋದಕ–
ಲಿಂಗೋದಕವೆಂದು ಶಿವಮಂತ್ರಸುಸ್ಕಾರದಿಂದಾದುದು,
ಪಾದೋದಕವೆಂದು ಲಿಂಗಕ್ಕೆ ಮಜ್ಜನಕ್ಕೆರೆದುದು,
ಪ್ರಸಾದೋದಕವೆಂದು ಲಿಂಗಕ್ಕೆ ಆರೋಗಣೆಯಂ ಮಾಡಿಸಿದುದು.
ಇಂತಿ ತ್ರಿವಿಧೋದಕವ ಧರಿಸುವ ಕ್ರಮವೆಂತೆಂದಡೆ:
ಲಿಂಗೋದಕದಲ್ಲಿ ಪಾಕಪ್ರಯತ್ನ ಮಜ್ಜನಾದಿಗಳಂ ಮಾಡೂದು,
ಪಾದೋದಕಮಂ ಶಿರಸ್ಸಿನ ಮೇಲೆ ತಳಿದು
ಮುಖಮಂ ಪ್ರಕ್ಷಾಲನಮಂ ಮಾಡೂದು,
ಪ್ರಸಾದೋದಕಮಂ ಆರೋಗಣೆಯಂ ಮಾಡೂದು
ಕೂಡಲಸಂಗಯ್ಯನಲ್ಲಿ ಸದ್ಭಕ್ತನಾದಡೆ. || ೨೬೧ ||

೧೨೨೨

ದಶವಿಧಪಾದೋದಕವೆಸಗಿದ[ರೆಸ]ಕ ಎಂತೆಂದಡೆ:
ಗುರುಲಿಂಗಜಂಗಮ ಪಾದೋದಕ ಪ್ರಸಾದ ವಿಭೂತಿ
ರುದ್ರಾಕ್ಷಿ ಪಂಚಾಕ್ಷರಿ ಗಣವ್ರತನೇಮ ಆಚಾರ
ಶೀಲ ಸಂಬಂಧದೊಳಗು ಹೊರಗು ತ್ರಿವಿಧ ಸಂಪೂರ್ಣವಾದ ಕಾರಣ
ನಿತ್ಯಪಾದೋದಕವೆನಿಸಿತ್ತು ಕೂಡಲಸಂಗಮದೇವಪ್ರಭುವೆ. || ೨೬೨ ||

೧೨೨೩

ದಾಸೀಪುತ್ರನಾಗಲಿ, ವೇಶ್ಯಾಪುತ್ರನಾಗಲಿ
ಶಿವದೀಕ್ಷೆಯಾದ ಬಳಿಕ ಸಾಕ್ಷಾತು ಶಿವನೆಂದು ವಂದಿಸಿ, ಪೂಜಿಸಿ,
ಪಾದೋದಕ ಪ್ರಸಾದವ ಕೊಂಬುವೆ ಯೋಗ್ಯ.
ಹೀಗಲ್ಲದೆ ಉದಾಸೀನವ ಮಾಡಿ ಬಿಡುವವರಿಗೆ
ಪಂಚಮಹಾಪಾತಕ ನರಕ ಕಾಣಾ,
ಕೂಡಲಸಂಗಮದೇವಾ. || ೨೬೩ ||

೧೨೨೪

ದಿಟವ ನುಡಿವುದು, ನುಡಿದಂತೆ ನಡೆವುದು.
ಹುಸಿಯು ನಡೆದು ತಪ್ಪುವ ಪ್ರಪಂಚಿಯನೊಲ್ಲ
ಕೂಡಲಸಂಗಮದೇವ. || ೨೬೪ ||

೧೨೨೫

ದೇವ ದೇವ ಮಹಾಪ್ರಸಾದ, ಅವಧರಿಸಯ್ಯಾ ಎನ್ನ ಬಿನ್ನಹವ:
ಅತಳ, ವಿತಳ, ಸುತಳ, ರಸಾತಳ, ತಳಾತಳ,
ಮಹಾತಳ, ಪಾತಾಳಾದಿ ಲೋಕದಿಂದತ್ತತ್ತ ನಿಮ್ಮ ಶ್ರೀಚರಣ.
ಭೂಲೋಕ ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ,
ಜನರ್ಲೋಕ, ತಪೋಲೋಕ, ಸತ್ಯಲೋಕದಿಂದತ್ತತ್ತ ನಿಮ್ಮ ಉತ್ತಮಾಂಗ,
ತರುವಿನೊಳಗೆ ಅನಲ ಭರಿತನಾಗಿರ್ದು
ಮಥನದಿಂದ ತೋರಿ ಆಹುತಿಗೊಂಬಂತೆ,
ಸರ್ವಕರ್ತೃ ನಿತ್ಯಾನಂದಮಯನೆ, ಭಕ್ತಲೀಲಾವಿನೋದನೆ,
ಕೂಡಲಸಂಗಮದೇವಾ,
ಸುಚಿತ್ತದಲ್ಲಿ ಮನವೊಸಲಬೋನವನಾರೋಗಿಸಯ್ಯಾ. || ೨೬೫ ||

೧೨೨೬

ದೇವ ದೇವ ಮಹಾಪ್ರಸಾದ!
ಅವಧರಿಸು ದೇವಾ ಎನ್ನ ಬಿನ್ನಹವ:
ಕಾಯದ ಮಾಯದ ಸಡಗರದಲ್ಲಿ ಹುಟ್ಟಿಸಿದಿರಿ ಎನ್ನ,
ಅದು ನಿಮ್ಮ ಲೀಲಾವಿನೋದ.
ಆ ಕಾಯದ ಮಾಯದ ತಲೆಯ ಚಿಪುಟಿ ಶ್ರೀಗುರುಕಾರುಣ್ಯವ ಮಾಡಿ
ಗುರುಲಿಂಗಜಂಗಮ ತ್ರಿವಿಧಭಕ್ತಿಯ ಘನವ ತೋರಿ
ನಿಮ್ಮ ಪಾದೋದಕ ಪ್ರಸಾದವನಿತ್ತು ರಕ್ಷಿಸಿದಿರಿ,
ಅದು ನಿಮ್ಮ ಲೀಲಾವಿನೋದ.
ಪರವಾದಿ ಬಿಜ್ಜಳ ಒರೆಗಲ್ಲಾದಲ್ಲಿ
ಮುನ್ನೂರರ್‍ರವತ್ತು ಸತ್ತ ಪ್ರಾಣವನೆತ್ತಿ,
ಮೂವತ್ತಾರು ಕೊಂಡೆಯರ ಪರಿಹರಿಸಿ,
ಎಂಬತ್ತೆಂಟು ಪವಾಡವ ಮೆರೆದಿರಿ,
ಅದು ನಿಮ್ಮ ಲೀಲಾವಿನೋದ.
ಎನ್ನ ಮನದ ಮಲಿನವ ತೊಳೆಯಲೆಂದು ಬಂದು,
ಶೂನ್ಯಸಿಂಹಾಸನದ ಮೇಲೆ ಮೂರ್ತಿಗೊಂಡು,
ನಿಮ್ಮ ನಿಜ ಮಹಿಮೆಯನೆಲ್ಲಾ ಪ್ರಮಥರ ಮುಂದೆ ತೋರಿ,
ಎನ್ನ ಪಾವನವ ಮಾಡಿ,
ಷಡುಸ್ಥಲಮಂ ಎನ್ನ ಸರ್ವಾಂಗದಲ್ಲಿ ಪ್ರತಿಷ್ಠಿಸಿ,
ಎನ್ನ ನಿಮ್ಮಂತೆ ಮಾಡಿದಿರಿ,

ಅದು ನಿಮ್ಮ ಲೀಲಾವಿನೋದ.
ಕೂಡಲಸಂಗಮದೇವಾ,
ಎನ್ನ ವರ್ಮದ ಸಕೀಲವ ನೀವೆ ಬಲ್ಲಿರಾಗಿ
ಎನಗೊಮ್ಮೆ ತಿಳುಹಿಕೊಟ್ಟು ಎನ್ನನುಳುಹಿಕೊಳ್ಳಾ ಪ್ರಭುವೆ. ॥ ೨೬೬ ॥

೧೨೨೭

ದೇವ ದೇವ ಮಹಾಪ್ರಸಾದ!
ನಿಮ್ಮಡಿಗಳೆಂದಂತೆಯಲ್ಲದೆ ಎನಗೆ ಬೇರೆ ಸ್ವತಂತ್ರವುಂಟೆ?
ದರ್ಪಣದೊಳಗಣ ಪ್ರತಿಬಿಂಬವ ನೋಡುವ ಮುಖಕ್ಕೆ
ಭಿನ್ನಭಾವವುಂಟೆ?
ಚರಿಸಿ ಬಪ್ಪ ಅನಂತ ಸುಳುಹಿನೊಳಗೆ ನೀನೊಬ್ಬನೆ,
ನಿನ್ನೊಳಗೆ ಅನಂತ ಸುಳುಹು ಅಡಗಿದವು.
ನಿಮಗೆ ಮಾಡಿದ ಸಯದಾನವ ನಿಮಗೆ ನೀಡುವೆನು,
ಅವಧರಿಸಬೇಕಯ್ಯಾ, ಕೂಡಲಸಂಗಮದೇವಾ. ॥ ೨೬೭ ॥

೧೨೨೮

ದೇವ ದೇವ ಮಹಾಪ್ರಸಾದ!
ನೀವೆಂದಂತೆ ನಿಮ್ಮ ಚರಣದಲ್ಲಿ ಸಂದು ಭೇದವಿಲ್ಲದೆ ಇಪ್ಪೆನಲ್ಲದೆ
ಬೇರೆ ಭಿನ್ನವಾಗಿರ್ದನಾದಡೆ ನೀವೆ ಸಾಕ್ಷಿ,
ನಿಮ್ಮ ಶ್ರೀಪಾದವ ಕಂಡೆನ್ನ ಭವಂ ನಾಸ್ತಿಯಾಯಿತ್ತು.
ಕೂಡಲಸಂಗಮದೇವಾ,
ನಿಮ್ಮಿಂದೊಂದಾಶ್ಚರ್ಯವಿಲ್ಲವೆಂದು ಶ್ರುತಿಗಳು ಪೊಗಳುತ್ತಿರಲಾಗಿ
ನೀವು ಕಂಡ ಆಶ್ಚರ್ಯವಾವುದೆನಗೊಮ್ಮೆ ನಿರೂಪಿಸಾ ಪ್ರಭುವೆ. ॥ ೨೬೮ ॥

೧೨೨೯

[ದೇ]ವರ ಪಾದಕ್ಕೆ ಸಂದಲ್ಲಿ
ಆತನ ಶರೀರವ ಸಮಾಧಿಯಲ್ಲಿ ನಿಕ್ಷೇಪವಂ ಮಾಡಿ
ಲಿಂಗಭಕ್ತರಿಗೆ ವಿಭೂತಿವೀಳೆಯವಂ ಕೊಡುವುದೆ ಸ[ದಾಚಾರ].
ಹೀಂಗಲ್ಲದೆ,
ಹೆಣ ಶೃಂಗಾರವ ಮಾಡಿಸಿ, ಪರೆ ಕಹಳೆ ಸಹಿತ
ವಿಮಾನದಲ್ಲಿ ಕೊಂಡುಹೋಗಿ, ಹೂಳಿ,
ಶ್ರಾದ್ಧ ಕೂಳ ಮಾಡುವ[ವರು] ಸದಾಚಾರಕ್ಕೆ ದೂರವಯ್ಯಾ
ಕೂಡಲಸಂಗಮದೇವಾ. ॥ ೨೬೯ ॥

೧೨೩೦

ದೇವರ ದೇವಾ ಮಲಯುಜದಿಂದ ಮೇಲೆ ಮಲಯುಜವುಂಟೆ?
ಪರುಷದಿಂದ ಮೇಲೆ ಪರುಷವಾವುದುಂಟೆ? .
ಅಯ್ಯಾ ಅಮೃತಾಹಾರದಿಂದಂ ಮೇಲೆ ಭೋಜನವಾವುದುಂಟೆ?
ಅಯ್ಯಾ, ನಿಮ್ಮಿಂದೊಂದಾಶ್ಚರ್ಯವ ಕಂಡೆನೆಂಬುದ
ಎನಗೆ ನಿರೂಪಿಸಾ ಕೂಡಲಸಂಗಮದೇವಾ, ಪ್ರಭುವೆ. || ೨೮೦ ||

೧೨೩೧

ದೇವರು ಕಾಮನ ಕೊಂದನೆಂಬರು, ದೇವಂಗಿಬ್ಬರು ಹೆಂಡಿರುಂಟು,
ದೇವರು ಕಾಮನ ಕೊಂದುದಿಲ್ಲ ಕಾಣಿ ಭೋ!
ಕಾಮವೈರಿಗಳು, ಕಾಮನ ಕೊಂದ ಮೂವರಿತ್ತಲೈದಾರೆ–
ಕೂಡಲಸಂಗಯ್ಯನಲ್ಲಿ
ಶುಕನು, ಸೊನ್ನಲಿಗೆಯ ಸಿದ್ಧರಾಮಯ್ಯನು, ಹನುಮಂತನು. || ೨೮೧ ||

೧೨೩೨

ದೇಹವೆಂಬೆರಡಕ್ಕರವನು ಜೀವವೆಂದರಿದೆನಯ್ಯಾ,
ಜೀವವೆಂಬೆರಡಕ್ಕರವನು ಹಂಸನೆಂಬ ದಳಕ್ಕೆ ವಿಭಾಗಿಸಿದೆನಯ್ಯಾ.
ಹಂಸವೆಂಬೆರಡಕ್ಕರವನು ಜ್ಞಾನಚಕ್ಷುವಿನ
ಭ್ರೂಮಧ್ಯದಲ್ಲಿ ವಿಭಾಗಿಸಿದೆನಯ್ಯಾ.
ಒಂದು ದಳವ ಕರ್ತನಮಾಡಿ
ಒಂದು ದಳವ ಭೃತ್ಯನ ಮಾಡಿ
ಈ ಎರಡು ದಳದ ನಡುವಿರ್ಪ ಪರಂಜ್ಯೋತಿಯನು
ತ್ರಿಕೂಟವೆಂದರಿದು ಕೂಡಿದೆನಯ್ಯಾ.
ಇಂತು ಕೂಡಿದಲ್ಲಿ ಪರಿಚರ್ಯವ ಮಾಡುತಿರ್ದೆನಯ್ಯಾ.
ಮೊದಲ ಪರಿಚರ್ಯದಲ್ಲಿ ನಿರ್ಮಳೋದಕವ ತುಂಬಿದೆ,
ಒಂದು ದಳದೊಳಗೆ.
ಎರಡನೆಯ ಪರಿಚರ್ಯದಲ್ಲಿ ಒಂದು ದಳದಲ್ಲಿ
ಆ ಉದಕವ ಗಡಣಿಸುತಿರ್ದೆನಯ್ಯಾ.
ಇರಲಿರಲು ಎರಡು ದಳವು ಅಳಿದು ಜಲ ಮೇರೆದಪ್ಪಲು
ಮನ ಮೇರೆದಪ್ಪಿ ಆರೋಗಿಸಿದೆನಯ್ಯಾ.
ಆರೋಗಿಸಿದ ತೃಪ್ತಿಯ ನೀನೆ ಬಲ್ಲೆ,
ಕೂಡಲಸಂಗಮದೇವಾ. || ೨೮೨ ||

೧೨೩೩

ಧನಮದದಿಂದ, ಸಯದಾನಮದದಿಂದ ಮಾಡಿದೆನೆಂಬುದು
ಕಡೆಮುಟ್ಟದೆ ಹೋಯಿತ್ತು.
ಹಸ್ತಪರುಷದಿಂದ ಮುಟ್ಟಿ ಮಾಡಿದುದೆಲ್ಲವು ಸವೆಯಿತ್ತು.
ದೃಷ್ಟಿಪರುಷದಿಂದ ನೋಡಿ ಮಾಡಿದೆನೆಂಬುದೆಲ್ಲವೂ ಹೆಚ್ಚಿತ್ತು.
ವಾಕ್ಪರುಷದಿಂದ ನುಡಿದು ಮಾಡಿದುದೆಲ್ಲವು ಅಂತರಿಸಿತ್ತು.
ಮನಪರುಷದಿಂದ ನೆನೆದು ಮಾಡಿದುದೆಲ್ಲವು ನಿಂದಿತ್ತು.
ಭಾವಪರುಷದಿಂದ ಭಾವಿಸಿದ ಪದಾರ್ಥವೆಲ್ಲವು ನಿರ್ಭಾಷದತ್ತ ವೇಧಿಸಲಾಯಿತ್ತು.
ಇಂತೀ ಪಂಚಪರುಷದಿಂದ ಮುಟ್ಟಿ ನೀಡಿದ ಪದಾರ್ಥವೆಲ್ಲವು
ತೋರದ ಮುನ್ನ ಅಮಳೋಕ್ಯವಾದವು.
ಕೂಡಲಸಂಗಮದೇವರ ತೃಪ್ತಿಯನರಿದಿಹೆನೆಂದು ಕೆಟ್ಟೆನು. ॥ ೨೭೩ ॥

೧೨೩೪

ಧನ ಸವೆದಡೆ ತನುವನರ್ಪಿಸುವೆನು,
ತನು ಸವೆದಡೆ ಮನವನರ್ಪಿಸುವೆನು,
ಮನ ಸವೆದಡೆ ಭಾವವನರ್ಪಿಸುವೆನು,
ಭಾವ ಸವೆದಡೆ ನಿರ್ಭಾವವನರ್ಪಿಸುವೆನು.
ಕೂಡಲಸಂಗಮದೇವಯ್ಯಾ,
ಚೆನ್ನಬಸವಣ್ಣ ತೆತ್ತಿಗನಾದ ಬಳಿಕ,
ನಾನು ನಿಮ್ಮಲ್ಲಿ ಕೂಡಿಯರ್ಪಿಸಿ ಶುದ್ಧನಪ್ಪೆನಯ್ಯಾ. ॥ ೨೭೪ ॥

೧೨೩೫

ಧನ ಹೋಯಿತ್ತೆಂದಡೆ, ಮನಸು ಬೆದರಿದಡೆ, ಚಿತ್ತ ಹೆದರಿದಡೆ,
ತನು ತೆರಳಿದಡೆ, ಭಾವ ಓಸರಿಸಿದಡೆ,
ಆಣೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ.
ತನುಮನಧನವನಲ್ಲಾಡಿಸಿ ನೋಡುವ ಒಡೆಯನು ನೀನೆ,
ಹರಣವ ಮೇಲೆತ್ತೊಡೆ ಕಳವಳವೆ, ಕೂಡಲಸಂಗಮದೇವಾ? ॥ ೨೭೫ ॥

೧೨೩೬

ಧರೆಯಾಕಾಶದ ನಡುವೆ ಒಂದು ಮಾಮರ ಹುಟ್ಟಿತ್ತು.
ಆ ಮರಕ್ಕೆ ಕೊಂಬೆರಡು, ಎಲೆ ಮೂರು,
ಮೂವತ್ತಾರು ಪುಷ್ಪ, ಕಾಯಿ ಒಂದೆ,

ಹಣ್ಣು ರಸ ತುಂಬಿದಲ್ಲಿ ಏನನೂ ಕಾಣೆ,
ಎಲೆ ಉದುರಿದಡೆ ಹಣ್ಣು ತೊಟ್ಟುಬಿಟ್ಟು ಬಿದ್ದಿತ್ತು.
ಆ ಹಣ್ಣ ಪ್ರಭುದೇವರು ಆರೋಗಣೆಯ ಮಾಡಿ
ನಿಜದಲ್ಲಿ ನಿರ್ವಯಲಾದರು.
ಪ್ರಭುವಿನ ಕಾರುಣ್ಯಪ್ರಸಾದವ ನಾನು ಕೊಂಡೆನಾಗಿ,
ಕೂಡಲಸಂಗಮದೇವರು ಇತ್ತ ಬಾರೆಂದು
ತಮ್ಮ ಹೃದಯಕಮಲದಲ್ಲಿ ಇಂಬಿಟ್ಟುಕೊಂಡರು. || ೨೭೬ ||

೧೨೩೭

ಧರೆ ರಸಾತಳಕ್ಕಿಳಿವಂದು, ಹರಿಬ್ರಹ್ಮಾದಿಗಳಳಿವಂದು,
ಮಹಾದೇವ ಮಹಾದೇವ ಎನುತ್ತಿರ್ದೆನು ಅದೆಂತೆಂದಡೆ :
ಬ್ರಹ್ಮಾಂಡಾನಾಮಸಂಖ್ಯಾನಾಂ ಬ್ರಹ್ಮವಿಷ್ಣುಮಹಾತ್ಮನಃ।
ಯತ್ರೋದಯಂ ಲಯಂ ಯಾಂತಿ ಮಹಾದೇವ ಇತಿ ಸ್ಮೃತಃ॥
ಎಂದುದಾಗಿ
ಅಗ್ರದ ಕೊನೆಯ ತುದಿಯಿಂದತ್ತತ್ತ
ತತ್ತ್ವಮಸಿಯ ಮೀರಿದ ನಮ್ಮ ಕೂಡಲಸಂಗಮದೇವ. || ೨೭೭ ||

೧೨೩೮

ಧ್ಯಾನಕ್ಕೆ ನಿಮ್ಮ ಶ್ರೀಮೂರ್ತಿಯೆ ಮುಖ್ಯವಯ್ಯಾ,
ಪೂಜೆಗೆ ನಿಮ್ಮ ಶ್ರೀಪಾದವೆ ಮುಖ್ಯವಯ್ಯಾ.
ಮಂತ್ರಕ್ಕೆ ನಿಮ್ಮ ನಾಮಾಮೃತವೆ ಮುಖ್ಯವಯ್ಯಾ,
ಮುಕ್ತಿಗೆ ನಿಮ್ಮ ಘನಕೃಪೆಯೆ ಮುಖ್ಯವಯ್ಯಾ.
ನಿಮ್ಮಿಂದಧಿಕರನಾರನೂ ಕಾಣೆನಯ್ಯಾ
ಕೂಡಲಸಂಗಮದೇವಾ, ನೀವು ಜ್ಞಾನಗುರುವಾದ ಕಾರಣ. || ೨೭೮ ||

೧೨೩೯

ಧ್ಯಾನ ಮೋನವೆಂಬ ಶಸ್ತ್ರವ ಪಿಡಿಯಲರಿಯದೆ
ಅಹಂಕಾರದ ಧಾರೆಯ ಮೊನೆಯುಲಗೆಂಬ ಶಸ್ತ್ರವ ಪಿಡಿದು ಕೆಟ್ಟೆನಯ್ಯಾ.
ಅಂಜುವೆನಂಜುವೆನಯ್ಯಾ,
ಜಂಗಮಲಿಂಗವೆಂಬ ಭಾಷೆ ಪಲ್ಲಟವಾಯಿತ್ತು.
ಇನ್ನು ಜಂಗಮವೆಂಬ ಶಿಕ್ಷಾಶಸ್ತ್ರದಲ್ಲಿ ಎನ್ನ ಹೊಯ್ದು ಬಯ್ದು
ರಕ್ಷಿಸುವುದು ಕೂಡಲಸಂಗಮದೇವಾ. || ೨೭೯ ||

೧೨೪೦

ನಂಬಿದೆನಯ್ಯಾ ನಾನು, ನಚ್ಚಿದೆನಯ್ಯಾ ನಾನು,
ಬದುಕಿದೆನಯ್ಯಾ ನಾನು ನಿಮ್ಮ ಕೃಪೆಯಿಂದಲಿ.
ಹಾಳು ಕುಳಿಯಲ್ಲಿ ಬಿದ್ದ ಪಶುವಿನ ಕರುವ ತೆಗೆದು
ತಾಯು ಮುಖವ ತೋರುವಂತೆ, ಪಾಪಕೂಪದಲ್ಲಿ ಬಿದ್ದವನನೆಬ್ಬಿಸಿ
ಕೂಡಲಸಂಗನ ಶರಣರ ಚರಣವ ತೋರಿ, ಎನ್ನನುಳುಹಿದನು.
ಹೋದ ಜೀವಕ್ಕೆ ತನ್ನ ಕರುಣವೆಂಬ
ಮರುಜವಣಿಯ ಹಿಂಡಿ ಎತ್ತಿದನು,
ಚೆನ್ನಬಸವಣ್ಣನಿಂದಲೆಂತಕ್ಕೆ ಬದುಕಿದೆನು. || ೨೮೦ ||

೧೨೪೧

ನಚ್ಚು ಮಚ್ಚಿನ ಶರಣರೆನ್ನ ಕಣ್ಣಮುಂದೆ ಬಂದು ನಿಂದಿರಲು
ಎನ್ನ ತನುವ ಬಗಿದು ಎನ್ನ ತನುವಿನೊಳಗಿಂಬಿಟ್ಟುಕೊಂಬೆನು,
ಎನ್ನ ಮನವ ಬಗಿದು ಎನ್ನ ಮನದೊಳಗಿಂಬಿಟ್ಟುಕೊಂಬೆನು,
ಎನ್ನ ಕಂಗಳ ಬಗಿದು ಎನ್ನ ಕಂಗಳೊಳಗಿಂಬಿಟ್ಟುಕೊಂಬೆನು.
ಕೂಡಲಸಂಗನ ಶರಣರೆನ್ನ ಒಡೆಯರಾಗಿ
ಎನ್ನ ಭಾವಕ್ಕೆ ಬಂದ ಭಕ್ತಿಯ ಮಾಡುವೆನು. ||೨೮೧||

೧೨೪೨

ನಡುದೊರೆಯೊಳಗೆ ಹರುಗೋಲನಿಳಿದಂತಾಯಿತ್ತೆನ್ನ ಭಕ್ತಿ,
ಮರನನೇರಿ ಕೈಯ ಬಿಟ್ಟಂತಾಯಿತ್ತೆನ್ನ ಭಕ್ತಿ.
ಶಿವಶಿವಾ, ಕೆಟ್ಟೆನಲ್ಲಾ ಗುರುವೆ, ಕೂಡಲಸಂಗಮದೇವಾ,
ಈ ಮರುಳುಶಂಕರದೇವರ ಕೃಪೆ
ಎನಗಿನ್ನೆಂದಪ್ಪುದು ಹೇಳಾ, ಪ್ರಭುವೆ. || ೨೮೨ ||

೧೨೪೩

ನಡೆಯ ಚೆನ್ನ ನುಡಿದು ತೋರಿ,
ನುಡಿಯ ಚೆನ್ನ ನಡೆದು ತೋರಿ,
ಆ ನಡೆನುಡಿ ಎರಡರ ಚೆನ್ನ ಮೃಡ ನಿಮ್ಮೊಳಗಡಗಿಸಿ,
ತಾವೆಡೆಯಿಲ್ಲದೆ ಪರಿಪೂರ್ಣರಾದವರ ಪಡುಗವ ಹೊರುವೆ, ಪಾದರಕ್ಷೆಯ ಹಿಡಿವೆ,
ಎನಗಿದೆ ಮಾಟ, ಬಯಸುವ ಬೇಟ.

ಕೂಡಲಸಂಗಮದೇವಾ,
ಇದು ನಿಮ್ಮ ಕೂಡುವ ಕೂಟ. || ೨೮೩ ||

೧೨೪೪

ನಾ ನಡೆವುದೆಲ್ಲಾ ಅನಾಚಾರ, ನಾ ನುಡಿವುದೆಲ್ಲಾ ಅವಿಚಾರ,
ನಡೆನುಡಿ ಶುದ್ಧವಿಲ್ಲದ ಅಪವಿತ್ರನ ತಂದು
ನಿಮ್ಮೊಕ್ಕುದನಿಕ್ಕಿ ಸಲಹಿದಿರಾಗಿ, ಎನಗಿನ್ನಾವ ಭಯವೂ ಇಲ್ಲ.
ಕೂಡಲಸಂಗಮದೇವರು ಸಾಕ್ಷಿಯಾಗಿ,
ಆಯ್ದಕ್ಕಿಯ ಮಾರಯ್ಯನ ಮನೆಯ ಮಗ ನಾನು. || ೨೮೪ ||

೧೨೪೫

ನಾನಾ ಭವದುಃಖದಲ್ಲಿ ಹುಟ್ಟಿದ ಪ್ರಾಣಿಯಲ್ಲಿ ತಂದೆ;
ಇನ್ನು ಹುಟ್ಟಲಾರೆನು, ಹೊಂದಲಾರೆನು,
ಜನನ ಮರಣವೆಂಬೆರಡಕ್ಕೆ ಹೊರಗಾದೆನಯ್ಯಾ.
ನೀವು ಹೇಳಿದ ಮಣಿಹವ ಮಾಡಿದೆ,
ಇನ್ನು ಕೂಡಿಕೊಳ್ಳಾ ಕೂಡಲಸಂಗಮದೇವಾ. || ೨೮೫ ||

೧೨೪೬

ನಾನಾ ಯುಗಂಗಳಲ್ಲಿ ಬಂದಲ್ಲಿ
ಇಂತಪ್ಪ ನಿಲವ ಕಂಡುದಿಲ್ಲವಯ್ಯಾ.
ಅಂಗಮನಭಾವಕರಣಂಗಳು ಮಾದು
ಕೂಡಲಸಂಗಮದೇವರ ನಿಲವನೊಳಕೊಂಡ
ಮರುಳುಶಂಕರದೇವರ ನಿಲವ ನಿಮ್ಮಿಂದ ಕಂಡು
ಬದುಕಿದೆನು ಕಾಣಾ, ಕಿನ್ನರಿ ಬ್ರಹ್ಮಯ್ಯಾ. || ೨೮೬ ||

೧೨೪೭

ನಾನಾರಿದೆಲ್ಲಿಯ ಪಾಶವಿದೆತ್ತಣ ಮರವೆ?
ಅಕಟಕಟಾ ತಾಮಸಕ್ಕೆ ಗುರಿಮಾಡಿದೆಯಲ್ಲಾ.
ಎಲೆ ಕರುಣಾಂಬುನಿಧಿಯೆ, ದಯಾಪಾರಿಯೆ,
ನೀನು ವಿಚಾರಿಸದಿರ್ದಡಾನೆಂತುಳಿವೆನಯ್ಯಾ.
ನಿಮ್ಮ ಕೃಪಾದೃಷ್ಟಿಯಿಂ ನಿರೀಕ್ಷಿಸಿ ನಿಮ್ಮತ್ತ ಸಾರುವಂತೆ ಮಾಡಾ
ಕೂಡಲಸಂಗಮದೇವಾ. || ೨೮೭ ||

೧೨೪೮

ನಾನಾ ಸ್ಥಾನದಲ್ಲಿ ಬಂದು ತೊಳಲಿ ಬಳಲಿ ಅಳಿದುಳಿದು ನಿಂದ ನಿಲದವನಲ್ಲ,
ಮರ್ತ್ಯಲೋಕದಲ್ಲಿ ಶಿವಾಚಾರದ ಘನವು ಹೂಳಿಹೋಯಿತ್ತೆಂದು
ಕರ್ತನು ತಾನೆ ಮಹಾಪ್ರಸಾದಿಯಾಗಿ ಉದಯವಾದನು.
ಹಸ್ತಮಸ್ತಕ ಸಂಯೋಗವಿಲ್ಲದ ಮುನ್ನವೆ
ಆದಿಗುರು ಅನಾದಿಶಿಷ್ಯನೆಂಬುದ ನೆಲೆಮಾಡಿ,
ಸಂಗಮನಾಥನೆಂಬ ಲಿಂಗವನೆನ್ನ ಕೈಯಲ್ಲಿ ಕೊಟ್ಟು,
ಸಾಮದಿಂದ ಅನುಗ್ರಹಿಸಿಕೊಂಡನು.
ಎನ್ನ ಹಿಂದಣ ಪೂರ್ವಾಪರವನೆತ್ತಿ ತೋರಿ ತನ್ನತ್ತ ತೆಗೆದುಕೊಂಡನು
ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನು. ॥ ೨೮೮ ॥

೧೨೪೯

ನಾನು ಭಕ್ತನಲ್ಲಯ್ಯಾ, ನಾನು ಯುಕ್ತನಲ್ಲಯ್ಯಾ, ನಾನು ಮುಕ್ತನಲ್ಲಯ್ಯಾ
ಕಪಟವೇಷದ ಡಂಭಕ ನಾನು.
ಕೂಡಲಸಂಗಮದೇವಾ,
ಎನ್ನ ಭಕ್ತಿ ಒಳಲೊಟ್ಟೆ ಎಂಬುದ ನೀವು ತೋರಬಂದಿರಾಗಿ
ಎನಗಿಂದರಿಯ ಬಂದಿತ್ತು. ॥ ೨೮೯ ॥

೧೨೫೦

ನಾನೆಂಬುವೆಲ್ಲಿಯದಯ್ಯ ಲಿಂಗವೆಂಬ ಮಹಾತ್ಮಂಗೆ,
ಶರಣನೊಡಲುಗೊಂಡಡೇನು ಸಾಮಾನ್ಯನೆ?
ಪ್ರಕೃತಿಗುಣವಿಡಿದು ಭಿನ್ನಭಾವಿಯಲ್ಲ.
ಕೂಡಲಸಂಗನ ಶರಣರ ಪರಿ ಬೇರೆ. ॥ ೨೯೦ ॥

೧೨೫೧

ನಾನೊಂದು ಕಾರಣ ಮರ್ತ್ಯಕ್ಕೆ ಬಂದೆನು,
ಬಂದ ಬಳಿಲಿಕೆಯ ಪರಿಹರಿಸಲಿಕ್ಕೆ ಚೆನ್ನಬಸವಣ್ಣ ಬಂದನು,
ಇನ್ನು ಬಾರದಂತೆ ಪ್ರಭುದೇವರು ಬಂದರು,
ಇದಕ್ಕೆ ಆಜ್ಞಾಕರ್ತೃ ಮಡಿವಾಳ ಮಾಚಿತಂದೆ ಬಂದನು.
ನಾನಿನ್ನಾರಿಗಂಜೆನು, ಬದುಕಿದೆನು
ಕಾಣಾ ಕೂಡಲಸಂಗಮದೇವಾ. ॥ ೨೯೧ ॥

೧೨೫೨

ಸಾರಗೋಣೆಯ ಮೂಲೆಯ ಹೊಲಿದು,
ನೀರ ಭಂಡವ ತುಂಬಿದರಯ್ಯಾ,
ಊರೊಳಗೈವರು ಕಳ್ಳರು ಸಾರಲೀಯರು, ಧರ್ಮವಿಲ್ಲಯ್ಯಾ.
ಊರ [ಸೂರೆ]ಗೊಳ್ಳದ ಮುನ್ನ
ಕೂಡಿಕೊಳ್ಳಿ ಕೂಡಲಸಂಗಮದೇವನ. ॥ ೨೯೨ ॥

೧೨೫೩

ನಿಂದಿಸುವನೊಬ್ಬ, ಸ್ತುತಿಸುವನೊಬ್ಬ,
ಇವರಿಬ್ಬರು ನಮ್ಮ ಶಿವಯೋಗಿಯ ಪರಮಬಂಧುಗಳಯ್ಯಾ.
ಪಾಪವನೊಬ್ಬ ಕೊಂಬ, ಪುಣ್ಯವನೊಬ್ಬ ಕೊಂಬ,
ಕೂಡಲಸಂಗಮದೇವಾ, ನಿಮ್ಮ ಶರಣರು ನಿತ್ಯಮುಕ್ತರು. ॥ ೨೯೩ ॥

೧೨೫೪

ನಿಜರೂಪು ರೂಪಿನಿಂದ ನಿಂದಿತ್ತು,
ಆ ರೂಪು ನಿಜರೂಪವನವಗ್ರಹಿಸಿತ್ತು.
ನಿಜರೂಪು ನಿರ್ಣಯದಲ್ಲಿ ನಿಂದ ನಿಜಶರಣರ ನಿಲವ
ಕಾಯುವಿಡಿದು ಕಂಡಹೆನೆಂದಡೆ ಕಾಣಬಹುದೆ?
ಕೂಡಲಸಂಗಮದೇವಾ ನಿಮ್ಮ ಶರಣರ ನಿಲವು,
ಎನಗೆ ಸಾಧ್ಯವಪ್ಪುದೆ? ॥ ೨೯೪ ॥

೧೨೫೫

ನಿತ್ಯನಿರಂಜನ ಪರಂಜ್ಯೋತಿವಸ್ತು
ಉಪದೇಶವ ಕೊಟ್ಟು ಗುರುವಾದ,
ಕರಸ್ಥಲಕ್ಕೆ ಬಂದು ಲಿಂಗವಾದ,
ಪಸರವಾದ ಪ್ರಪಂಚನಳಿದು ದಾಸೋಹವ ಮಾಡಿಸಿಕೊಂಡು ಜಂಗಮವಾದ,
ಇಂತೀ ಗುರುಲಿಂಗಜಂಗಮ ಒಂದೆಯಲ್ಲದೆ ಭಿನ್ನವಿಲ್ಲ.
ಈ ಮೂರಕ್ಕೆ ಮೂರನಿತ್ತು ಮೂರನೊಂದ ಮಾಡಬಲ್ಲಡೆ,
ಆತ ಪ್ರಸಾದಕಾಯನಯ್ಯಾ, ಕೂಡಲಸಂಗಮದೇವಾ. ॥ ೨೯೫ ॥

೧೨೫೬

ನಿನಗೆ ಮಜ್ಜನಕ್ಕೆರೆವುದಕ್ಕೆ ಮುಂಚುಟಾಗಿ
ಶ್ರೀಗುರುವಿನ ಪಾದೋದಕವ ಕೊಂಬೆ.
ನಿನಗಾರೋಗಣೆಯ ಮಾಡಿಸುವುದಕ್ಕೆ ಮುಂಚುಟಾಗಿ
ಶ್ರೀಗುರುವಿನ ಪ್ರಸಾದವ ಕೊಂಬೆ.
ಎನಗೆಯೂ ನಿನಗೆಯೂ ಸಹಭೋಜನ,
ಎನಗೆಯೂ ನಿನಗೆಯೂ ಏಕಾರ್ಥಶಯನ,
ನೀನೆನಗೆ ಚಿಕ್ಕ ತಮ್ಮ, ಕೂಡಲಸಂಗಮದೇವಾ. || ೨೯೬ ||

೧೨೫೭

ನಿನ್ನ ಜನ್ಮದ ಪರಿಭವವ ಮರನೆಯಲ್ಲಾ ಮನವೆ,
ಲಿಂಗವ ನಂಬು ಕಂಡಾ ಮನವೆ,
ಜಂಗಮವ ನೆರೆ ನಂಬು ಕಂಡಾ, ಎಲೆ ಮನವೆ,
ಕೂಡಲಸಂಗಮದೇವರ ಬೆಂಬತ್ತು ಕಂಡಾ, ಎಲೆ ಮನವೆ. || ೨೯೭ ||

೧೨೫೮

ನಿನ್ನಾಳಿ ಕುಂಬಾರನ ಕೆಲಸದೋಪಾದಿ:
ಉದಕದ ಶೈತ್ಯವನೆ ಕೊಟ್ಟು,
ನೂಲೆಳೆಯಲ್ಲಿ ಗೋಣ ಕೊಯ್ದು,
ವಾಯುವಿನ ಶೈತ್ಯದಲ್ಲಿ ಆರಿಸಿ,
ಅಗ್ನಿಮುಖದಲ್ಲಿ ಬೇರೆ ಭಾಂಡವೆಂದೆನಿಸಿದಂತೆ
ಕೂಡಲಸಂಗಮದೇವಾ. || ೨೯೮ ||

೧೨೫೯

ನಿಮ್ಮ ಕಂಡು, ಕೈಮುಗಿದು, ನಿಮಗೆ ಭಕ್ತನಾದೆನಲ್ಲದೆ,
ನಿಮ್ಮ ಕಾಣದಲೆ ಕೈಮುಗಿವ ಭಕ್ತಿಯುಂಟೆ ಅಯ್ಯಾ?
ನಿಮ್ಮ ಮುಟ್ಟಿ ಪೂಜಿಸಿ ಆಚಾರಿಯಾದೆನಲ್ಲದೆ,
ನಿಮ್ಮ ಮುಟ್ಟದಲೆ ಎನಗಾಚಾರವೆಲ್ಲಿಯದಯ್ಯಾ?
ನಿಮ್ಮ ಘನವನು ಮನದಲ್ಲಿ ನೆನೆದು ಧರಿಸಿದ ಕಾರಣ
ಜ್ಞಾನೋದಯವಾಯಿತ್ತಲ್ಲದೆ,
ನೀವಿಲ್ಲದಡೆ ಎನಗೆ ಜ್ಞಾನವೆಲ್ಲಿಯದಯ್ಯಾ?
ಇಂತು ಆವ ಮುಖದಲ್ಲಿಯೂ ಎನ್ನನಾಗುಮಾಡಲೆಂದು

ನೀವು ಮುಂದುಗೊಂಡಿದ್ದ ಕಾರಣ,
ನಿಮ್ಮ ಸನ್ನಿಧಿಯಲಾನು ಸದಾಚಾರಿಯಾದಡೆ, ನಿಮಗಾನು ಸರಿಯೆ?
ಕೂಡಲಸಂಗಮದೇವಾ,
ಜಂಗಮಮುಖದಿಂದ ಸಂಗನಬಸವಣ್ಣ ಬದುಕಿದನೆಂಬುವ
ಮೂರು ಲೋಕವೆಲ್ಲವೂ ಬಲ್ಲುದು ಕಾಣಾ ಪ್ರಭುವೆ. || ೨೯೯ ||

೧೨೬೦

ನಿಮ್ಮ ನೋಡ ನೋಡಲೆನ್ನ ಹರಣವಿದ್ದುದ ಕಂಡೆ,
ನಿಮ್ಮನಗಲಲೊಡನೆ ಎನ್ನ ಹರಣವಿಲ್ಲಯ್ಯಾ.
ಇರುಳೊಂದು ಜುಗ ಮೇಲೆ ಕೆಡೆದಂತೆ, ಆಳವಾಡಿ ಕಳೆವೆನಯ್ಯಾ,
ಹಗಲೆಲ್ಲ ಹಂಬಲಿಸಿ ಹಲುಬಲೇನಯ್ಯಾ,
ಕೂಡಲಸಂಗನ ಶರಣರನಗಲುವ ಧಾವತಿಯಿಂದ,
ಮರಣವೇ ಲೇಸಯ್ಯಾ. || ೩೦೦ ||

೧೨೬೧

ನಿರಹಂಭಾವದೊಳಗೆ ದಾಸೋಹದ ನಿರಹಂಕೃತಿ ನಿಷ್ಪತ್ತಿಯಾಗಿ,
ಎರಡರಿಯದೆ ನಿಜಪರಮಾನಂದದೊಳಿಪ್ಪೆನು,
ಕೂಡಲಸಂಗಯ್ಯಾ. || ೩೦೧ ||

೧೨೬೨

ನಿರ್ಲೇಪವಾದ ನಿಜಗುಣಿ ನೋಡಯ್ಯಾ,
ಕಾಮಿಸದ ಕಲ್ಪಿಸದ ಪ್ರಸಾದಿ ನೋಡಯ್ಯಾ.
ಬಯಸಲಿಲ್ಲದ ಪ್ರಸಾದಿ
ಗುರುವಿನ ಮುಖದಿಂದ ಬಂದ ಪ್ರಸಾದವಲ್ಲದೆ
ಮತ್ತೇನನೂ ಮುಟ್ಟಲೀಯನು,
ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನು. || ೩೦೨ ||

೧೨೬೩

ನೀರ ಒರಳ ಮಾಡಿ, ನೆರಳ ಒನಕೆಯ ಮಾಡಿ,
ಆಕಾರವಿಲ್ಲದಕ್ಕಿಯ ಥಳಿಸುತ್ತಿರಲು,
ಮೇರುಗಿರಿಯಾಕಳ ಕರೆದ ಕ್ಷೀರವಲ್ಲಿ ಅಡಿಗೆಯ ಮಾಡಿ

ನಾರಿಯ ಬಸುರೊಳಗೆ ಗಂಡ ಬಂದು ಕುಳ್ಳಿರಲು,
ಮಾಡಿದಡಿಗೆಯು ಮನವುಂಡು ಹೋಗಲು,
ಮೇಲು ಕೈ ತಲೆ ಹಿಡಿದು ಸಂತೋಷದಿಂದ,
ಪ್ರಾಣಸಖಿ ತನ್ನ ಗಂಡಂಗೆ ನೀಡುತ್ತಿರಲು,
ಅರಳ ಹುಟ್ಟಿಗೆಯಲ್ಲಿ ಹೊರಳಿ ಕೂಡುವ ಭೇದ,
ಮರಳಿ ಕೂಡಲಿಕೆಂತು ಪಣವಿಲ್ಲ.
ಕೆರಳಿ ಮುನಿದು ಘುಡುಘುಡಿಸಿ ಗರ್ಜಿಸಲೊಡನೆ
ಕೆರಳಲಮ್ಮದೆ ಅಂಜಿ ಒಳಗಡಗಿದ,
ಶರಣಸತಿ ಲಿಂಗಪತಿಯೆಂಬ ಭಾಷೆ.
ನೀನು ಹರನ ಬಟ್ಟೆಯ ನೋಡಿ ಸುಯ್ಯಬೇಡ,
ಜನನ ಮರಣವಿರಹಿತ ಕೂಡಲಸಂಗನ ಅನುಭಾವ,
ಪ್ರಭುವಿನ ಶ್ರೀಪಾದವೊಳಗಿದ್ದು ಸುಖಿಯಾಹೆನು. ॥ ೩೦೩ ॥

೧೨೬೪

ನೀಲದ ಮಣಿಯೊಂದು ಮಾಣಿಕವ ನುಂಗಿದಡ,
ವಜ್ರ ಬಂದು ಅದು ಬೇಡವೆಂದುಗುಳಿಸಿತ್ತು ನೋಡಾ,
ಅಡಗಿದ ಮಾಣಿಕ್ಯ ನೀಲದ ತಲೆಯ ಮೆಟ್ಟಿ,
ಆನಂದನಾಟ್ಯವನಾಡುತ್ತಿದ್ದಿತ್ತು.
ಅಂಬರದೊಳಗಣ ಮುಗ್ಧೆ ಕಂಗಳ ಮುತ್ತಿನ ಮಣಿಯ
ಮಥನವಿಲ್ಲದೆ ನುಂಗಿ ಉಗುಳುತ್ತಿದ್ದಳು.
ಲಿಂಗ ಜಂಗಮವೆಂಬುದ ಇಂದರಿದು ಸುಖಿಯಾದೆನು,
ಕೂಡಲಸಂಗಮದೇವರಲ್ಲಿ
ಪ್ರಭುವಿನ ಕೃಪೆಯಿಂದ ನಾನು ಬದುಕಿದೆನು. ॥ ೩೦೪ ॥

೧೨೬೫

ನೆಲ್ಲ ಗಿಡುವಿನೊಳಗೆ ನಾನೊಂದು ಹುಲ್ಲಾಗಿ ಹುಟ್ಟಿದೆನಯ್ಯಾ.
ಆನು ಭಕ್ತನೆಂದೆಂಬೆನೆ, ಆನು ಯುಕ್ತನೆಂದೆಂಬೆನೆ?
ಆನು ಕೂಡಲಸಂಗನ ಶರಣರೊಕ್ಕುದನುಂಡಡೆ,
ಪಾದರಕ್ಷೆಗೆ ಸರಿಯಹೆನೆ? ॥ ೩೦೫ ॥

೧೨೬೬

ನೋಡಿರೇ ನೋಡಿರೇ ಪೂರ್ವದತ್ತವ:
ವರುಣ ಹೆಳವ, ರವಿ ಕುಷ್ಟ, ಶುಕ್ರನಂಧಕ,
ಶನಿಗೆ ಸಂಕಲೆ, ಬಲಿಗೆ ಬಂಧನ, ಸೀತೆಗೆ ದ್ರೌಪದಿಗೆ ಸೆರೆ,
ಹರಿ ಹಂದಿಯಾದ, ಅರುಹಂಗೆ ಲಜ್ಜೆ,
ಬ್ರಹ್ಮನ ಶಿರಹೋಯಿತ್ತು,
ಬಲ್ಲಿದನೆಂಬವನ ಕೊಡೆವಿಡಿಸದೆ ವಿಧಿ?
ಜತ್ತಕನೆಂಬವನ ಕತ್ತೆಯ ಮಾಡಿತ್ತು.
ದಶಮುಖನ ನಾಯ ಡೋಣಿಯಲ್ಲಿ ಉಣಿಸಿತ್ತು.
ದೇವೇಂದ್ರನ ಮೈಯ್ಯ ನಾಣುಗೆಡಿಸಿತ್ತು.
ಶೂದ್ರಕನ ತಲೆ ಕಂಚಿಯಾಲದಲ್ಲಿ ನೇರಿತ್ತು.
ಕೂಡಲಸಂಗಮದೇವಯ್ಯಾ,
ನೀ ಮಾಡಿದ ಮಾಯೆಯನಂತರನಾಳಿಗೊಂಡಿತ್ತು. ॥ ೩೦೬ ॥

೧೨೬೭

ಪಂಚಬ್ರಹ್ಮಾತ್ಮಕದಿಂದುದಯವಾದ,
ಪಂಚಗವ್ಯ ಗೋಮಯವನು
ಆಗಮಮತದಿಂದ ದಹಿಸಿ, ಸಮಸ್ತ ಜನಂಗಳು ಧರಿಸುವ
ಭಸಿತವಿದು ನೋಡಾ ಕೂಡಲಸಂಗಯ್ಯಾ. ॥ ೩೦೭ ॥

೧೨೬೮

ಪಂಚಮುಖವ ಪೂಜಿಸುವಯ್ಯಗಳು ನೀವು ಕೇಳಿರಯ್ಯಾ:
ಪಂಚಲಿಂಗವಾವುದೆಂಬುದ ನೀವು ಕೇಳಿರೆ!
ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶವೆಂಬ
ಈ ಐದರಲ್ಲಿ ನೊಂದುಬೆಂದಯ್ಯಗಳು ನೀವು ಕೇಳಿರೆ!
ನಾನವನೊಲ್ಲೆ, ನಾನವನಂಗವಿಸುವನಲ್ಲ, ನಾನವ ಹಿಡಿವನಲ್ಲ,
ಸನ್ಯಾಸವನೊಳಗಾಡಿ ಸಮೀಪಕ್ಕೆ ಬಾಹಾತನಲ್ಲ,
ಕ್ಷಪಣರೊಳಗಾಡಿ ಲಜ್ಜೆದೋರುವವನಲ್ಲ,
ಲಿಂಗವನೊಳಗಾಡಿ ಅಂಗವ ಬಿಡುವವನಲ್ಲ,
ಸರ್ವದೊಳಗಾಡಿ ಅಧೋಗತಿಗಿಳಿವವನಲ್ಲ.
ನಾನು ಜಂಗಮದಾಸೋಹದೊಳಗಾಡಿ ನಿಮ್ಮ ಕಂಡೆ
ಕೂಡಲಸಂಗಮದೇವಾ. ॥ ೩೦೮ ॥

೧೨೬೯

ಪಂಚೇಂದ್ರಿಯಂಗಳರತು ತನುಮನವ ನಿಲಿಸಬಲ್ಲಡೆ
ಚೆನ್ನನ ಪ್ರಸಾದ ಲಿಂಗಕ್ಕೋಗರವಾಗದೆ?
ನಾಲಗೆಯ ರುಚಿಯ ನಾಣಕ್ಕೆ ತಂದು ಮರಳಿ ಲಿಂಗಾರ್ಪಿತವ ಮಾಡಿವಡೆ,
ಮನದ ಭಾವವ ಕೈಕೊಂಡ ಕಾರಣ,
ನಮ್ಮ ಕೂಡಲಸಂಗಮದೇವನಿಗೆ ಕೊಡಬಹುದು ಕಾಣಾ, ಪ್ರಭುವೆ. || ೩೦೯ ||

೧೨೭೦

ಪಂಚೇಂದ್ರಿಯಂಗಳೆಂಬ ಪಂಚವಿಷಯವೆಂಬ
ವಿಷಯದೊಳಗೆ ಆಳುತ್ತ ಏಳುತ್ತ ಬೀಳುತ್ತಲಿದೇನೆ,
ಓಂ ನಮಃ ಶಿವಾಯ, ಓಂ ನಮಃ ಶಿವಾಯಯೆಂಬುತಿದೇನೆ,
ಕೂಡಲಸಂಗಮದೇವಾ, ಪರಿಪರಿಸುವರ ಕಾಣೆ. || ೩೧೦ ||

೧೨೭೧

ಪರಿಮಿತಕೆ ನಡೆತಂದು ಪರುಷದ ಸಿಂಹಾಸನದ ಮೇಲೆ
ಪರಮಗುರು ಮೂರ್ತಿಗೊಂಡಿರಲು,
ಪರಮಾನಂದಜಲದಿಂದ ಪಾದಾರ್ಚನೆಯಂ ಮಾಡಿ,
ದಿವ್ಯಸುಗಂಧಮಂ ಲೇಪಿಸಿ, ಅಕ್ಷಯವೆಂಬ ಅಕ್ಷತೆಯನಿಟ್ಟು,
ಹೃದಯಕಮಲದ ಪುಷ್ಪದಿಂದ ಪೂಜೆಯ ಮಾಡಿ,
ಸುಜ್ಞಾನವಾಸನೆಯೆಂಬ ಧೂಪವಮಂ ಬೀಸಿ,
ಭಕ್ತಿಸಾರಾಯವೆಂಬ ನೈವೇದ್ಯಮಂ ಸಮರ್ಪಿಸಿ,
ಪರಮಹರುಷವನೆ ಹಸ್ತಮಜ್ಜನಕ್ಕೆರೆದು,
ತ್ರಿಕರಣಶುದ್ಧವೆಂಬ ತಾಂಬೂಲಮಂ ಕೊಟ್ಟು,
ಸಮರಸಸಂಗದಿಂದ ಕೂಡಲಸಂಗಮದೇವರ ಶರಣ
ಪ್ರಭುದೇವರ ಕರುಣವೆನಗಾಯಿತ್ತು. || ೩೧೧ ||

೧೨೭೨

ಪವಿತ್ರಲಿಂಗಕ್ಕೆ ಅಪವಿತ್ರವ ಕೊಡಲೊಲ್ಲೆನೆಂಬುದೆನ್ನ ಭಾಷೆ,
ಧರೆಯೊಳು ಬೆಳೆದುವೆಲ್ಲಾ ಅಪವಿತ್ರವೆಂಬುದ ಬಲ್ಲೆನಾಗಿ ನಾನವನೊಲ್ಲೆ,
ಪಾಚಿಗೆಟ್ಟ ಹೊಲದಲ್ಲಿ ಒಂದು ಲಿಂಗಮೂರ್ತಿದೋರಿದಡೆ ಅದು ದಿವ್ಯಕ್ಷೇತ್ರ,
ಅಲ್ಲಿದ್ದವರೆಲ್ಲರೂ ಪವಿತ್ರಕಾಯರು.
ಇದು ಕಾರಣ, ಅನಘ ಅನಾದಿ ಜಂಗಮಮುಖದಿಂದಾಗಿನ ಪ್ರಸಾದ,

ಕೂಡಲಸಂಗಯ್ಯಾ, ನಿಮಗೆ ನೈವೇದ್ಯವೆನಗೆ ಪ್ರಸಾದ ತಪ್ಪದು,
ನಿಮ್ಮವರು ಸವಿದ ಸವಿಯು ಕೈಯಾಂತು ಕೊಂಡುದ ನಾ ಬಲ್ಲೆನಾಗಿ. || ೩೧೨ ||

೧೨೭೩

ಪುಣ್ಯಗಳಹ ಕಾಲಕ್ಕೆ ಹಗೆಗಳು ತನ್ನವರಹರು,
ಪುಣ್ಯಗಳಹ ಕಾಲಕ್ಕೆ ಮಣ್ಣು ಹೊನ್ನಹುದು,
ಪುಣ್ಯಗಳಹ ಕಾಲಕ್ಕೆ ಹಾವು ಲೇವಳವಹುದು,
ಪುಣ್ಯಗಳಹ ಕಾಲಕ್ಕೆ ಅನ್ಯರು ತನ್ನವರಹರು.
ಇಂತಪ್ಪ ಪುಣ್ಯಂಗಳೆಲ್ಲವೂ ಭಕ್ತಿಯಿಂದಹುದು,
ಭಕ್ತಿ ಕೆಟ್ಟಡೆ ಪುಣ್ಯವು ಕೆಡುವುದು.
ಇಂತಪ್ಪ ಭಕ್ತಿಯೂ ಪುಣ್ಯವೂ ಚೆನ್ನಬಸವಣ್ಣನಿಗುಂಟಾಗಿ,
ನಾನು ಬದುಕಿದೆನಯ್ಯಾ, ಕೂಡಲಸಂಗಮದೇವಾ. || ೩೧೩ ||

೧೨೭೪

ಪುಣ್ಯವೆಂದರಿಯೆ, ಪಾಪವೆಂದರಿಯೆ,
ಸ್ವರ್ಗವೆಂದರಿಯೆ ನರಕವೆಂದರಿಯೆ.
ಹರಹರ ಮಹಾದೇವ ಶಿವಶರಣೆಂದು ಶುದ್ಧ ನೋಡಯ್ಯಾ,
ಹರಹರ ಮಹಾದೇವ ಶಿವಶರಣೆಂದು ಧನ್ಯ ನೋಡಯ್ಯಾ.
ಕೂಡಲಸಂಗಮದೇವಯ್ಯಾ,
ನಿಮ್ಮನರ್ಚಿಸಿ, ಪೂಜಿಸಿ ನಿಶ್ಚಿಂತನಾದೆ. || ೩೧೪ ||

೧೨೭೫

ಪ್ರಣವಾರೂಢನು, ಪ್ರಣವಪ್ರಕೃತಿಸಂಜ್ಞನು,
ಪ್ರಣವಸಂಗಸಮರಸ,
ನಮ್ಮ ಕೂಡಲಸಂಗಮದೇವರು. || ೩೧೫ ||

೧೨೭೬

ಪ್ರಸಾದಿಯು ಪ್ರಸಾದದಲೊದಗಿದ ಪ್ರಸಾದಿಯನು
ಏನೆಂದುಪಮಿಸುವೆನು?
ಏನೆಂದು ಸ್ತುತಿಸುವೆನಯ್ಯಾ,

ಮಹಾಪ್ರಸಾದಿಗೆ ಮಹಾಘನಪ್ರಸಾದವಾದ ಪ್ರಸಾದಿಯನು?
ಅಗಮ್ಯಪ್ರಸಾದದಲ್ಲಿ ಸ್ವಾಯತವಾದ
ಕೂಡಲಸಂಗಮದೇವಾ,
ನಿಮ್ಮ ಶರಣ ಚೆನ್ನಬಸವಣ್ಣಂಗೆ ನಮೋ ನಮೋ ಎಂಬೆನು. ॥ ೩೧೬ ॥

೧೨೭೭

ಪ್ರಾಣಲಿಂಗ ಪ್ರವೇಶಿತನಾಗಿ ಪ್ರಸಾದದಲ್ಲಿ ಸನ್ನಹಿತನಯ್ಯಾ,
ಲಿಂಗಾರ್ಪಿತವಲ್ಲದೆ ಅನರ್ಪಿತವ ಮುಟ್ಟಲೀಯನಯ್ಯಾ,
ಅಂಗಗುಣಂಗಳೆಲ್ಲವನತಿಗಳೆದು ಪ್ರಸಾದದಲ್ಲಿ ಬ್ರಹ್ಮಚಾರಿಯಾದನು
ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನು. ॥ ೩೧೭ ॥

೧೨೭೮

ಫಲವ ಸಲಿಸುವನ್ನಬರ ಬಿತ್ತು ಸಿಪ್ಪೆ ಉಭಯವು ಇರಬೇಕು.
ಸಾರವ ಸಲಿಸಿದಲ್ಲಿ ಸಮಯ ಉಳಿಯಿತ್ತು.
ನಮ್ಮ ಕೂಡಲಸಂಗಮದೇವರಲ್ಲಿ
ಹಾಗರಿಯಬೇಕು, ಎಲೆ ಘಟ್ಟಿವಾಳಯ್ಯಗಳೆ. ॥ ೩೧೮ ॥

೧೨೭೯

ಬಟ್ಟಬಯಲಲ್ಲಿ ಒಂದು ತಲೆಯಿಲ್ಲದ ಆನೆಯಿದ್ದಿತ್ತು,
ಆನೆ ಬಂದು ಆನೆಯ ನುಂಗಿ ತಾನೆ ಅಳಿಯಿತ್ತು,
ಅಂತರವಿಲ್ಲದ ಒಳಗು, ಅವಲಂಬವಿಲ್ಲದ ಹೊರಗು ನೋಡಾ.
ದಳವಿಲ್ಲದ ಕುಸುಮದ ಗದ್ದುಗೆಯಲ್ಲಿ ಒಡಲಿಲ್ಲದ ಘನವು ಮೂರ್ತಿಗೊಂಡು,
ವಿಚಿತ್ರವಾಯಿತ್ತು ಜಗವೆಲ್ಲ.
ಕೂಡಲಸಂಗಮದೇವರ ಶರಣ ಪ್ರಭುದೇವರ ಶ್ರೀಪಾದಕ್ಕೆ
ಆನು ನಮೋ ನಮೋ ಎಂಬೆನು. ॥ ೩೧೯ ॥

೧೨೮೦

ಬಡಗವಾಗಿಲ ಪೌಳಿಯ ಭರವಸದಿಂ ಪೊಕ್ಕು,
ಪಶ್ಚಿಮದ್ವಾರದ ಧವಳಾರಮಂ ಪಶ್ಚಿಮದಿಂ ಪೊಕ್ಕು,
ತ್ರಿವಿಧಗತಿಯ ಶೂನ್ಯಸಿಂಹಾಸನದ ಮೇಲೆ ತರಹರವಾದಡೆ
ನಂಬುವುದೆನ್ನ ಮನವು.

ಕೂಡಲಸಂಗಮದೇವರು ಸಾಕ್ಷಿಯಾಗಿ,
ನೀನು ನಮ್ಮ ಕೋಪಿಸಿದಡೆ ಕೋಪಿಸು, ಚೆನ್ನಬಸವಣ್ಣಾ. ॥ ೩೨೦ ॥

೧೨೮೧

ಬಣ್ಣವನಿಟ್ಟು ಮೆರೆವ ಅಣ್ಣನ ಭಕ್ತಿ
ಸುಣ್ಣದ ಕಲ್ಲ ಕಟ್ಟಿ ಮಡುವ ಬಿದ್ದಂತೆ ಆಯಿತ್ತು.
ತನ್ನ [ಬಣ್ಣ ತನ್ನ ಸು]ಡುವುದು,
ತನ್ನ ಸುಡದ ಹಾಗೆ ನೆನೆಯಾ, ಕೂಡಲಸಂಗಮದೇವನ. ॥ ೩೨೧ ॥

೧೨೮೨

ಬಲೆಗೆ ಸಿಲ್ಕಿದ ಮೃಗದಂತೆ ನಾನಯ್ಯಾ,
ಮರಿದಪ್ಪಿದ ಹುಲ್ಲೆಯಂತೆ ದೆಸೆದೆಸೆಗೆ ಬಾಯಿಬಿಡುತ್ತಿದ್ದೇನೆ.
ನಾನಾರ ಸಾರುವೆನಯ್ಯಾ, ತಾಯಾಗಿ ತಂದೆಯಾಗಿ ನೀನೇ,
ಸಕಲ ಬಂಧುಬಳಗ ನೀನೇ ಕೂಡಲಸಂಗಮದೇವಾ. ॥ ೩೨೨ ॥

೧೨೮೩

ಬಸವನಿದ್ದಂತೆ ಊರ ಪಶುವನೊಯಿವರೆ ಸಂಗಯ್ಯಾ?
ಕಗ್ಗಾಯಿಯಿದ್ದಂತೆ ಹೂಮಿಡಿಯನೊಯಿವರೆ ಸಂಗಯ್ಯಾ?
ನಾನಿದ್ದಂತೆ ನನ್ನ ಶಿಶು ಸಂಗಯ್ಯನನೊಯಿವರೆ
ಕೂಡಲಸಂಗಯ್ಯಾ? ॥ ೩೨೩ ॥

೧೨೮೪

ಬಸುರೆ ಬಾಯಾಗಿ, ಬಾಯಿ ಬಸುರಾಗಿಪ್ಪುದ ತೊಡೆದ,
ಕಣ್ಣೆ ತಲೆಯಾಗಿ, ತಲೆಯೆ ಕಣ್ಣಾಗಿರಿಸಿದ,
ಕಾಲೆ ಕೈಯಾಗಿ, ಕೈಯೆ ಕಾಲಾಗಿ ನಡೆಸಿದ,
ನೆಳಲನುಟ್ಟು ಸೀರೆಯನೆನಗೆ ಉಡುಗೊರೆಯ ಕೊಟ್ಟನು,
ಮಥನವಿಲ್ಲದ ಸಂಗಸುಖವನೆನಗೆ ತೋರಿದನು.
ಕೂಡಲಸಂಗಮದೇವಾ,
ಪ್ರಭುವಿನ ಶ್ರೀಪಾದಕ್ಕೆ ಶರಣೆನುತ್ತಿರ್ದೆನು. ॥ ೩೨೪ ॥

೧೨೮೫

ಬಾಗಿಲ ಮುಂದೆ ಬಾಳೆ ಬಿತ್ತುವುದಯ್ಯಾ.
ಬಾಳೆಗೊನೆವಾಗದ ಮುನ್ನ
ಕೂಡಿಕೊಳ್ಳಿ, ಕೂಡಲಸಂಗಮದೇವನ. ॥ ೩೨೫ ॥

೧೨೮೬

ಬಾಳತ್ವಕ್ಕೆಂದು ಮಧುವ ತಂದು
ಕೊಡನ ತುಂಬಿದ ಜೇನಹುಳುವಿನಂತೆ ತಾನುಂಬುದು,
ತನ್ನೆಂಜಲ ಜಗವುಂಬುದು ನೋಡಯ್ಯಾ.
ಶಿವಭಕ್ತನಾಗಿ ಶಿವಾನ್ನವನೆ ಕೊಂಡು,
ಒಕ್ಕಮಿಕ್ಕ ವಸ್ತುವ ಜಂಗಮಕ್ಕಿಕ್ಕುವಾತನೆ ಭಕ್ತ,
ಕೊಂಡಾತನೆ ಜಂಗಮ.
ನಡುವೆ ನೀ ಬಂದು ಭಂಡು ಮಾಡದಿರೈ
ಕೂಡಲಸಂಗಮದೇವಾ. ॥ ೩೨೬ ॥

೧೨೮೭

ಬಿತ್ತು ಬೆಳೆಯಿತ್ತು, ಕೆಯ್ಯ ಕೊಯ್ಯಿತ್ತು, ಗೂಡು ಮುರಿಯಿತ್ತು,
ಕುತ್ತರಿಯೊಟ್ಟಿತ್ತು, ಒಕ್ಕಿತ್ತು ತೂರಿತ್ತು ಅಳೆಯಿತ್ತು, ಸಲಗೆ ತುಂಬಿತ್ತು.
ಕೂಡಲಸಂಗಮದೇವಯ್ಯಾ,
ಮೇಟಿ ಕಿತ್ತಿತ್ತು, ಕಣ ಹಾಳಾಯಿತ್ತಯ್ಯಾ. ॥ ೩೨೭ ॥

೧೨೮೮

ಬಿತ್ತದೆ ಬೆಳೆಯುವೆ ಬೆಳೆದ ಹೆಬ್ಬೆಳಸಿನ ರಾಶಿಯ ನೋಡಾ,
ಸುಗಂಧ ಬಂಧುರದಂತೆ ಹುಟ್ಟುತ್ತಿಪ್ಪ ಪರಿಮಳ!
ಆದಿ ಅನಾದಿಯಿಲ್ಲದ ಮುನ್ನ ತನ್ನಿಂದವೆ ತಾನಾಗಿರ್ದ ಕಾರಣ
ಮುಟ್ಟದೆ ತಟ್ಟದೆ ಗುರುಕಾರುಣ್ಯವ ಪಡೆದು, ಲಿಂಗ ಸಯವಾಗಿ,
ಎನಗೆ ಗತಿಪಥವ ತೋರಿಸಬೇಕೆಂದು ಆಗಾದನು,
ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನು. ॥ ೩೨೮ ॥

೧೨೮೯

ಬೆಟ್ಟದ ಕಲ್ಲು ಸೋರೆಯ ಕೂಡೆ ಆಡಿದಂತಾಯಿತ್ತಯ್ಯ,
ನೀತಿಯಿಲ್ಲದ ಜಾತಿಯ ಕೂಡಿ.
ಅವರ ಪರಿಯಂತೆ,
ಸಂಗವಲ್ಲದ ಸಂಗವ ಮಾಡಿದಡೆ ಭಂಗತಪ್ಪದು, ಕೂಡಲಸಂಗಮದೇವಾ. || ೩೧೯ ||

೧೨೯೦

ಬೆದರಿಸುವ, ಬೆಚ್ಚಿಸುವ, ಮುಯ್ಯಾನುವ,
ಮೇಳವಾಡುವ, ಆಳಿಗೊಳಿಸುವ,
ಅಳಲಿ ನುಡಿಸುವ, ಬಳಲಿಸುವನೊತ್ತಿ ನೋಡುವ,
ಒಳಹೊರಗೆ ಹೊಳೆದು ಹೋಹ, ಕೇಳದೆ ಬಹ,
ಹೇಳು ಮಾಡುವನಾಳವಾಡುವ, ಹೊಳೆದು ಹೋಹ,
ನಾ ಇದಕ್ಕಂಜೆ ಕೂಡಲಸಂಗಮದೇವಾ. || ೩೨೦ ||

೧೨೯೧

ಬೆದರಿಸುವ ಸಂಗ, ಬೆಚ್ಚಿಸುವ ಸಂಗ,
ಬೆಚ್ಚಿ ಬಿಸುಡುವ ಸಂಗ,
ತನ್ನ ನಚ್ಚಿ ಮಚ್ಚಿ ಮುಯ್ಯಾಂತೆನೆಂದಡೆ ಮೇಳವಾಡುವ ಸಂಗ,
ಹೋಲೈಸುವ ಸಂಗ, ಆಳಿಗೊಳಿಸುವ ಸಂಗ,
ಇದಿರ ಕೈಯಲ್ಲಿ ಅಳಲಿಸುವ ಸಂಗ,
ಬಳಲಿಸುವ ಸಂಗ, ಒತ್ತಿ ನೋಡುವ ಸಂಗ ಒಳಹೊರಗೆನ್ನದು.
ಕೂಡಲಸಂಗಮದೇವಯ್ಯಾ,
ಮಡಿವಾಳ ಮಾಚಿತಂದೆಯ ಕೃಪೆಯುಳ್ಳನ್ನಕ್ಕರ ನಾನಂಜೆನು. || ೩೨೧ ||

೧೨೯೨

ಬೇಡದಿರು ಶಿವಭಕ್ತರಲ್ಲದವರ, ಬೇಡಿ ಬೋಡಾಗದಿರು,
ಬೇಡಿದಡೆ ಹುರುಳಿಲ್ಲ.
ಬೇಡಿದ ಕೈಗೆ ಕಡೆಯಿಲ್ಲದೆ ಕೊಡಬಲ್ಲರು
ಕೂಡಲಸಂಗನ ಶರಣರು. || ೩೨೨ ||

೧೨೯೩

ಬ್ರಹ್ಮನೆಂದೆನ್ನೆ ಬ್ರಹ್ಮಗನೆಂದೆನ್ನೆ, ನಾರಣನೆಂದೆನ್ನೆ ನಾರುಗನೆಂದೆನ್ನೆ
ಜಿನನೆಂದೆನ್ನೆ, ಜಿನುಗನೆಂದೆನ್ನೆ, ಭೈರವನೆಂದೆನ್ನೆ ಭೈರುಗನೆಂದೆನ್ನೆ.
ವೀರಭದ್ರ ಕೊಲುವಲ್ಲಿ, ವಿಷವಟ್ಟಿ ಸುಡುವಲ್ಲಿ
ಕೂಡಲಸಂಗಮದೇವಾ, ಶಿವಧೋ ಶಿವಧೋ. || ೩೩೩ ||

೧೨೯೪

ಭಂಡವ ತುಂಬಿದ ಬಳಿಕ
ಸುಂಕವ ತೆತ್ತಲ್ಲದೆ ವಿರಹಿತ ಹೋಗಬಾರದು.
ಲಿಂಗಸಂಬಂಧಿಯಾದಡೆ ಜಂಗಮಪ್ರೇಮಿ ನೀನಾಗು,
ಅಲ್ಲದಿದ್ದಡೆ ಪರುಷ ದೊರೆಕೊಳ್ಳದಯ್ಯಾ,
ಜಂಗಮದಲ್ಲಿ ನಿರುತ ಭರಿತ, ಕೂಡಲಸಂಗಮದೇವ. || ೩೩೪ ||

೧೨೯೫

ಭಕ್ತನ ಕಾಯುವ ಜಂಗಮ ಧರಿಸಿಪ್ಪ ನೋಡಾ,
ಜಂಗಮದ ಪ್ರಾಣವ ಭಕ್ತ ಧರಿಸಿಪ್ಪ ನೋಡಾ.
ಭಕ್ತನಲ್ಲಿಯೂ ಭಕ್ತಜಂಗಮವೆರಡೂ ಸನ್ನಹಿತ,
ಜಂಗಮದಲ್ಲಿಯೂ ಜಂಗಮಭಕ್ತವೆರಡೂ ಸನ್ನಹಿತ,
ಜಂಗಮಕ್ಕಾದಡೂ ಭಕ್ತಿಯೆ ಬೇಕು,
ಭಕ್ತಂಗೆ ಭಕ್ತಿಸ್ಥಲವೆ ಬೇಕು.
ಭಕ್ತನ ಅರ್ಥಪ್ರಾಣಾಭಿಮಾನಕ್ಕೆ ತಾನೆ ಕಾರಣನೆಂದು ಬಂದ ಜಂಗಮ
ಆ ಭಕ್ತನ ಮನೆಗೆ ತಾನೆ ಕರ್ತನಾಗಿ ಹೊಕ್ಕು,
ತನುಮನಧನಂಗಳೆಲ್ಲವನೊಳಕೊಂಡು,
ಆ ಭಕ್ತನ ಪಾವನವ ಮಾಡಬಲ್ಲಡೆ ಆತ ಜಂಗಮವೆಂಬೆ.
ಆ ಜಂಗಮದ ಗಳಗರ್ಜನೆಗೆ ಸೈರಿಸಿ,
ಮುಡುಹಿಂಗ ಮುನ್ನೂರು ಪಟ್ಟವ ಕಟ್ಟಿದಡೆ
ಆತ ಭಕ್ತನೆಂಬೆ.
ತನ್ನ ಮಠಕ್ಕೆ ತಾ ಬಹಡೆ ಮುನಿಸುಂಟೆ?
ಕೂಡಲಸಂಗನ ಶರಣರ ಮನೆಯ ಬಾಗಿಲುಗಾಹಿ ನಾನಾಗಿರ್ದು
ಕರ್ತರು ಗೃಹಕ್ಕೆ ಬಂದಡೆ ಬೇಕು ಬೇಡೆನ್ನೆ. || ೩೩೫ ||

೧೨೯೬

ಭಕ್ತಿಯುಕ್ತಿಯನರಿಯೆ, ಷೋಡಶೋಪಚಾರವನರಿಯೆ,
ಭಾವನಿರ್ಭಾವವನರಿಯೆ, ಜ್ಞಾನಮಹಾಜ್ಞಾನವನರಿಯೆ.
ಕೂಡಲಸಂಗಮದೇವಯ್ಯಾ,
ಮಡಿವಾಳತಂದೆಗಳ ಪಾದಕ್ಕೆ ನಮೋ ನಮೋ ಎನುತಿರ್ದೆನು. ‖ ೩೩೬ ‖

೧೨೯೭

ಭಕ್ತಿಯೆಂಬ ಪಿತ್ತ ತಲೆಗೇರಿ ಕೈಲಾಸದ ಬಟ್ಟೆಯ ಹತ್ತುವ ವ್ಯರ್ಥರ ಕಂಡು
ಎನ್ನ ಮನ ನಾಚಿತ್ತು, ನಾಚಿತ್ತು.
ಕೈಲಾಸವೆಂಬುದೇನೊ, ಪೃಥ್ವಿಯ ಮೇಲೊಂದು ಮೊರಡಿ,
ಆ ಪೃಥ್ವಿಗೆ ಲಯವುಂಟು, ಆ ಮೊರಡಿಗೆಯು ಲಯವುಂಟು,
ಅಲ್ಲಿರ್ಪ ಗಂಗೆವಾಳುಕಸಮರುದ್ರರಿಗೂ ಲಯವುಂಟು.
ಇದು ಕಾರಣ,
'ಯದ್ದೃಷ್ಟಂ ತನ್ನಷ್ಟಂ' ಎಂಬ ಶ್ರುತಿಯ ನೋಡಿ ತಿಳಿದು,
ಬಟ್ಟಬಯಲು ತುಟ್ಟತುದಿಯ ಮೆಟ್ಟಿನಿಂದ
ಕೂಡಲಸಂಗಾ, ನಿಮ್ಮ ಶರಣ. ‖ ೩೩೭ ‖

೧೨೯೮

ಭಕ್ತಿಯೆಂಬುದು ಅನಿಯಮ ನೋಡಯ್ಯಾ,
ಅದು ವಿಷದ ಕೊಡ: ತುಡುಕಬಾರದು,
ಅಂಗಕ್ಕೆ ಹಿತವಲ್ಲ, ಸಿಂಗಿ ನೋಡಯ್ಯಾ,
ಅದು ವಿಚಿತ್ರ, ವಿಸ್ಮಯ ಕೂಡಲಸಂಗಮದೇವಾ. ‖ ೩೩೮ ‖

೧೨೯೯

ಭಕ್ತಿರತಿಯೆಂಬ ಮದುವೆಗೆ—
ಕಣಗಿಲೆಲೆಯ ಉಂಗುರವನಿಕ್ಕಿ,
ಮೊಲ್ಲೆಮಲ್ಲಿಗೆಯ ತೆರೆಯ ಕಟ್ಟಿ,
ಸೇವಂತಿಗೆಯ ಚಪ್ಪರವನಿಕ್ಕಿ,
ಪುಷ್ಪಜಾತಿಗಳೆಲ್ಲಾ ನಿಬ್ಬಣವ ಬನ್ನಿರೇ.
ನಮಗೆಯು ನಮ್ಮ ಕೂಡಲಸಂಗಮದೇವಂಗೆಯು ಮದುವೆ. ‖ ೩೩೯ ‖

೧೩೦೦

ಭವಭವದಲ್ಲಿ ಭಕ್ತನಾದಡೆ ಆ ಭವವೆ ಲೇಸು ಕಂಡಯ್ಯಾ.
ಲಿಂಗಾರಾಧನೆ, ಜಂಗಮಾನುಭವ ಅಂದಂದಿಗೆ ಪರಮಸುಖವಯ್ಯಾ.
ಎಂದೆಂದೂ ನಾನಿದನೆ ಬಯಸುವೆ ತಂದೆ, ಕರುಣಿಸಯ್ಯಾ
ಕೂಡಲಸಂಗಮದೇವಾ. ॥ ೩೪೦ ॥

೧೩೦೧

ಭವರೋಗವೈದ್ಯನೆಂದು ನಂಬಿದೆ ನಾನು,
ಒಮ್ಮಿಂಗೆ ಕರುಣಿಸಯ್ಯಾ ಭಕ್ತಿಫಲಪ್ರದಾಯಕ.
ನೀನು ಒಮ್ಮಿಂಗೆ ಕರುಣಿಸಯ್ಯಾ
ಜಯ ಜಯ ಶ್ರೀ ಮಹಾದೇವ ಎನುತಿರ್ದೆನು.
ಕೂಡಲಸಂಗಮದೇವಯ್ಯಾ,
ನಿಮ್ಮ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು. ॥ ೩೪೧ ॥

೧೩೦೨

ಭವವಿಲ್ಲದಡೇನು, ಬಂಧನವಿಲ್ಲದಡೇನು,
ಶಿವಗಣಂಗಳೆಲ್ಲರ ಮನಕ್ಕೆ ಬಾರದುವೆ ಭವಬಂಧನ ನೋಡಾ.
ಪರಹಿತಾರ್ಥವಾಗಬೇಕೆಂದು ಲಿಂಗವ ಕೊಟ್ಟಡೆ
ನಿಮ್ಮ ಪ್ರಮಥರ ಮುಂದೆ ಶಿವ ಮುನಿದು ಮರ್ತ್ಯಲೋಕಕ್ಕೆ ಕಳುಹಿಸಿದನು.
ಅಂಗದ ಮೇಲೆ ಲಿಂಗವುಳ್ಳುದೆಲ್ಲವೂ ಸಂಗಮನಾಥನೆಂದು ನಂಬಿದಲ್ಲಿ
ನಿಮ್ಮ ಪ್ರಮಥರೆನ್ನನೊಳಗಿಟ್ಟುಕೊಂಡರು.
ಜಂಗಮಮುಖದಲ್ಲಿ ಲಿಂಗವನರಿಸಿಕೋ ಎಂದಡೆ
ದಾಸೋಹವೆಂಬ ಪಸರವನಿಕ್ಕಿದೆನು.
ಕೂಡಲಸಂಗಮದೇವರ ಮುಂದೆ
ಜಂಗಮಮುಖದಲ್ಲಿ
ಎಂದು ಸುಖಿಯಪ್ಪೆನು ಹೇಳಾ, ಚೆನ್ನಬಸವಣ್ಣಾ. ॥ ೩೪೨ ॥

೧೩೦೩

ಭವಿಸಂಗವನೊಲ್ಲೆನೊಲ್ಲೆ–
ಆ ಸಂಗ ಮುಂದೆ ಅನಂತ ಭವಂಗಳಲ್ಲಿ ಬರಿಸುವುದಾಗಿ,
ಅನ್ಯ ದೈವದ ಭಜನೆಯನೊಲ್ಲೆನೊಲ್ಲೆ–

ಆ ಭಜನೆ ಮುಂದೆ ಅನಂತಘೋರವನುಣಿಸುವುದಾಗಿ.
ಈ ಉಭಯ ಜಡತೆಯ ಹೊದ್ದದೆ ಹಿಂಗಿ ನಿಂದೆ,
ಕೂಡಲಸಂಗಮದೇವಾ. || ೩೪೩ ||

೧೩೦೪

ಭಾವಭ್ರಮೆವಂತರು ಬಾರದಿರಿ,
ಜ್ಞಾ[ನಹೀನರು] ಬೇಗ ಹೋಗಿ,
ತ್ರಿವಿಧಮಲಕ್ಕೆ ಕಚ್ಚಿ ಮುಟ್ಟಿ ಹೊಡೆದಾಡುವರತ್ತಲಿರಿ.
ನಿರುತ ಸ್ವಯಾನುಭಾವರು ಬನ್ನಿ,
ಪರಬ್ರಹ್ಮಸ್ವರೂಪರು ಬನ್ನಿ,
ಏಕ[ಲಿಂಗನಿಷ್ಠಾ]ಪರ ದೃಢವಂತರು ಬನ್ನಿ,
ಸನ್ಮಾರ್ಗ ಸತ್ಕ್ರಿಯಾವಂತರು ಬನ್ನಿ
ಎಂದು ಎನಗೆ ಕೊಟ್ಟ ಕಾಯಕ
ಕೂಡಲಸಂಗಮದೇವರಲ್ಲಿ. || ೩೪೪ ||

೧೩೦೫

ಭೂಮಿಯ ಸಾರಾಯದಲೊಂದು ತರು ಬೆಳೆಯಿತ್ತು,
ನವರಸಫಲವನಿತ್ತಿತ್ತು ನೋಡಾ.
ಏನೆಂದರಿಯದೆ ಎಂತೆಂದರಿಯದೆ ಮರುಳಾದೆನು,
ನಾನು ಮಾರಾರಿಯ ಬಲೆಯಲ್ಲಿ ಸಿಲುಕಿದೆನಯ್ಯಾ.
ಕೂಡಲಸಂಗಮದೇವಯ್ಯಾ,
ಚೆನ್ನಬಸವಣ್ಣನಿಂದಲಾನು ಬದುಕಿದೆನು. || ೩೪೫ ||

೧೩೦೬

ಭೇರುಂಡನ ಪಕ್ಷಿಗೆ ದೇಹ ಒಂದೆ,
ತಲೆಯೆರಡರ ನಡುವೆ ಕನ್ನಡಿವ ಕಟ್ಟಿ
ಒಂದು ತಲೆಯಲ್ಲಿ ಹಾಲನೆರೆದು
ಒಂದು ತಲೆಯಲ್ಲಿ ವಿಷವನೆರೆದಡೆ
ದೇಹವೊಂದೇ, ವಿಷ ಬಿಡುವುದೇ ಅಯ್ಯಾ?
ಲಿಂಗದಲ್ಲಿ ಪೂಜೆಯ ಮಾಡಿ ಜಂಗಮದಲ್ಲಿ ನಿಂದೆಯ ಮಾಡಿದಡೆ
ನಾನು ಬೆಂದೆ ಕಾಣಾ, ಕೂಡಲಸಂಗಮದೇವಾ. || ೩೪೬ ||

೧೩೦೭

ಮಡಿವಾಳ ಮಡಿವಾಳನೆಂಬರು, ಮಡಿವಾಳನೆಂಬುದನಾರೂ ಅರಿಯರು,
ಎನ್ನ ಮಲತ್ರಯದಲ್ಲಿ ಹೊದಕುಳಿಗೊಂಡ ಮನದ ಮೈಲಿಗೆಯ ತಂದು,
ತನ್ನ ಮನೆಗೆ ಕೊಂಡುಹೋಗಿ ಹಾಯ್ಕಿದಡೆ,
ಕೈಮುಟ್ಟಿದಡೆ ಆಗದೆಂದು ತನ್ನ ಪಾದದೊಳಗೆ ಮೆಟ್ಟಿ, ಅಲುಬಿ ಸೆಳೆದನಯ್ಯಾ.
ತನ್ನ ನಿರ್ಮಲವ ಕೊಟ್ಟನೆನಗೆ,
ಆ ಕೊಟ್ಟ ಬೀಳುಡಿಗೆಯ ಹೊದೆದುಕೊಂಡೆನಾಗಿ,
ಮಡಿವಾಳ ಮಾಚಿತಂದೆಯ ಕೃಪೆಯಿಂದಲಾನು ಬದುಕಿದೆನಯ್ಯಾ,
ಕೂಡಲಸಂಗಮದೇವಾ. || ೩೪೭ ||

೧೩೦೮

ಮತಿಗೆಟ್ಟು ಧೃತಿಗುಂದಿ ಬೇಳಾದೆನಯ್ಯಾ,
ಗತಿಗೆಟ್ಟು ವ್ರತಗೆಟ್ಟು ಧಾತುಗೆಟ್ಟ ಬಾಹಿರ ನಾನಯ್ಯಾ,
ಕಪಿಸೋರೆ ಮುತ್ತಂತಾಯಿತ್ತೆನ್ನ ಭಕ್ತಿ.
ಸಡೆಲಿಂಗ ಜಂಗಮ ಮನೆಗೆ ಬರಲು
ಇಂಬುಗೊಳಲರಿಯದೆ ಕೆಟ್ಟ ಕೇಡನೇನೆಂದುಪಮಿಸುವೆನಯ್ಯಾ,
ನವರತ್ನವ ಕಿತ್ತು ಮಡುವಿನೊಳಗೆ ಹಾಯ್ಕಿದ ಕಪಿಯಂತಾಯಿತ್ತೆನ್ನ ಭಕ್ತಿ.
ಕೂಡಲಸಂಗಮದೇವರ ತಂದುಕೊಟ್ಟಡೆ
ನಿಮ್ಮ ಚಮ್ಮಾವುಗೆಯ ಹೊತ್ತು ಕುಣಿದಾಡುವೆನು
ಕಾಣಾ, ಚೆನ್ನಬಸವಣ್ಣಾ. || ೩೪೮ ||

೧೩೦೯

ಮನದೊಡೆಯ ಮನೆಗೆ ಬಂದಡೆ ಕನಕದ ತೋರಣವ ಕಟ್ಟಿ,
ಪಡುಸಮ್ಮಾರ್ಜನೆಯ ಮಾಡಿ, ರಂಗವಾಲಿಯನಿಕ್ಕಿ,
ಉಘೇ, ಚಾಂಗು, ಭಲಾ ಎಂಬೆನು.
ಕೂಡಲಸಂಗಮದೇವಾ,
ನಿಮ್ಮ ಶರಣ ಪ್ರಭುದೇವರು ಬಂದಡೆ
ಉಬ್ಬಿ ಕೊಬ್ಬಿ ನಲಿನಲಿದಾಡುವೆ. || ೩೪೯

೧೩೧೦

ಮನ ಮಜ್ಜನ, ತನು ಸಿಂಹಾಸನ.
ನೆನಹೆ ನಾಗವತ್ತಿಗೆಯಾಯಿತ್ತಾಗಿ

ಅರಿಯಲಿಲ್ಲ, ಮರೆಯಲಿಲ್ಲ ತೆರಹಿಲ್ಲದೆ ಇದ್ದುದಾಗಿ.
ಎಲೆ ಕೂಡಲಸಂಗಮದೇವಯ್ಯಾ,
ಈಯನುವ ಅಲ್ಲಮ ತೋರಿದನು. || ೩೫೦ ||

೧೩೧೧

ಮನ ಮುಟ್ಟಿದ ಭಕ್ತಿಗೆ ತನುವೆ ಅರ್ಪಿತ,
ತನು ಮುಟ್ಟಿದ ಭಕ್ತಿಗೆ ಮನವೆ ಅರ್ಪಿತವಯ್ಯಾ,
ಎನ್ನ ತನುಮನವೆರಡೂ ನಿಮ್ಮ ಚರಣಕ್ಕೆ ನೇದ್ಯ ನೋಡಯ್ಯಾ.
ದೀರ್ಘದಂಡ ನಮಸ್ಕಾರಂ ನಿರ್ಲಜ್ಜಂ ಗುರುಸನ್ನಿಧೌ |
ಶರೀರಮರ್ಥಂ ಪ್ರಾಣಂ ಚ ಸದ್ಗುರುಭ್ಯೋ ನಿವೇದಯೇತ್ || ಎಂದುದಾಗಿ
ತ್ರಾಹಿ ತ್ರಾಹಿ ಶರಣಾರ್ಥಿ
ನೀವೇ ಬಲ್ಲಿರಿ ಕೂಡಲಸಂಗಮದೇವಾ. || ೩೫೧ ||

೧೩೧೨

ಮನವು ಮಹದೊಳಗೆ ಲೀಯವಾಗಿ
ಘಟವಿಡಿದು ಸುಳಿದಾಡುವ ಮಹಾಮಹಿಮಂಗೆ ಅಹುದಾಗದೆಂಬ ಭ್ರಾಂತೇಕೊ?
ಹಿಡಿತಹುದು, ಬಾರದಡೆ ಶಿರವನರಿದು ತಹುದು.
ಕೂಡಲಸಂಗಮದೇವರು ಬಲ್ಲಂತೆ ಮಾಡಲಿ. || ೩೫೨ ||

೧೩೧೩

ಮನೆಮನೆದಪ್ಪದೆ ಹಗಹದ ಬತ್ತ ಎನಗಿಲ್ಲೆಂದು ಬೆಂಬೀಳಲೇಕಯ್ಯಾ?
ಶಿವಶರಣವೆಂಬ ಹಗಹದ ಬತ್ತ ಭವಭವದಲ್ಲಿ ಬಳಸಲುಂಟು.
ತವನಿಧಿಯ ಹಡೆದ ನಮ್ಮ ದಾಸಯ್ಯನುಂಟು,
ಕೂಡಲಸಂಗಮದೇವಾ. || ೩೫೩ ||

೧೩೧೪

ಮನ್ನಣೆ ತಪ್ಪಿದ ಬಳಿಕ ಅಲ್ಲಿರಬಹುದೆ?
ಸಲಿಗೆ ತಪ್ಪಿದ ಬಳಿಕ ಸಲುವುದೆ ಮಾತು?
ಶಿವಿಮು ತಪ್ಪಿದಡೆ ಸಾವೊಂದು ತಪ್ಪದು.
ಒರಿವೆ ಚಿಂತಿಸಿ ಬಳಲಿ ಕೆಡಬೇಡ ಮನವೆ.
ಅಹುದು ಆಗದೆಂಬ ಸಂದೇಹವುಳ್ಳಡೆ ಅಹುದೆ?
ಕೂಡಲಸಂಗಯ್ಯ ಕೊಟ್ಟಲ್ಲದಿಲ್ಲ. || ೩೫೪ ||

೧೩೧೫

ಮರ ಗಿಡು ಬಳ್ಳಿ ಧಾನ್ಯಂಗಳ ಬೆಳಸೆಲ್ಲವ ತರಿತರಿದು
ಪ್ರಾಣವ ಕೊಂದುಂಡು, ಶರೀರವ ಹೊರೆವ ದೋಷಕ್ಕೆ
ಇನ್ನಾವುದು ವಿಧಿಯಯ್ಯಾ?
ಒಂದಿಂದ್ರಿಯ ಮೊದಲಾಗಿ ಐದಿಂದ್ರಿಯ ಕಡೆಯಾದ
ಜೀವಜಾಲದಲ್ಲಿದೆ ಚರಾಚರವೆಲ್ಲ.
ಅದು ಕಾರಣ,
ಕೂಡಲಸಂಗನ ಶರಣರು ಲಿಂಗಕ್ಕರ್ಪಿಸಿ ಪ್ರಸಾದವ ಕೊಂಡು
ನಿರ್ದೋಷಿಗಳಾಗಿ ಬದುಕಿದರು. || ೩೫೫ ||

೧೩೧೬

ಮರಹಿಂದಲಾದ ಕುರುಹಿನ ಕಾಯುವ ಧರಿಸಿಕೊಂಡು ಬಂದಡೆ,
ಅದು ಎನಗೆ ಕುಂದಲ್ಲ ನೋಡು ದೇವಾ!
ನಿಮ್ಮ ಲೀಲೆಯಿಂದ ಹಿಂದಾರು ಜನ್ಮದಲ್ಲಿ ಬಂದಡೆ,
ಅದು ನಿಮ್ಮ ಜಂಗಮಭಕ್ತಿಯಿಂದ ಕಳೆದೆ ನೋಡಯ್ಯಾ.
ಕಾಯುವಿಲ್ಲದ ಜಂಗಮಕ್ಕೆ ಪ್ರಾಣವಿಲ್ಲದ ಮಾಟ,
ಒಲ್ಲೆನೆಂಬುದಕ್ಕೆ ಕಾರಣವೇನು ಹೇಳಾ, ಕೂಡಲಸಂಗಮದೇವಾ? || ೩೫೬ ||

೧೩೧೭

ಮರುಗದ ಗಿಡುವಿನಂತೆ ಹುಟ್ಟುತ್ತಲೆ ಪರಿಮಳ,
ಎರವಿನ ಬಣ್ಣದೊರೆಗೆಡಿಸಿದ ಪರಿಯ ನೋಡಾ.
ಹರನ ಪ್ರೇರಣೆಯೊಳಗೆ ಹಿರಿದೊಂದು ವಾರುಧಿ,
ವಾರುಧಿಯೊಳಗಣ ಕಮಲ ಬಾಡಿ,
ಕಮಲದೊಳಗೆ ಸುಳಿವ ಭ್ರಮರನ ಪಕ್ಕ ಮುರಿದು ಉರುಳಿದಡೆ
ನಿರಂಜನವಾಯಿತ್ತು ನೋಡಾ.
ಹರಿಗೊಯಿದ ಮಿಂಚಿನ ಗೊಂಚಲ ನೆರೆವೋತು,
ಇಂದುಕೋಟಿಪ್ರಭೆಯ ಶಾಂತಿಯನೊಳಕೊಂಡು
ಕೂಡಲಸಂಗಮದೇವರ ನೆರೆವೋತ
ಪ್ರಭುದೇವರ ಶ್ರೀಪಾದದಲ್ಲಿ ಭೃಂಗನಾಗಿ ಬದುಕಿದೆನು. || ೩೫೭ ||

೧೩೧೮

ಮರುಳ ಹಿಡಿದಿಹೆನೆಂಬವರು ಮರುಳಾಗಿ ಹಿಡಿಯಬೇಕು ಕೇಳಿರೆ.
ಬಹುಬುದ್ಧಿಯ ಜಡರಿಗೆ ಹಿಡಿಯಬಾರದು.
ನಿರವಯಲ ಬಯಲ ಹಿಡಿಯಬಹುದೆ?
ಕೂಡಲಸಂಗಮದೇವರ ಭಾವಶಸ್ತ್ರದಿಂದ ಗೆಲಿದುಕೊಂಡು ಬನ್ನಿ. || ೩೫೮ ||

೧೩೧೯

ಮಹಂತಿನ ಕೂಡಲದೇವರೆಂಬ ಪಾಷಂಡಿ, ವೇಷಧಾರಿ!
ಇ[ವ]ರ, ಘಾತಕ ಮೂಳ ಮೂಳ ಹೊಲೆಯರನೇನೆಂಬೆನಯ್ಯಾ.
ಮಹಂತಿನ ಪರಿವ್ರತವೇತೆಂದರಿಯರು,
ಆ ಮಹಂತಿನ ಘನವನೆಂತೆಂದಡೆ:
ಅಂತಃಪರಂಜ್ಯೋತಿಸ್ವರೂಪನು,
ನಿತ್ಯನಿರಂಜನನು,
ನಿಃಕಳಂಕನು, ನಿರ್ದೋಷನು, ನಿರಾಮಯನು, ನಿಶ್ಶೂನ್ಯನು.
ಅನಂತಬ್ರಹ್ಮಾಂಡಗಳ ನೆನಹು ಮಾತ್ರದಲ್ಲಿ ನಿರ್ಮಿಸಿದ, ಕರ್ತೃ.
ಪಾದದಲ್ಲಿ ಪಾತಾಳಲೋಕ, ನೆತ್ತಿಯಲ್ಲಿ ಸತ್ಯಲೋಕ,
ಕುಕ್ಷಿಯಲ್ಲಿ ಹದಿನಾಲ್ಕು ಲೋಕವ ತಾಳಿಹ, ವಿಶ್ವಪರಿಪೂರ್ಣನು.
ಇಂತಪ್ಪ ಪರಂಜ್ಯೋತಿಮಹಂತನು
ಇಂತಿವರೆಲ್ಲ ತನ್ನ ಸರ್ವಾಂಗದಲ್ಲಿ [ಮು]ಡುಗಿಸಿಕೊಂಡು,
ನಿಬ್ಬೆರಗಿಯಾಗಿ, ಶಬ್ದಶೂನ್ಯನಾಗಿರಬಲ್ಲಡೆ
ಮಹಂತಿನ ಕೂಡಲದೇವರೆಂಬೆನಯ್ಯಾ.
ಇವನರಿಯದ ವೇಷಧಾರಿ ಲಾಂಛನಿ ಗರ್ವಿಗಳನೇನೆಂಬೆನಯ್ಯಾ?
ಕೂಡಲಸಂಗಮದೇವರಲ್ಲಿ ಸಲ್ಲದ ನರಕಿಗಳು. || ೩೫೯ ||

೧೩೨೦

ಮಹಾಪ್ರಳಯದೊಳು
ಧರೆ ಜಲದಲ್ಲಡಗಿತ್ತು, ಬ್ರಹ್ಮ ವಿಷ್ಣುವಿನಲ್ಲಡಗಿದ,
ಜಲ ಅಗ್ನಿಯಲ್ಲಡಗಿತ್ತು, ವಿಷ್ಣು ರುದ್ರನಲ್ಲಡಗಿದ,
ಅಗ್ನಿ ವಾಯುವಿನಲ್ಲಡಗಿತ್ತು, ರುದ್ರ ಈಶ್ವರನಲ್ಲಡಗಿದ,
ವಾಯುವಾಕಾಶದಲ್ಲಡಗಿತ್ತು, ಈಶ್ವರ ಸದಾಶಿವನಲ್ಲಡಗಿದ,
ಆಕಾಶ ಅಕ್ಷರ ಮೂರೆಂಬ ಓಂಕಾರದಲ್ಲಡಗಿತ್ತು. ಸದಾಶಿವನತೀತನಲ್ಲಡಗಿದ,
ಅತೀತ ಆದಿಯಲ್ಲಡಗಿದ, ಆದಿ ಅನಾದಿಯಲ್ಲಡಗಿತ್ತು,

ಅನಾದಿ ನಿಜದ ಅಹಂಕಾರದಲ್ಲಿಳಿಯಿತ್ತು,
ನಿಜವು ತಾನು ತಾನು ಆಗಿದ್ದಿತು,
ಈ ಭೇದವ ಕೂಡಲಸಂಗನಲ್ಲಿ ಪ್ರಭುವೆ ಬಲ್ಲ ಕಾಣಾ ಚೆನ್ನಬಸವಣ್ಣಾ. ॥ ೩೬೦ ॥

೧೩೨೧

ಮಹಾಲಿಂಗದ ಸ್ಥಾನಂಗಳು
ಮಹಾಲಿಂಗದ ಪೆಸರಲ್ಲದೆ ಲಿಂಗ ಬೇರೆ ರೂಪು ನಿರೂಪಿಲ್ಲ.
ಲಿಂಗಬೇರೆ ಕಾಯುಸಂಧಿಯಲ್ಲ,
ಲಿಂಗಬೇರೆ ಜೀವಸಂಧಿಯಲ್ಲ.
ಲಿಂಗ ಬೇರೆ ಮಹಾಘನದಿಂದತ್ತಲಿ
ಕೂಡಲಸಂಗಮನ ನಿಲವು ಅರಿಗೆಯೂ ಅರಿಯಬಾರದು. ॥ ೩೬೧

೧೩೨೨

ಮಾಡುವಂತಿರಬೇಕು ಮಾಡದಂತಿರಬೇಕು.
ಮಾಡುವ ಮಾಟದೊಳಗೆ ತಾನಿಲ್ಲದಂತಿರಬೇಕು.
ಕೂಡಲಸಂಗಮದೇವರ
ನೆನೆವುತ್ತ ನೆನೆವುತ್ತ ನೆನೆಯದಂತಿರಬೇಕು. ॥ ೩೬೨ ॥

೧೩೨೩

ಮಾಡುವ ಮಾಡಿಸಿಕೊಂಬ ಎರಡರ ನಡುವೆ
ಸಂದುಭೇದ ಉಂಟೆ ದೇವಾ?
ಕಾಯ ಪ್ರಾಣದ ಸಂಗದಂತೆ ಇದ್ದುದಲ್ಲದೆ.
ಬಲ್ಲಂತೆ ಮಾಡು, ಬಲ್ಲಂತೆ ನೀಡು,
ನಾನರಿಯೆನೆಂಬುದು ನಿಮಗುಚಿತವೆ ?
ಮಾಡುವಲ್ಲಿ ನೀಡುವಲ್ಲಿ ಹೇಳಿ ಮಾಡಿಸಿಕೊಂಬುವಲ್ಲದೆ.
ಕೈಕಲಸಿದಡೆ ಬಾಯಿಗೆ ಹಂಗುಂಟೆ
ಕೂಡಲಸಂಗಮದೇವಾ? ॥ ೩೬೩ ॥

೧೩೨೪

ಮಾಡುವಲ್ಲಿ ಎನ್ನ ನಾನರಿದು ಮಾಡಿದೆನಾದಡೆ,
ನೀಡುವಲ್ಲಿ ಎನ್ನ ನಾನರಿದು ನೀಡಿದೆನಾದಡೆ,
ನೀಡುವಲ್ಲಿ ರುಚಿಗೆ ಮನವೆಳೆಸಿ ಹಾರೈಸಿದೆನಾದಡೆ,

ನಿಮಗಂದೆ ದ್ರೋಹವಯ್ಯಾ.
ಮಾಡುವಲ್ಲಿ ನೀಡುವಲ್ಲಿ ಕೂಡೆ ಶುದ್ಧನಲ್ಲದಿರ್ದಡೆ,
ನೀನಂದೆ ಮೂಗ ಕೊಯಿ ಕೂಡಲಸಂಗಮದೇವಾ. ॥ ೩೬೪ ॥

೧೩೨೫

ಮಾಯೆವಿಡಿದು ಜೀವಿಸುವ ಜೀವಕನಲ್ಲ,
ಅದೇನು ಕಾರಣ?
ಆತ ಘನಲಿಂಗವಿಡಿದು ಜೀವಿಸುವ ಜೀವಕನಾಗಿ.
ವಿಷಯವಿಡಿದು ಭುಂಜಿಸುವ ಭುಂಜಕನಲ್ಲ,
ಅದೇನು ಕಾರಣ?
ಆತ ಘನಲಿಂಗವಿಡಿದು ಮಹಾಪ್ರಸಾದ ಭುಂಜಿಸುವ ಭುಂಜಕನಾಗಿ.
ವೇಷವಿಡಿದು ರಂಜಿಸುವ ರಂಜಕನಲ್ಲ,
ಅದೇನು ಕಾರಣ?
ಆತ ಸಹಜವಿಡಿದು ರಂಜಿಸುವ ರಂಜಕನಾಗಿ.
ಇಂತೀ ತ್ರಿವಿಧ ಒಂದೆಯೆಂದರಿದು ಪರಮಾರ್ಥದಲ್ಲಿ ಚರಿಸುವ ಶರಣಂಗೆ
ಶರಣೆನುತಿರ್ದೆನಯ್ಯಾ, ಕೂಡಲಸಂಗಮದೇವಾ. ॥ ೩೬೫ ॥

೧೩೨೬

ಮಾರಂಕನಿರಿವಲ್ಲಿ ಘಾಯಖಂಡೆಯ ತೋರಿದಾತನೆ ತೆತ್ತಿಗ,
ಕೈಯ ಕೈದು ಬಿದ್ದಲ್ಲಿ ಎತ್ತಿಕೊಟ್ಟಾತನೆ ಹಿತವ.
ಕೂಡಲಸಂಗನ ಶರಣ ಸೊಡ್ಡಳ ಬಾಚರಸರ ಕರುಣವುಳ್ಳನ್ನಕ್ಕರ
ಇನ್ನು ನಾನು ಅಂಜುವನಲ್ಲ ಕಾಣಾ, ಚೆನ್ನಬಸವಣ್ಣಾ. ॥ ೩೬೬ ॥

೧೩೨೭

ಮುಂದು ಜಾವದಲೆದ್ದು, ಲಿಂಗದಂಘ್ರಿಯ ಮುಟ್ಟಿ,
ಸುಪ್ರಭಾತದಲ್ಲಿ ಶಿವಶರಣರ ಮುಖವ ನೋಡುವುದು,
ಹುಟ್ಟಿದ ಜನ್ಮಕ್ಕಿದೆ ಸಫಲವು.
ಸತ್ಯವಚನವಿಂತೆಂದುದಾಗಿ
ಇಂತಿಲ್ಲದವರನೊಲ್ಲ ನಮ್ಮ ಕೂಡಲಸಂಗಮದೇವ. ॥ ೩೬೭ ॥

೧೩೨೮

ಮುಗಿಲ ಮರೆಯ ಮಿಂಚಿನಂತೆ, ಒಡಲ ಮರೆಯ ಆತ್ಮನಂತೆ,
ನೆಲದ ಮರೆಯ ನಿಧಾನದಂತೆ ಇಪ್ಪ,
ನಿಮ್ಮ ನಿಲವನಾರು ಬಲ್ಲರು ದೇವಾ?
ನಿಮ್ಮ ನಿಲವ ಹಲಕಾಲದಿಂದ ಕಂಡು ಕಂಡು
ಕಡೆಗಾಣಿಸಿ, ಮರೆದು ಮತಿಗೆಟ್ಟು ಮರುಳಾದೆನು.
ಎನ್ನ ತಪ್ಪಿಂಗೆ ಕಡೆಯಿಲ್ಲ ಕಾಣಾ
ತ್ರಾಹಿ ತ್ರಾಹಿ ಕಾಯಯ್ಯಾ, ಕೂಡಲಸಂಗಮದೇವಾ. ॥ ೩೬೮ ॥

೧೩೨೯

ಮುದ್ದ ನೋಡಿ, ಮುಖವ ನೋಡಿ,
ಮೊಲೆಯ ನೋಡಿ, ಮುಡಿಯ ನೋಡಿ,
ಕರಗಿ ಕೊರಗುವುದೆನ್ನ ಮನ,
ಲಿಂಗದೇವನ ಧ್ಯಾನವೆಂದಡೆ ಕರಗಿ ಕೊರಗದೆನ್ನ ಮನ.
ಆನು ಭಕ್ತನೆಂಬಡೆ ಲಜ್ಜೆಯಿಲ್ಲ ನೋಡಯ್ಯಾ.
ಎನ್ನ ತಂದೆ ಕೂಡಲಸಂಗಮದೇವಯ್ಯ ಒಲಿದು ಒಪ್ಪಗೊಂಡನಾದಡೆ,
ಆನು ಚೆಂಗಳೆಯ ಬಸುರಲ್ಲಿ ಬಾರದಿಹೆನೆ? ॥ ೩೬೯ ॥

೧೩೩೦

ಮೂರ್ತಿಯ ಮುಂದಣ ಮೂವರದೇನೊ?
ಸನಕ ಸನಂದಾದಿಗಳಿಂದತ್ತತ್ತಲು ನೋಡಾ.
ಕೂಡಲಸಂಗಮದೇವಾ,
ನಾನಾಳು, ನೀನಾಳ್ದ ಕಂಡಯ್ಯಾ. ॥ ೩೭೦ ॥

೧೩೩೧

ಮೆಲ್ಲಮೆಲ್ಲನೆ ಭಕ್ತನೆನಿಸಿಕೊಂಬೆ,
ಮೆಲ್ಲಮೆಲ್ಲನೆ ಮಾಹೇಶ್ವರನೆನಿಸಿಕೊಂಬೆ,
ಮೆಲ್ಲಮೆಲ್ಲನೆ ಪ್ರಸಾದಿ ಎನಿಸಿಕೊಂಬೆ,
ಮೆಲ್ಲಮೆಲ್ಲನೆ ಪ್ರಾಣಲಿಂಗಿ ಎನಿಸಿಕೊಂಬೆ,
ಮೆಲ್ಲಮೆಲ್ಲನೆ ಶರಣನೆನಿಸಿಕೊಂಬೆ,
ಮೆಲ್ಲಮೆಲ್ಲನೆ ಐಕ್ಯನೆನಿಸಿಕೊಂಬೆ.

ಮೆಲ್ಲಮೆಲ್ಲನೆ ಷಟ್‌ಸ್ಥಲವ ಮೀರಿ ನಿರವಯಸ್ಥಲವನೆಯ್ದುವೆನಯ್ಯಾ,
ಕೂಡಲಸಂಗಮದೇವಾ. ॥ ೩೭೦ ॥

೧೩೩೨

ಮೆಲ್ಲಮೆಲ್ಲನೆ ಭಕ್ತಾದ್ಯೈಕ್ಯಾಂತವಾದೆಹೆನೆಂದು
ತಾಮಸಜ್ಞಾನದಲ್ಲಿರಲು,
ಅದಕ್ಕೆ ನೀನು ನಿತ್ಯವ ಪಡೆದು ಬಂದೆಯಾ? ಎಂದು
ನಿಂದ ಸ್ಥಲದಲ್ಲಿಯೆ ನಿಜ ಷಡುಸ್ಥಲವಡಗದಿರ್ದಡೆ
ಜಂಗಮದಾಸೋಹವೇಕೆಂದು ಹೇಳಿ ನಿಜವ ಕರುಣಿಸಿದನಾಗಿ,
ಲಿಂಗಜಂಗಮದ ಭೇದವ ಚೆನ್ನಬಸವಣ್ಣ ಬಲ್ಲ,
ನಾನು ಆತನಿರಿಸಿದಂತಿಪ್ಪೆನಯ್ಯಾ.
ಇದು ಕಾರಣ, ಕೂಡಲಸಂಗಮದೇವರಲ್ಲಿ
ಚಂದಯ್ಯಗೆ ಶರಣೆಂದು ಶುದ್ಧನಯ್ಯಾ ಪ್ರಭುವೆ. ॥ ೩೭೧ ॥

೧೩೩೩

ಮೊರಹಾರ ನೀಡಿದಡೆ ತೆರಹಾರ ಕೊಳುತ್ತೈದಾನೆ,
ಅಹುದಹುದು, ಮತ್ತೇನು?
ದೇವರ ಹಸಿವು ನಮಗೆ ಹೊಸತಲಾ!
ದೆಸೆದಿಕ್ಕೆಲ್ಲಾ ವಿಶ್ವತೋಮುಖದ ಕೂಡಲಸಂಗಮದೇವಂಗೆ,
ದೆಸೆದೆಸೆಯಲ್ಲಿ ನೀಡಿ. ॥ ೩೭೨ ॥

೧೩೩೪

ಯೋಗಾಂಗ ಭೋಗಾಂಗ ಜ್ಞಾನಾಂಗ ಈ ತ್ರಿವಿಧವನು ಮರೆದು,
ಭಕ್ತಿಯೋಗದ ಮೇಲೆ ನಿಂದು, ವೈರಾಗ್ಯಯೋಗದ ಮೇಲೆ ನಿಂದು,
ನಡೆದು ನುಡಿದು ತೋರುವರು ಎಮ್ಮ ಶರಣರು,
ಗುರುಲಿಂಗಜಂಗಮ ಈ ತ್ರಿವಿಧವನು.
ಸುಖ ದುಃಖ ಚಿಂತೆ ಸಂತೋಷವೆಂಬುವಂ ಕಳೆದು,
ಉತ್ಪತ್ತಿಸ್ಥಿತಿಲಯವೆಂಬುವ ಸುಟ್ಟು,
ದೃಕ್ಕು, [ದರ್ಶನ], ದೃಶ್ಯವೆಂಬ ತ್ರಿಕರಣವ ಏಕವಮಾಡಿ,
ಪಿಂಡಾಂಡವಾ ಬ್ರಹ್ಮಾಂಡವೊಂದೆಂಬುದ ಅರಿದು,
ಶಿವ ಹರಿದು, ನಿಂದ ನಿಜಾನಂದದಲ್ಲಿ ಒಂದುಮುಂದೆಂಬುದನರಿಯದೆ,

ನಿಮ್ಮೊಳಗೊಂದಾದ ಲಿಂಗೈಕ್ಯಂಗೆ ವಂದಿಸಿ ವಂದಿಸಿ ಎನ್ನ ಬಂಧನ ಹರಿಯಿತ್ತು,
ನಾನು ಬಟ್ಟಬಯಲಾದೆನಯ್ಯಾ, ಕೂಡಲಸಂಗಮದೇವಾ. ॥ ೩೭೪ ॥

೧೩೩೫

ರಂಗವಾಲೆಯೆಂದಡೆ ಅಂಗವಿಸದಯ್ಯಾ ಎನ್ನ ಮನವು,
ಪಡುಸಮ್ಮಾರ್ಜನೆಯೆಂದಡೆ ಸೊಗಸದಯ್ಯಾ ಎನ್ನ ಮನಕ್ಕೆ.
ಅದೇನು ಕಾರಣವೆಂದಡೆ, ಭಕ್ತರಂಗಳ ವಾರಣಾಸಿಯೆಂದುದಾಗಿ.
ತಾ ಹುಟ್ಟಿ ತಮ್ಮವ್ವೆಯ ಬಂಜೆಯೆನ್ನಬಹುದೆ
ಕೂಡಲಸಂಗಮದೇವಾ? ॥ ೩೭೫ ॥

೧೩೩೬

ರತ್ನೇ ಪ್ರಸಾದವನಾರಾಧಿಸುತ್ತಿರಲು
ಆ ಪ್ರಸಾದದಲ್ಲಿ ಬೀಳುತ್ತ ಆಳುತ್ತಲಿದ್ದಿತ್ತು ನೋಡಾ.
ಅದ ಹಲಬರು ನೋಡಿ ನೋಡಿ ಹೋರುತ್ತಿದ್ದಾರು,
ಆ ಪ್ರಸಾದ ತಾನೇ ಬಂದು ಎನ್ನ ಸುತ್ತಿಕೊಂಡಿತ್ತು.
ಇದರ ಪದಾರ್ಥವ ಮಾಡಿಕೊಡಯ್ಯಾ ಕೂಡಲಸಂಗಮದೇವಾ. ॥ ೩೭೬ ॥

೧೩೩೭

ರೂಪು ಅರೂಪಿನಲ್ಲಿ ನಿಂದಿತ್ತು,
ಅರೂಪು ನಿಜರೂಪವನವಗ್ರಹಿಸಿತ್ತು.
ನಿಜರೂಪು ನಿರ್ಣಯದಲ್ಲಿ ನಿಷ್ಪತ್ತಿಯಾಯಿತ್ತು,
ನಿಷ್ಪತ್ತಿಯಾದ ನಿಜಶರಣರ ನಿಲವು
ಕಾಯವಿಡಿದು ಕಂಡೆಹೆನೆಂದಡೆ ಕಾಣಬಹುದೆ?
ಕೂಡಲಸಂಗಮದೇವರ ಶರಣ ಪ್ರಭುದೇವರ ನಿಲವು
ಎನಗೆ ಸಾಧ್ಯವಪ್ಪುದೆ? ॥ ೩೭೭ ॥

೧೩೩೮

ರೂಹಿಲ್ಲದಂಗೆ ಒಲಿದವರಿಗೆ ತನುವಿನ ಹಂಗುಂಟೆ?
ಮನವಿಲ್ಲದಂಗೆ ಮಚ್ಚಿದವರಿಗೆ ಅಭಿಮಾನದ ಹಂಗುಂಟೆ?
ದಿಗಂಬರಂಗೆ ಒಲಿದವರಿಗೆ ಕೌಪೀನದ ಹಂಗುಂಟೆ?
ಕೂಡಲಸಂಗಮದೇವಯ್ಯಾ,

ಮಹಾದೇವಿಯಕ್ಕನೆಂಬ ಭಕ್ತೆಗೆ,
ಆವ ಹೋರೆಯೂ ಇಲ್ಲ ನೋಡಾ, ಪ್ರಭುವೆ. ॥ ३೭೮ ॥

೧३३೯

ರೂಪಿಲ್ಲದ ಸಮುದಾನವ ನೀಡುವೆ,
ರುಚಿಯಿಲ್ಲದ ಪದಾರ್ಥವ ಮಥನಿಸದೆ ನೀಡುವೆ, ಲಿಂಗಕ್ಕೆಂದು.
ಲಿಂಗಪದಾರ್ಥವನಂಗಮುಖವ ಮರೆದು ನಿಮಗೆ ನೀಡುವೆ.
ಕಾಮಿಸದೆ ಕಲ್ಪಿಸದೆ ಭಾವಿಸದೆ ಭ್ರಮಿಸದೆ ನಿಮ್ಮ ಪರಿಯಾಣಕ್ಕೆ ನೀಡುವೆ.
ಸುಚಿತ್ತ ಸಮಾಧಾನದಿಂದ ಅವಧರಿಸಬೇಕಯ್ಯಾ
ಕೂಡಲಸಂಗಮದೇವಯ್ಯಾ. ॥ ३೭೯ ॥

೧३೪೦

ಲಕ್ಷದ ಮೇಲೆ ತೊಂಬತ್ತಾರುಸಾವಿರ ವಚನ
ನಿತ್ಯಭಂಡಾರಕ್ಕೆ ಸಂದಿತ್ತಯ್ಯಾ.
ಬೆಟ್ಟಕ್ಕೆ ಬಳ್ಳು ಬಗುಳಿದಂತಾಯಿತ್ತಯ್ಯಾ.
ಕ[ರೆದು]ಕೊಳ್ಳಯ್ಯಾ, ಕ[ರೆದು]ಕೊಳ್ಳಯ್ಯಾ,
ಓ ಎನ್ನಯ್ಯಾ, ಓ ಎನ್ನಯ್ಯಾ,
ಕೂಡಲಸಂಗಮದೇವಾ. ॥ ३೮೦ ॥

೧३೪೧

ಲಿಂಗಗಂಭೀರ ಗಮನಗೆಟ್ಟುದಲ್ಲಾ,
ಜಂಗಮಗಂಭೀರ ಸುಳುಹುಗೆಟ್ಟುದಲ್ಲಾ,
ಪ್ರಸಾದಗಂಭೀರ ರೂಪುಗೆಟ್ಟುದಲ್ಲಾ,
ಆಚಾರಗಂಭೀರ ಅವಯವಗೆಟ್ಟುದಲ್ಲಾ,
ಜ್ಞಾನಗಂಭೀರ ನಡೆಗೆಟ್ಟುದಲ್ಲಾ,
ಕೂಡಲಸಂಗಮದೇವರಲ್ಲಿ ಪ್ರಭುದೇವರು ನಿಜವನೈದಲು
ಸಂಗನಬಸವಣ್ಣನ ಪ್ರಾಣ ಒಡನೆ ಬಳಿಸಂದಿತ್ತಲ್ಲಾ. ॥ ३೮೧ ॥

೧३೪೨

ಲಿಂಗಗಂಭೀರದೊಳಗೆ ಜಗ ಹುಟ್ಟಿದಡೇನು,
ಆ ಲಿಂಗದಿಂದ ಘನವೆ?
ಶಿವಲಿಂಗದೊಳಗೆ ಜಗ, ಜಗದೊಳಗೆ ಶಿವಲಿಂಗ,

ಲೋಕಾದಿ ಲೋಕಂಗಳಿಗೆ ನೀನು
ಭಕ್ತಿಯ ಕಂದೆರೆದು ತೋರಿದೆ,
ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣಾ,
ನಿನ್ನ ಶ್ರೀಪಾದಕ್ಕೆ ನಮೋ ನಮೋ ಎನುತ್ತಿರ್ದೆನು. ॥ ೩೮೭ ॥

೧೩೪೩

ಲಿಂಗ ಜಂಗಮ, ಜಂಗಮ ಲಿಂಗವೆಂಬುದ
ಎನಗೆ ತೋರಿದವರಾರಯ್ಯಾ?
ಲಿಂಗವ ಪೂಜಿಸಿದಡೆ ಭವ ಹರಿಯದೆಂದು,
ಜಂಗಮಮುಖ ಲಿಂಗವಾಗಿ ಬಂದು ಶಿಕ್ಷಿಸಿ, ರಕ್ಷಿಸಿ,
ಎನ್ನ ಆದಿ ಅನಾದಿಯ ತೋರಿ,
ಪ್ರಾಣಲಿಂಗ ಜಂಗಮವೆಂದು ಎನಗೆ ಪ್ರತಿಷ್ಠಿಸಿ ತೋರಿದಿರಾಗಿ,
ಕೂಡಲಸಂಗಮದೇವಾ,
ನಿಮ್ಮಿಂದಲಾನು ಬದುಕಿದೆನು ಕಾಣಾ, ಪ್ರಭುವೆ. ॥ ೩೮೮ ॥

೧೩೪೪

ಲಿಂಗ ಜಂಗಮದ ಪ್ರಸಾದವಲ್ಲದೆ, ಭೂತದ್ರವ್ಯವ ಮುಟ್ಟಬಾರದು,
ಶಿವೋದಕವಲ್ಲದುದ ಕೊಳ್ಳಬಾರದು.
ಅದೆಂತೆಂದಡೆ,
ಶೂದ್ರಾನ್ನಂ ಸೂತಕಸ್ಯಾನ್ನಂ ನೈವೇದ್ಯಂ ಶ್ರಾದ್ಧಮೇವ ಚ ।
ಪತಿತಾನ್ನಂ ಸಮೂಹಾನ್ನಂ ರಾಜಾನ್ನಂ ಚೈವ ವರ್ಜಯೇತ್ ॥
ಎಂಬೀ ಮನುಸ್ಮೃತಿಯಲ್ಲಿ ಹೇಳುವ ಅನ್ನವಾವುವೆಂದೊಡೆ:
ಶಿವೋಪದೇಶವಿಲ್ಲದವರಲ್ಲಿಯ[ದು] ಶೂದ್ರಾನ್ನ,
ಹೊಲೆಗಳೆವುದಕ್ಕೆ ಮಾಡಿದು[ದು] ಸೂತಕಾನ್ನ,
ಸ್ಥಾವರನಿಮಿತ್ತ ಮಾದು[ದು] ನೈವೇದ್ಯಾನ್ನ,
ಪಿತೃಕಾರ್ಯಕ್ಕಾದುದು ಶ್ರಾದ್ಧಾನ್ನ,
ಬಲಿಗೆ ಹಾಕಿದುದು ಪತಿತಾನ್ನ,
ಪರ್ವಕ್ಕೆ ಮಾಡಿದುದು ಸಮೂಹಾನ್ನ,
ಅವುದೊಂದು ಸಿರಿಗರ ಹೊಡೆದಲ್ಲಿ ಪಾಕಭೇದವಾಗಿ
ಓಲೊಂಬರಕ್ಕೆ ಬೇರೆ ಮಾಡಿದುದು ರಾಜಾನ್ನ.
ಇಂತೀ ಸಪ್ತವಿಧದನ್ನವ ಬಿಟ್ಟು
"ನ ಜಾತಿಭೇದೋ ಲಿಂಗಾರ್ಚೇ ಸರ್ವೇ ರುದ್ರಗಣಾಃ ಸ್ಮೃತಾಃ"

ಎಂಬುದನರಿದು ಜಾತಿಭೇದವ ಮರೆದು,
ಶಿವಭಕ್ತರ ಮನೆಯ ಅನ್ನವ ಶಿವಪ್ರಸಾದವೆಂದು ಕೊಂಡು
ಸರ್ವ ಬವರವ ಜಯಸಿದರೆಂಬುದಕ್ಕೆ
ಬ್ರಹ್ಮಾಂಡಪುರಾಣೇ:
ಆಧಿವ್ಯಾಧಿ ವಿನಾಶಾಯ ಚರೋಚ್ಛಿಷ್ಟಂ ತು ಸೇವಯೇತ್ |
ಮಾರ್ಗಾದಿಷು ಚ ಶೈವಾನಾಂ ಚ ಪುಣ್ಯತೀರ್ಥಂ ಸುದರ್ಶನಂ ||
ಎಂದುದಾಗಿ
ಶೈವಾದಿಗಳು ಜಂಗಮಪ್ರಸಾದವ ಕೊಂಡು ಮುಕ್ತರಾದರಲ್ಲದೆ,
ಜಂಗಮಪ್ರಸಾದದಲ್ಲಿ ವಿಶ್ವಾಸಹೀನರನೇನೆಂಬೆನಯ್ಯಾ
ಕೂಡಲಸಂಗಮದೇವಾ? || ೩೮೪ ||

೧೩೪೫

ಲಿಂಗಜಂಗಮಪ್ರಸಾದವೆಂಬರು:
ಲಿಂಗವೆಂದಡೆ ಅಂಗದೊಳಗಾಯಿತ್ತು,
ಜಂಗಮವೆಂಬೆನೆ? ವಾಸಿಗೊಳಗಾಯಿತ್ತು,
ಪ್ರಸಾದವೆಂಬೆನೆ? ವಿಷದೊಳಗಾಯಿತ್ತು,
ಇಂತೀ ತ್ರಿವಿಧವು ನಷ್ಟ.
ಇವರ ಮೇಲಣ ಅಂಕುರಿತವ ಬಲ್ಲ
ಜಂಗಮವ ತೋರಾ ಕೂಡಲಸಂಗಮದೇವಾ. || ೩೮೫ ||

೧೩೪೬

ಲಿಂಗದ ಪ್ರಾಣದ ಸಕೀಲಸಂಬಂಧವೆಂತಿಪ್ಪುದೆಂದರಿಯೆನು,
ಪ್ರಾಣ[ದ] ಲಿಂಗದ ಸಕೀಲಸಂಬಂಧವೆಂತಿಪ್ಪುದೆಂದರಿಯೆನು.
ಹೂಸಿ ಹುಂಡನ ಮಾಡಿ, ಹೊರಗನೆ ಪೂಜಿಸಿ
ವೃಥಾ ದಿನಂಗಳು ಸವೆದುಹೋದವು.
ಕೂಡಲಸಂಗಮದೇವರಲ್ಲಿ,
ಎನ್ನ ಪ್ರಾಣ ನಿಕ್ಷೇಪವಹ ಭೇದವ ತೋರಾ ಚೆನ್ನಬಸವಣ್ಣಾ. || ೩೮೬ ||

೧೩೪೭

ಲಿಂಗದಲ್ಲಿ ಅರ್ಪಿತವಾದ ಸುಖವು ಲಿಂಗದಲ್ಲಿ ಲೀಯವಾಯಿತ್ತೆಂದಡೆ,
ಅಂಗವ ಲಿಂಗವಲ್ಲಿ ನಿಕ್ಷೇಪಿಸಿಹೆನೆಂಬ ಕಾರಣವೇಕಯ್ಯಾ ಶರಣಂಗೆ?
ಪ್ರಾಣವ ಲಿಂಗದಲ್ಲಿ ಸವೆಸಿ ನಿರವಯವಾಗಬಹುದಲ್ಲದೆ,

ಕರ್ಮದಿಂದಾದ ಕಾಯುವ ಸವೆಸಿ ಸಯುವಪ್ಪ ಪರಿಯೆಂತು ಹೇಳಯ್ಯಾ?
ಕೂಡಲಸಂಗಮದೇವಯ್ಯಾ,
ನಿಮ್ಮ ಶರಣರು ಕಾಯುವಿಡಿದಿರ್ದು ನಿರ್ಮಾಯುರಾಗಿಪ್ಪುದ ಹೇಳಯ್ಯಾ.
ನಿಮ್ಮ ಧರ್ಮ, ನಿಮ್ಮ ಧರ್ಮ. || ೩೮೭ ||

೧೩೪೮

ಲಿಂಗದಲ್ಲಿ ಹೊಳೆದು ಹೋಹ ಜಂಗಮುವ ಕಂಡು ಬಿಟ್ಟಡೆ
ಭವ ಹೊದ್ದಿತ್ತಯ್ಯಾ ಎನ್ನ ಭಕ್ತಿಗೆ.
ಹಿಂದೆ ಲಿಂಗವನಗಲಿದ ಕಾರಣ ಬಂದೆನೀ ಜನ್ಮಕ್ಕೆ,
ಕೂಡಲಸಂಗಯ್ಯ ತಪ್ಪಿಹೋಗದ ಮುನ್ನ ಹಿಡಿದು ತನ್ನಿ. || ೩೮೮ ||

೧೩೪೯

ಲಿಂಗವಲ್ಲದನ್ಯವರಿನಯೆ, ಶಿವಲಿಂಗವಲ್ಲದನ್ಯವ ನೆನೆಯೆ,
ಜಂಗಮುವಲ್ಲದನ್ಯಕ್ಕೆರಗೆ, ಪ್ರಸಾದವಲ್ಲದನ್ಯವ ಕೊಳ್ಳೆ,
ಶಿವಗಣಂಗಳಲ್ಲದನ್ಯರ ಬೆರೆಯೆ.
ಕೂಡಲಸಂಗಮದೇವರು ಸಾಕ್ಷಿಯಾಗಿ
ನಾನಾವ ತೀರ್ಥಯಾತ್ರೆಗಳನರಿಯೆ. || ೩೮೯ ||

೧೩೫೦

ಲಿಂಗವಿದ್ದಲ್ಲಿ ನಿಂದೆಯಿರದು, ನಿಂದೆಯಿಪ್ಪಲ್ಲಿ ಲಿಂಗವಿರದು,
ಅವರೆಂತಿದ್ದಡೇನು? ಹೇಗಿದ್ದಡೇನು? ಲಿಂಗವಂತರವರು,
ಉಪಮಿಸಬಾರದ ಮಹಾಘನವು ಕೂಡಲಸಂಗನ ಶರಣರು. || ೩೯೦ ||

೧೩೫೧

ಲಿಂಗವಿರದೆ ಸೀಮೆಯು ಕಲ್ಲಿನಲ್ಲಿ?
ಂಗವಿರದೆ ಪಶುವಿನ ತೊಡೆಯಲ್ಲಿ?
ಕಲ್ಲ ತೆಕ್ಕೊಂಡು ಮೆಳೆಯು ಮೇಲೆ ಇಟ್ಟಡೆ,
ಆ ಕಲ್ಲು ಮೆಳೆಯಲ್ಲಿ ಸಿಕ್ಕಿದಡೆ ಆ ಮೆಳೆ ಭಕ್ತನಾಗಬಲ್ಲುದೆ?
ಇದು ಕಾರಣ ಸತ್ಯ, ಸಹಜ, ಸದ್ಭಾವ, ಸದ್ವರ್ತನೆ ಉಳ್ಳಡೆ ಸದ್ಭಕ್ತ,
ಇಲ್ಲದಿದ್ದಡೆ ಆ ಮೆಳೆಯೊಳಗೆ ಸಿಕ್ಕಿದ ಕಲ್ಲಿನಂತೆ
ಕಾಣಾ ಕೂಡಲಸಂಗಮದೇವಾ. || ೩೯೧ ||

೧೩೫೨

ಲಿಂಗವೆಂತಿಪ್ಪುದೆಂದರಿಯೆನು,
ಲಿಂಗದ ನಿಲವೆಂತುಟೆಂಬುದ ಹೋದ ಹೊಲಬನರಿಯೆನು,
ಲಿಂಗಾರ್ಚನೆಯ ಮಾತು ಎನಗೇಕಯ್ಯಾ?
ಜಂಗಮಲಿಂಗವಾಗಿ ಬಂದು ನೀವಿರುತ್ತಿರಲು,
ಸ್ಥಾವರಕ್ಕೆ ಮಚ್ಚಿ ಮರುಳಾದೆನು
ಕೂಡಲಸಂಗಮದೇವಾ,
ಎನ್ನ ತಪ್ಪನೆ ಎಣಿಸಿಹೆನೆಂದಡೆ ಕಡೆಯಿಲ್ಲ. ॥ ೩೯೨ ॥

೧೩೫೩

ಲಿಂಗವೆ ಅಂಗ, ಅಂಗವೆ ಲಿಂಗವೆಂದರಿದ ಬಳಿಕ ಅಲ್ಲಿಯೆ ಅದೆ.
ಲಿಂಗವೆ ಪ್ರಾಣ, ಪ್ರಾಣವೆ ಲಿಂಗವೆಂದರಿದ ಬಳಿಕ ಅಲ್ಲಿಯೆ ಅದೆ.
ಉಂಟೆಂದು ತೋರಲಿಲ್ಲ, ಇಲ್ಲವೆಂದು ಅರಸಲಿಲ್ಲ,
ಕೂಡಲಸಂಗಮದೇವಾ, ಲಿಂಗ ನಿರಂತರವಲ್ಲಿಯೇ. ॥ ೩೯೩ ॥

೧೩೫೪

ಲಿಂಗಾರ್ಚನೆಯ ಮಾಡುವೆನಯ್ಯಾ, ಜಂಗಮವೆನ್ನ ಮಠಕ್ಕೆ ಬರಬೇಕೆಂದು.
ಆ ಜಂಗಮವೆನ್ನ ಮಠಕ್ಕೆ ಬಂದಡೆ,
ಲಿಂಗಾರ್ಚನೆಯ ಮಾದು ಜಂಗಮಾರ್ಚನೆಯ ಮಾಡುವೆನು.
ಅದೇನು ಕಾರಣವೆಂದಡೆ–
ಆ ಲಿಂಗದಲ್ಲಿ ಪದವುಂಟು, ಫಲವುಂಟು, ಭವವುಂಟು.
ಆ ಜಂಗಮದಲ್ಲಿ ಪದಂ ನಾಸ್ತಿ, ಫಲಂ ನಾಸ್ತಿ, ಭವಂ ನಾಸ್ತಿಯಾದ ಕಾರಣ.
ಲಿಂಗಾರ್ಚನಂ ನ ಕರ್ತವ್ಯಂ ಕರ್ತವ್ಯಂ ಜಂಗಮಾರ್ಚನಂ ।
ಲಿಂಗಜಂಗಮಯೋರ್ಮಧ್ಯೇ ಜಂಗಮಸ್ತು ವಿಶಿಷ್ಯತೇ ॥ ಎಂದುದಾಗಿ
ಕೂಡಲಸಂಗಮದೇವಯ್ಯಾ, ನಾನಿನ್ನು ಭವಭವಾಂತರ
ನಿಮ್ಮ ಜಂಗಮಾರ್ಚನೆಯ ಮಾಡುವೆನು. ॥ ೩೯೪ ॥

೧೩೫೫

ಲಿಂಗಾರ್಩ಿತವ ಮಾಡುವ ಅವಧಾನವೆಂತೆಂದಡೆ:
ಅನ್ಯಾಯವು ಸೋಂಕಲೀಯದುದವಧಾನವು,
ಅರಿಷಡ್ವರ್ಗಂಗಳು ಮುಟ್ಟಲೀಯದುದವಧಾನವು.
ಪಂಚಭೂತದ ಭವಿತ್ವವ ಕಳೆದು

ಪ್ರಸಾದ ಕಾಯುವಾಗಿಪ್ಪ ಪರಿಯ ನೋಡಾ.
ಪಂಚೇಂದ್ರಿಯಂಗಳ ಗುಣವ ಕಳೆದು
ಪಂಚವಿಂಶತಿ ತತ್ವದಲ್ಲಿ ಪರಿಣಾಮಿ,
ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನು. ॥ ೩೯೫ ॥

೧೩೫೬

ಲಿಂಗಾರ್ಪಿತವಿಲ್ಲದೆ ಬೋನ ಪದಾರ್ಥವ ಕೊಂಡಡೆ,
ಮಕ್ಕಳಡಗು ನರಮಾಂಸವಯ್ಯಾ.
ಲಿಂಗಾರ್ಪಿತವಿಲ್ಲದೆ ಉದಕವ ಮುಕ್ಕುಳಿಸಿದಡೆ
ನಾಯ ಮೂತ್ರವ ಮುಕ್ಕಳಿಸಿದುದಯ್ಯಾ.
ಲಿಂಗಾರ್ಪಿತವಿಲ್ಲದೆ ಹಲುಕಡ್ಡಿಯನಿರಿದಡೆ
ನಾಯ ಎಲುಬಿದ್ದ ಮಲಕ್ಕೆ ಬಾಯಿದೆರೆದುದು.
ನಿಮಗೆತ್ತಿದ ಕರವ ಅನ್ಯರಿಗೆ ಮುಗಿದಡೆ
ಅಘೋರ ನರಕವಯ್ಯಾ.
ಈ ಭಾಷೆಗೆ ತಪ್ಪಿದಡೆ ತಲೆದಂಡ ತಲೆದಂಡ,
ಅಳವರಿಯದೆ ನುಡಿದೆನು, ಕಡೆಮುಟ್ಟಿ ನಡಸಯ್ಯಾ.
ಪ್ರಭುವೆ ಕೂಡಲಸಂಗಮದೇವಾ. ॥ ೩೯೬ ॥

೧೩೫೭

ಲೋಕದಿಚ್ಛೆಯ ನಡೆವವನಲ್ಲ, ಲೋಕದಿಚ್ಛೆಯ ನುಡಿವವನಲ್ಲ,
ಲೋಕವಿರಹಿತ ಶರಣ, ಶರಣವಿರಹಿತ ಲೋಕವೆಂಬುದು
ಕಾಣಬಂದಿತ್ತು ನೋಡಾ.
ಲಿಂಗವೆ ಗೂಡಾಗಿ, ಜಂಗಮವೆ ಸ್ವಾಯತವಾಗಿ
ಪ್ರಸಾದವೆ ಪ್ರಾಣವಾಗಿ ಪರಿಣಾಮದಲ್ಲಿ ಇಪ್ಪ ನೋಡಯ್ಯಾ.
ಕೂಡಲಸಂಗಮದೇವಾ, ನಿಮ್ಮ ಶರಣ ಚೆನ್ನಬಸವಣ್ಣಂಗೆ
ನಮೋ ನಮೋ ಎಂಬೆನು. ॥ ೩೯೭ ॥

೧೩೫೮

ಲೋಕಾದಿ ಲೋಕಂಗಳೆಲ್ಲಾ ಚೆನ್ನಯ್ಯನ ಮಕ್ಕಳು,
ಬ್ರಹ್ಮವಿಷ್ಣುರುದ್ರರೆಲ್ಲಾ ಚೆನ್ನಯ್ಯನ ಮಕ್ಕಳು,
ಸನಕ ಸನಂದ ಸನಾದಿಗಳೆಲ್ಲಾ ಚೆನ್ನಯ್ಯನ ಮಕ್ಕಳು,
ಕಿನ್ನರ ಕಿಂಪುರುಷರೆಲ್ಲಾ ಚೆನ್ನಯ್ಯನ ಮಕ್ಕಳು,

ಗರುಡ ಗಾಂಧರ್ವರೆಲ್ಲಾ ಚೆನ್ನಯ್ಯನ ಮಕ್ಕಳು,
ಸಿದ್ಧವಿದ್ಯಾಧರರುಗಳೆಲ್ಲಾ ಚೆನ್ನಯ್ಯನ ಮಕ್ಕಳು,
ಏಕಾದಶರುದ್ರರು ದ್ವಾದಶಾದಿತ್ಯರು ಚೆನ್ನಯ್ಯನ ಮಕ್ಕಳು,
ನವಬ್ರಹ್ಮರು ಚೆನ್ನಯ್ಯನ ಮಕ್ಕಳು,
ತ್ರೈತ್ರಿಂಶಕೋಟಿ ದೇವತೆಗಳೆಲ್ಲಾ ಚೆನ್ನಯ್ಯನ ಮಕ್ಕಳು,
ಅಂತರಂತರ ಸಂತರೆಲ್ಲಾ ಚೆನ್ನಯ್ಯನ ಮಕ್ಕಳು,
ಭಾವ ಭಾಳೇಕ್ಷಣರೆಲ್ಲಾ ಚೆನ್ನಯ್ಯನ ಮಕ್ಕಳು.
ನನ್ನ ನಿನ್ನಂತಹವರೆಲ್ಲಾ ಚೆನ್ನಯ್ಯನ ಮಕ್ಕಳು
ಆಣೆ, ನಿಮ್ಮಾಣೆ, ಕೂಡಲಸಂಗಮದೇವಾ. || ೩೯೮ ||

೧೩೫೯

ವಚನಾನುಭಾವವ ಮಾಡುವಯ್ಯಗಳಿರಾ,
ನಿಮಗೆ ವಚನ ಪ್ರಾಣಲಿಂಗವೊ? ಅಲ್ಲ, ದಾಸೋಹ ಪ್ರಾಣಲಿಂಗವೊ?
ಆರೂಢವನೆ ಕಲಿತು ಅಂಗಸಂಗದಲಿಪ್ಪ
ಆರೂಢ ಪ್ರಾಣಲಿಂಗವೊ? ಅಲ್ಲ, ದಾಸೋಹ ಪ್ರಾಣಲಿಂಗವೊ?
ಬ್ರಹ್ಮವಿದ್ಯೆಯನೆ ಕಲಿತು ಭ್ರಮೆಯೆಂಬ ಶೂಲದ ಮೇಲೆ ಕುಳ್ಳಿರ್ದು,
ಆ ಬ್ರಹ್ಮವಿದ್ಯೆಯೆ ಪ್ರಾಣಲಿಂಗವೊ? ಅಲ್ಲ, ದಾಸೋಹವೆ ಪ್ರಾಣಲಿಂಗವೊ?
ಎಲ್ಲ ಮಾತುಗಳ ಹಲ್ಲಣಿಸಿಕೊಂಡು, ಬಲು ಹುಲಿಯು ಬೆನ್ನಲಿ ಬಪ್ಪ ತೆರನಂತೆ.
ಬಲ್ಲವರಿಗೆ ಬಲ್ಲವರು ನಮ್ಮ ಜಂಗಮದಾಸೋಹಿಗಳು.
ಕೂಡಲಸಂಗಮದೇವರರಿತಡೆ ನಿಮ್ಮ ಹಲ್ಲ ಕಳೆವ ಕಾಣಿರೆ! || ೩೯೯ ||

೧೩೬೦

ವನದ ಕೋಗಿಲೆ, ಮನೆಗೆ ಬಂದಡೆ
ತನ್ನ ವನವ ನೆನೆವುದ ಮಾಣ್ಬುದೆ?
ಮಲೆಯ ಗಜ ಮನೆಗೆ ಬಂದಡೆ
ತನ್ನ ಮಲೆಯ ನೆನೆವುದ ಮಾಣ್ಬುದೆ?
ಕೂಡಲಸಂಗನ ಶರಣರು ಮರ್ತ್ಯಕ್ಕೆ ಬಂದಡೆ
ತಮ್ಮ ಆದಿಮಧ್ಯಾಂತರಂಗದ ಲಿಂಗವ ನೆನೆವುದ ಮಾಣ್ಬರೇ? || ೪೦೦ ||

೧೩೬೧

ವಾಸನೆ ಕಾರಣ ನೊಣವಿನ ಮಲ ಜೇನುತುಪ್ಪವೆಂದೆನಿಸಿತ್ತು,
ಪರಿಮಳ ಕಾರಣ ಕೋಣನ ಮಾಂಸ ವಾಣಿಜ್ಯತೆ ಇಂಗು ಎನಿಸಿತ್ತಯ್ಯಾ,

ಭಕ್ತಿ ಕಾರಣ ಎನ್ನಲುಳ್ಳ ಅವಗುಣ ಹಿಂಗಿತ್ತು ಕಾಣಾ,
ಕೂಡಲಸಂಗಮದೇವಾ. ॥ ೪೦೧ ॥

೧೩೬೨

ವಿಷ್ಣು ವರಾಹಾವತಾರದಲ್ಲಿ ಹಂದಿಯಂ ತಿಂಬುದಾವಾಚಾರವೋ?
ವಿಷ್ಣು ಮತ್ಸ್ಯಾವತಾರದಲ್ಲಿ ಮೀನಂ ತಿಂಬುದಾವಾಚಾರವೋ?
ವಿಷ್ಣು ಕೂರ್ಮಾವತಾರದಲ್ಲಿ ಆಮೆಯ ತಿಂಬುದಾವಾಚಾರವೋ?
ವಿಷ್ಣು ಹರಿಣಾವತಾರದಲ್ಲಿ ಎರಳೆಯ ತಿಂಬುದಾವಾಚಾರವೋ?
ಇಂತಿವನೆಲ್ಲ ಅರಿಯದೆ ತಿಂದರು.
ಅರಿದರಿದು ನಾಲ್ಕು ವೇದ, ಹದಿನಾರು ಶಾಸ್ತ್ರ,
ಹದಿನೆಂಟು ಪುರಾಣ, ಇಪ್ಪತ್ತೆಂಟಾಗಮ
ಇಂತಿವೆಲ್ಲನೋದಿ, ಕೇಳಿ, ಹೋಮವನಿಕ್ಕಿ ಹೋತನ ಕೊಂದು
ತಿಂಬುದಾವಾಚಾರದೊಳಗೋ?
ಇಂತೀ ಶ್ರುತಿಗಳ ವಿಧಿಯ ಜಗವೆಲ್ಲ ನೋಡಿರೆ.
ನಮ್ಮ ಕೂಡಲಸಂಗಮದೇವಂಗೆ
ಅಧಿದೇವತೆಗಳ ಸರಿಯೆಂಬವರ ಬಾಯಲ್ಲಿ ಸುರಿಯವೆ
ಬಾಲಹುಳುಗಳು? ॥ ೪೦೨ ॥

೧೩೬೩

ಮೀರದನುಜರೆಲ್ಲಾ ಧಾರುಣಿಯೆಂಬುದರೊಳಗೆ
ಸಾಗರವಾಗಿದ್ದುದನಾರೂ ಅರಿಯರಲ್ಲಾ,
ದ್ವಾರಾವತಿಯಪುರದೊಳಗೆ ಪರವು ಬಂದಿದ್ದಡೆ
ಶರೀರಸಂಬಂಧವ ಮಾಡಲರಿಯರಲ್ಲಾ.
ಕರಗಸವ ಕಳೆದುಕೊಂಡು, ಪರಶುರಾಮನ ಗೆಲಿದು,
ಸುರರೊಳಗೆ ಸುಳಿದಾಡಲರಿಯರಲ್ಲಾ.
ವಾರುಧಿಯ ಸೇರಿಕೊಂಡು, ಮರಣವೆಂಬುದ ನಿಲಿಸಿ,
ತ್ರಿಪುರವ ಮೂರ್ತಿಗೊಳಿಸಲರಿಯರಲ್ಲಾ.
ಮೇರುವೆಂಬುದ ಹೊಕ್ಕು ನೂರೆಂಟನೆಣಿಸಿಕೊಂಡು
ನಿರಾಕಾರದಲಡಗುವರಿನ್ನಾರು ಹೇಳಾ?
ಸಾಸಿರದ ಮೇಲೆ ನೂರೆಂಬತ್ತೆಂಟು ರಾಶಿ
ಪರುಷವೇಧಿಗಳಾಗಲರಿಯರಲ್ಲಾ.
ಕೂಡಲಸಂಗನ ಶರಣರ ಸಂಬಂಧವು
ಪ್ರಭುವಿಂಗಲ್ಲದೆ ಮತ್ತಾರಿಗೆಯೂ ಅಳವಡದು. ॥ ೪೦೩ ॥

೧೩೬೪

ವೇದ ವೇದಾಂತಗಳಿಗೆ ಅಸಾಧ್ಯವಾದ
ಅನುಪಮಲಿಂಗವ ತಂದುಕೊಟ್ಟನಯ್ಯಾ, ಸದ್ಗುರು ಎನ್ನ ಕರಸ್ಥಲಕ್ಕೆ.
ನಾದಬಿಂದು ಕಳೆಗೆ ಅಭೇದ್ಯವಾದ
ಅಚಲಿತ ಲಿಂಗವ ತಂದುಕೊಟ್ಟನಯ್ಯಾ, ಸದ್ಗುರು ಎನ್ನ ಕರಸ್ಥಲಕ್ಕೆ.
ವಾಙ್ಮನಕ್ಕಗೋಚರವಾದ
ಅಖಂಡಿತ ಲಿಂಗವ ತಂದುಕೊಟ್ಟನಯ್ಯಾ, ಸದ್ಗುರು ಎನ್ನ ಕರಸ್ಥಲಕ್ಕೆ,
ಇನ್ನು ನಾನು ಬದುಕಿದೆನು, ನಾ ಬಯಸುವ ಬಯಕೆ ಕೈಸಾರಿತ್ತೆಂದು
ಕೂಡಲಸಂಗಮದೇವಾ. ॥ ೪೦೪ ॥

೧೩೬೫

ವೇದ, ಶಾಸ್ತ್ರ, ಆಗಮಂಗಳನೋದಿದವರು ಹಿರಿಯರೆ?
ಕವಿ, ಗಮಕಿ, ವಾದಿ ವಾಗ್ಮಿಗಳು ಹಿರಿಯರೆ?
ನಟನಿ, ಬಾಣ, ವಿಲಾಸಿ, ಸುವಿದ್ಯವ ಕಲಿತ ಡೊಂಬನೇನು ಕಿರಿಯನೆ?
ಹಿರಿಯತನವಾವುದೆಂದಡೆ: ಗುಣಜ್ಞಾನ ಆಚಾರಧರ್ಮ,
ಕೂಡಲಸಂಗನ ಶರಣರು ಸಾಧಿಸಿದ ಸಾಧನೆಯೆ ಹಿರಿಯತನ. ॥ ೪೦೫ ॥

೧೩೬೬

ವೇದಾಗಮಂಗಳು ಹೇಳಿದ ಹಾಗೆ ನಡೆವುದು, ಹೇಳಿದಂತೆ ನುಡಿವುದು,
ಮೀರಿ ನಡೆಯಲಾಗದು, ಮೀರಿ ನುಡಿಯಲಾಗದು,
ಮುಕ್ತಿಪದವೈದುವಾತ.
ಅಪಹಾಸ್ಯಕ್ಕೆ ಬಾರದೆ ಆಚಾರಮಾರ್ಗದಲ್ಲಿರಬಲ್ಲಡೆ
ಕೂಡಲಸಂಗಮದೇವನೀಗಲೆ ಒಲಿವ. ॥ ೪೦೬ ॥

೧೩೬೭

ಶರಣ ಮನಬಂದಂತೆ ಮಾಡುವ:
ಅರಸಿ ಸಕಳಾಗಮಾಚಾರ್ಯನಪ್ಪ,
ಅಹುದಾಗದೆಂಬ ಪರಿಯಲ್ಲ ನೋಡಾ.
ಕೂಡಲಸಂಗನ ಶರಣ ಸಂಗಿಯಲ್ಲ, ನಿಸ್ಸಂಗಿಯಲ್ಲ. ॥ ೪೦೭ ॥

೧೩೬೮

ಶರಣ ಲಿಂಗದಲ್ಲಿ ಕೂಡಲು ಮಹಾಪಥವಯ್ಯಾ!
ದೃಢವೃಥಾಂಗಮಧ್ಯಸ್ಥನಾಗಿ,
ಕೂಡಲಸಂಗಮದೇವರ ನಾಮವತಿಸುಖವೆಂದುದು. ॥ ೪೦೮ ॥

೧೩೬೯

ಶರಣೆಂದು ಕರ ಸಂತೋಷವ ಮಾಡಿ,
ಮುರಿದು ಮುಂಜೆರಗ ಗಂಟಿಕ್ಕಿ,
ನೆಲನ ಹೊಯಿದ ಕೈ ತಪ್ಪುವುದಲ್ಲದೆ,
ಆದಿ ಶರಣರ ನುಡಿ ತಪ್ಪುವುವೆ?
ಕೂಡಲಸಂಗಮದೇವರು ಸಾಕ್ಷಿಯಾಗಿ
ಕಟ್ಟುವೆ ಗುಡಿಯನೆತ್ತುವೆನು ಧ್ವಜವ. ॥ ೪೦೯

೧೩೭೦

ಶರಣೆಂದು ಪಾದವ ಹಿಡಿದೆಹೆನೆಂದಡೆ ಚರಣದ ನಿಲವು ಕಾಣಬಾರದು.
ಕುರುಹುವಿಡಿದೆಹೆನೆಂದಡೆ ಕೈಗೆ ಸಿಲುಕದು,
ಬೆರಸಿ ಹೊಕ್ಕೆಹೆನೆಂದಡೆ ಮುನ್ನವೆ ಅಸಾಧ್ಯ.
ಅಕಟಕಟಾ, ಅಹಂಕಾರದಲ್ಲಿ ಕೆಟ್ಟೆನಲ್ಲಾ,
ಗುರುವೆ, ಎನ್ನ ಪರಮಗುರುವೆ ಬಾರಯ್ಯಾ,
ಅರಿಯದ ತರಳನ ಅವಗುಣವ ನೋಡುವರೆ ಕೂಡಲಸಂಗಮದೇವಾ? ॥ ೪೧೦

೧೩೭೧

ಶಾಂತಿಯ ಮಾಡಹೋದಡೆ ಬೇತಾಳವಾಯಿತ್ತಯ್ಯಾ.
ಬೇತಾಳದಾಪ್ಯಾಯನವಾಯಿತೆಂದಡೆ
ಪರಹಿತಾರ್ಥವೆಂದು ತೋರಿದೆನ್ನ ಪ್ರಾಣಲಿಂಗವನು.
ನೇಮವ ಮಾಡಲೆಂದು ಕೊಟ್ಟಡೆ
ಕೊಂಡೋಡಿ ಹೋದನು ಅನಿಮಿಷನು.
ಅಭವನ ಮಹಾಮನೆಯ ಹೊಕ್ಕಡೆ
ಎನಗೆ ಬೇಡುವನೊಡ್ಡಿ ಅರಸೆಂದು ಕಳುಹಿದನು.
ಅಳಲಿ ಬಳಲಿ ತೊಳಲಿ ಅಡಿಹಾಡಿ ಹಂಬಲಿಸಿ,
ಅನಂತ ಅವಸ್ಥೆಯಿಂದ ಲಕ್ಷದ ಮೇಲೆ ತೊಂಬತ್ತಾರುಸಾವಿರ ವಚನವ ಹಾಡಿ
ಆಚಾರ ವಿಚಾರದಿಂದ
ವಿಚಿತ್ರನಭಯವ ಕೊಟ್ಟು ಕಳುಹಿಸಿದನಯ್ಯಾ.
ಗೊಹೇಶ್ವರನ ಶರಣ ತೋರಿದಡರಿದೆನು.
ಕೂಡಲಸಂಗಮದೇವರ. ॥ ೪೧೧

೧೩೭೨

ಶಿವನೆ ಜಗತ್ರಯಕ್ಕೊಡೆಯನೆಂದುದು ವೇದ,
ಉತ್ಪತ್ತಿ ಸ್ಥಿತಿ ಲಯಕಾರಣನೆಂದುದು ವೇದ,
"ಈಶಃ ಸರ್ವಸ್ಯ ಜಗತಃ ಪ್ರಭುಃ ಪ್ರೇರಕೋ ವಿಶ್ವಭುಕ್" ಎಂದುದು ಶ್ರುತಿ.
ಇದು ಕಾರಣ,
ಕೂಡಲಸಂಗಮದೇವನೊಬ್ಬನೆ ದೇವನು. || ೪೧೨ ||

೧೩೭೩

ಶಿವಶಿವಾಯೆಂಬ ಮಂತ್ರವೆನಗೆ ಅಮೃತಾರೋಗಣೆಯೋ ಎನ್ನ ತಂದೆ.
ಹರ ಹರಾ ಎಂಬ ಮಂತ್ರವೆನಗೆ ಅಮೃತಾರೋಗಣೆಯೋ ಎನ್ನ ತಂದೆ.
ಶ್ರೀ ವಿಭೂತಿ ರುದ್ರಾಕ್ಷಿ ಭಕುತಿಯೆ ಮುಕುತಿಗೆ ಸಾಧನವೋ ಎನ್ನ ತಂದೆ,
ಎನಗಿದೆ ಗತಿಮತಿ ಚೈತನ್ಯ, ಕೂಡಲಸಂಗಮದೇವಯ್ಯಾ,
ನಿಮ್ಮ ನಾಮದ ರುಚಿ ತುಂಬಿತ್ತೊ ಎನ್ನ ತನುವ. || ೪೧೩ ||

೧೩೭೪

ಶಿಶುವೆನ್ನಬಹುದೆ, ನಂಬಿಯಣ್ಣನ?
ಸೂಕ್ಷ್ಮನೆನಬಹುದೆ ರವಿಯನು, ಜಗವ ಬೆಳಗುವ?
ದೃಷ್ಟಿ ಕಿರಿದೆನ್ನಬಹುದೆ, ಸೃಷ್ಟಿಯನು ಕಾಣ್ಬ?
ಭಾವ ಕಿರಿದೆನ್ನಬಹುದೆ, ಬಳ್ಳ ಲಿಂಗವಾದುದನು?
ಕೂಡಲಸಂಗಮದೇವಯ್ಯಾ,
ಯುಗಜುಗವೆಲ್ಲವನೂ ಮೀರಿದ ಶರಣನ
ಕಿರಿದೆನಬಹುದೆ, ಚೆನ್ನಬಸವಣ್ಣನ? || ೪೧೪ ||

೧೩೭೫

ಸ್ವಾನ ಮಡಕೆಯನಿಳುಹಿ ಬೋನವನುಂಡು
ಮಡಕೆಯನೇರಿಸಲರಿಯದಂತೆ
ನಾನು ಷಟ್‌ಸ್ಥಲವನೋದಿ ಏನ ಮಾಡುವೆನಯ್ಯಾ,
ಅವಗುಣಂಗಳೆನ್ನ ಬೆನ್ನ ಬಿಡದನ್ನಕ್ಕರ?
ಕಾರ್ಯವುಳ್ಳ ಕರ್ತ ಜಂಗಮಲಿಂಗದಲ್ಲಿ
ನಾನು ದಾಸೋಹವ ಮಾಡಲರಿಯದೆ ಕೆಟ್ಟೆನು,
ಕೂಡಲಸಂಗಮದೇವಾ. || ೪೧೫ ||

೧೩೭೬

ಶ್ರೀಗುರುಕಣಿಸಿ ಹಸ್ತಮಸ್ತಕಸಂಯೋಗದಿಂದ
ಪ್ರಾಣಲಿಂಗವನು ಕರತಳಾಮಳಕವಾಗಿ ಕರಸ್ಥಲಕ್ಕೆ ತಂದುಕೊಟ್ಟನಾಗಿ
ಒಳಗೆನ್ನದೆ ಹೊರಗೆನ್ನದೆ, ಆ ಲಿಂಗದಲ್ಲಿ ನಚ್ಚಿ ಮಚ್ಚಿ ಹರುಷದೊಳೋಲಾಡಿವೆ.
ಅದೆಂತೆಂದಡೆ,
ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಪ ।
ನಾದಬಿಂದು ಕಲಾತೀತಂ ಗುರುಣಾ ಲಿಂಗಮುದ್ಭವಂ ॥
ಎಂದುದಾಗಿ
ಆ ಲಿಂಗವ ಪಡೆದು ಆನಂದಿಸುವೆ, ಕೂಡಲಸಂಗಮದೇವಾ. ॥ ೪೧೬ ॥

೧೩೭೭

ಶ್ರೀಗುರು ತನ್ನ ಲಿಂಗವನೆ ಅಂಗದ ಮೇಲೆ ಬಿಜಯಂಗೆಯ್ಸಿದನಾಗಿ,
ಆ ಲಿಂಗಕ್ಕೆ ನಾನು ಅಷ್ಟವಿಧಾರ್ಚನೆ, ಷೋಡಶೋಪಚಾರಗಳ ಮಾಡಿ,
ಚತುರ್ವಿಧಫಲಪದಪುರುಷಾರ್ಥವ ಪಡೆದು,
ಆ ಪರಿಭವಕ್ಕೆ ಬರಲೊಲ್ಲದೆ,
ನಾನು ನಿಷ್ಕಳವೆಂಬ ಹೊಲದಲ್ಲಿ ಒಂದು ನಿಧಾನವ ಕಂಡೆ.
ಆ ನಿಧಾನದ ಹೆಸರಾವುದೆಂದಡೆ:
ತ್ರೈಲಿಂಗದ ಆದಿಮೂಲಾಂಕುರವಪ್ಪುದಾದ ಚರಲಿಂಗವೆಂದು.
ಆ ಚರಲಿಂಗದ ಪಾದಾಂಬುವ ತಂದೆನ್ನ
ಇಷ್ಟಲಿಂಗದ ಚತುರ್ವಿಧಫಲಪದಪುರುಷಾರ್ಥವೆಂಬ ಕರಂಗಳಂ ತೊಳೆವೆ.
ಅದೆಂತೆಂದಡೆ:
ಸಾಲೋಕ್ಯಂ ಚ ತು ಸಾಮೀಪ್ಯಂ ಸಾರೂಪ್ಯಂ ಚ ಸಾಯುಜ್ಯತಾ ।
ತದುಪೇಕ್ಷಕ ಭಕ್ತಶ್ಚ ರೌರವಂ ನರಕಂ ವ್ರಜೇತ್ ॥ ಎಂದುದಾಗಿ,
ಆ ಚರಲಿಂಗದ ಪ್ರಸಾದವ ತಂದೆನ್ನ ಇಷ್ಟಲಿಂಗವ ಜೀವಕಳೆಯ ಮಾಡುವೆ.
ಅದೆಂತೆಂದಡೆ:
ಸ್ವಯಂಪ್ರಕಾಶರೂಪಶ್ಚ ಜಂಗಮೋ ಹಿ ನಿಗದ್ಯತೇ ।
ಮತ್ತಂ,
ಜಂಗಮಸ್ಯ ಪದೋದಂ ಚ ಯುಕ್ತಂ ಲಿಂಗಾಭಿಷೇಚನೇ ।
ತತ್ಪ್ರಸಾದೋ ಮಹಾದೇವ ನೈವೇದ್ಯಂ ಮಂಗಲಂ ಪರಂ ॥ ಎಂದುದಾಗಿ,
ಆ ಲಿಂಗವೆ ಅಂಗ, ಅಂಗವೆ ಲಿಂಗ,
ಆ ಲಿಂಗವೆ ಪ್ರಾಣ, ಆ ಪ್ರಾಣ ಲಿಂಗವಾದುದು.
ಇದು ಚತುರ್ವಿಧಫಲಪದಪುರುಷಾರ್ಥವ ಮೀರಿದ ಘನವು.

ಕೂಡಲಸಂಗಮದೇವಯ್ಯಾ,
ಈ ದ್ವಯದ ಪರಿಯ ನಿಮ್ಮ ಶರಣನೆ ಬಲ್ಲ. || ೪೧೭ ||

೧೩೭೮

ಶ್ರೀ ವಿಭೂತಿಯ ಬಿಟ್ಟು ತಪಸ್ಸು ಮಾಡಿದಡೆ ಆ ತಪಃಸಿದ್ಧಿ ಬಯಲು,
ಶ್ರೀವಿಭೂತಿಯ ಬಿಟ್ಟು ದೀಕ್ಷೆಯ ಕೊಂಡಡೆ ಆ ದೀಕ್ಷೆ ಬಯಲು,
ಶ್ರೀವಿಭೂತಿಯ ಬಿಟ್ಟು ಮಂತ್ರಗಳ ಸಾಧಿಸಿದಡೆ ಆ ಮಂತ್ರಸಿದ್ಧಿ ಬಯಲು,
ಶ್ರೀವಿಭೂತಿಯ ಬಿಟ್ಟು ಯಜ್ಞಂಗಳ ಸಾಧಿಸಿದಡೆ ಆ ಯಜ್ಞಸಿದ್ಧಿ ಬಯಲು,
ಶ್ರೀವಿಭೂತಿಯ ಬಿಟ್ಟು ದೇವತಾರ್ಚನೆಯ ಮಾಡಿದಡೆ ಆ ದೇವತಾರ್ಚನೆ ಬಯಲು,
ಶ್ರೀವಿಭೂತಿಯ ಬಿಟ್ಟು ವಿದ್ಯವ ಸಾಧಿಸಿದಡೆ ಆ ವಿದ್ಯಾಸಿದ್ಧಿ ಬಯಲು.
ಹಲವು ಕಾಲ ಕೊಂದ ಸೂನೆಗಾರನ ಕೈಯ್ಯ ಕತ್ತಿಯಾದಡೇನು
ಪರುಷ ಮುಟ್ಟಲು ಹೊನ್ನಾಗದೇ ಅಯ್ಯಾ?
ಲಲಾಟದಲ್ಲಿ ವಿಭೂತಿಯ ಧರಿಸಲ್ಕೆ,
ಪಾಪಂಗಳು ಬೆಂದು ಹೋಗದಿಹವೇ ಕೂಡಲಸಂಗಮದೇವಾ? || ೪೧೮ ||

೧೩೭೯

ಶ್ರೋತ್ರದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು,
ತ್ವಕ್ಕಿನಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು,
ನೇತ್ರದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು,
ಜಿಹ್ವೆಯಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು,
ನಾಸಿಕದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು.
ಇಂತೀ ಪಂಚೇಂದ್ರಿಯಂಗಳಲ್ಲಿ ಬ್ರಹ್ಮಚಾರಿಯಾಗಿ,
ಕೂಡಲಸಂಗಮದೇವರಲ್ಲಿ ಎನ್ನನಾಗುಮಾಡಲಿಕೆ
ಬ್ರಹ್ಮಚಾರಿಯಾದರು ಪ್ರಭುದೇವರು. || ೪೧೯ ||

೧೩೮೦

ಸಂಜೆಯ ಮಂಜಿನ ಕಪ್ಪು–
ಅಂಜಿದಡೆ ಶಂಕೆ ತದ್ರೂಪವಾಗಿ ನಿಂದಿತ್ತು.
ತನ್ನ ಭಾವದ ನಟನೆ ನಡೆವನ್ನಕ್ಕ ನಡೆಯಿತ್ತು,
ಅದು ನಿಂದಲ್ಲಿಯೇ ನಿಂದಿತ್ತು.
ಅದರಂತುವನರಿದಡೆ
ಹಿಂದೆ ಹುಸಿ, ಮುಂದೆ ಕೂಡಲಸಂಗಮದೇವನ ನಿಲವು ತಾನೆ! || ೪೨೦ ||

೧೩೮೧

ಸಂಸಾರವೆಂಬಡವಿಯಲ್ಲಿ ಹುಲಿಯುಂಟು, ಕರಡಿಯುಂಟು.
ಶರಣಸಂಜನಂಜ, ಮಹಾಧೀರ ಶರಣಸಂಜನಂಜ,
ಕೂಡಲಸಂಗನ ಶರಣಂಗೆ ನಿರ್ಭಯ. || ೪೨೧ ||

೧೩೮೨

ಸಂಸಾರಸರ್ಪನ ಹೇಳಿಗೆಯ ಬಿಡಿಸಲು ಬಾರದು,
ಬಿಟ್ಟಡೆ ಕಟ್ಟಲು ಬಾರದು ನೋಡಾ.
ಬಿಡಿಸುವ ಬೆಡಗಿನ್ನೆಂತೊ?
ಕಾಮಕ್ರೋಧಲೋಭಮೋಹಮದಮತ್ಸರವೆಂಬ
ವಿಷದ ಹಲ್ಲಿಂಗಾವುದು ಗಾರುಡವಯ್ಯಾ,
ಮಹಾದಾನಿ ಕೂಡಲಸಂಗಮದೇವಾ? || ೪೨೨ ||

೧೩೮೩

ಸಕಲಕ್ರಿಯೆಗಳಿಗಿದು ಕವಚ,
ಸಕಲವಶ್ಯಕ್ಕಿದು ಶುಭತಿಲಕ,
ಸಕಲಸಂಪದಕ್ಕೆ ತಾಣವಿದು,
ಅಘಟಿತ ಘಟಿತವೆನಿಸುವ ಅನುಪಮ ತ್ರಿಪುಂಡ್ರ.
ಅಣುಮಾತ್ರ ವಿಭೂತಿಯು ಪಣೆಯೊಳಿಡೆ
ಎಣಿಕೆಯಿಲ್ಲದ ಭವಪಾಶ ಪರಿವುದು.
ತ್ರಿಣಯ ನೀನೊಲಿದು ಧರಿಸಿದೆಯೆಂದೆನೆ;
ಆನು ಧರಿಸಿ ಬದುಕಿದೆ ಕೂಡಲಸಂಗಯ್ಯಾ. || ೪೨೩ ||

೧೩೮೪

ಸಕಲದಲ್ಲಿ ಸನ್ನಿಹಿತರಲ್ಲದವರು
ನಿಷ್ಕಲದಲ್ಲಿ ನಿಜವನೈದುವ ಪರಿ ಎಂತಯ್ಯಾ?
ಲಿಂಗವ ಹೋಗಾಡಿದನೆಂಬ ನಿಂದೆಯ ಪ್ರಮಥರು ನುಡಿವುತ್ತಿರಲು
ಲಿಂಗೈಕ್ಯವೆಂತಪ್ಪುದು ಹೇಳಾ?
ನಿಮ್ಮ ಪ್ರಮಥರು ಮೆಚ್ಚಿ ಅಹುದೆಂದು ಒಡಂಬಟ್ಟು
ಎನ್ನ ಮನ ತಾರ್ಕಣೆಯಲ್ಲಿಪ್ಪಂತೆ
ನಿಮ್ಮಲ್ಲಿ ಐಕ್ಯವ ಮಾಡಾ
ಕೂಡಲಸಂಗಮದೇವಪ್ರಭುವೆ. || ೪೨೪ ||

೧೩೮೫

ಸತಿಪುರುಷರಿಬ್ಬರೂ ಪ್ರತಿದೃಷ್ಟಿಯಾಗಿ ಮಾಡಬಲ್ಲಡೆ
ಅದೆ ಮಾಟ,
ಕೂಡಲಸಂಗಮದೇವರ ಕೂಡುವ ಕೂಟ. ॥ ೪೨೫ ॥

೧೩೮೬

ಸತ್ಯಮುಕ್ತಿಯ ಕಳೆಯ ನೋಡಾ,
ನಿತ್ಯತತ್ವದ ಇರವ ನೋಡಾ,
ಮೂರೊಂದಾದ ಆರೂಢನ ನೋಡಾ.
ಕೂಡಲಸಂಗಮದೇವರಲ್ಲಿ ತದ್ಗತನಾಗಿಪ್ಪ
ಮರುಳಶಂಕರದೇವರ ನಿಲವ
ಪ್ರಭು ಸಿದ್ಧರಾಮಯ್ಯದೇವರಿಂದ ಕಂಡು ಬದುಕಿದೆನು. ॥ ೪೨೬ ॥

೧೩೮೭

ಸತ್ಯ ಸದಾಚಾರ ಸಂಬಂಧವಾದ ಭೃತ್ಯಾಚಾರ ಎನಗಿಲ್ಲಯ್ಯಾ,
ಆನು ನಿಮ್ಮ ನೆನೆಯಲು ಎನಗೆ ಭಕ್ತಿಯಿಲ್ಲಯ್ಯಾ,
ಕರುಣದಿಂ ಕೃಪೆಮಾಡಾ, ಕೂಡಲಸಂಗಮದೇವಾ. ॥ ೪೨೭ ॥

೧೩೮೮

ಸದಾಚಾರವ ಕಂಡು, ಲಾಂಛನಪಕ್ಷವನಾ[ಡಿ]ದವರಿಗೆ,
ಇಹದೊಳು ಪರದೊಳು ಗತಿಯಿಲ್ಲ, ಕಾಣರೋ.
ಮಣ್ಣೆತ್ತಾದಡೇನು, ತನ್ನೆತ್ತು ಗೆಲಬೇಕೆಂಬುದಕ್ಕೊಲಿವ
ನಮ್ಮ ಕೂಡಲಸಂಗಯ್ಯ. ॥ ೪೨೮ ॥

೧೩೮೯

ಸದ್ಭಕ್ತಂಗೆಯೂ ಜಂಗಮಕ್ಕೆಯೂ ಭಾಜನ ಬೇರೆಂಬ
ಶಾಸ್ತ್ರದ ಸದಗರು ನೀವು ಕೇಳಿರೋ.
ಭಕ್ತದೇಹಿಕ ದೇವನೆಂದು ಶ್ರುತಿ ಸಾರುತ್ತಿವೆ, ಅರಿದು ಮರೆಯದಿರಿ,
ಮರವೆಯಿಂದ ಬ್ರಹ್ಮ ಶಿರವ ಹೋಗಾಡಿಕೊಂಡ,
ಮರವೆಯಿಂದ ದಕ್ಷ ಶಿರವ ನೀಗಿ ಕುರಿದಲೆಯಾದುದನರಿಯಿರೆ?
ಮರೆಯದೆ ವಿಚಾರಿಸಿ ನೋಡಿ, ಭಕ್ತಂಗೂ ಲಿಂಗಕ್ಕೂ ಭಿನ್ನವಿಲ್ಲ.

ಇನ್ನು ಆ ಭಕ್ತಂಗೆಯೂ ಆ ಜಂಗಮಕ್ಕೆಯೂ ಭೇದವಿಲ್ಲ.
ಬೇರ್ಪಡಿಸಿ ನುಡಿಯಲುಂಟೆ?
ಇನ್ನು ಆ ಗುರುವಿಂಗೆಯೂ ಆ ಭಕ್ತಂಗೆಯೂ ಸಂಕಲ್ಪವಿಲ್ಲ.
ಅದೆಂತೆಂದಡೆ:
ಮೆಟ್ಟುವ ರಕ್ಷೆ, ಮುಟ್ಟುವ ಯೋನಿ, ಅಶನ, ಶಯನ, ಸಂಯೋಗ,
ಮಜ್ಜನ, ಭೋಜನ ಇಂತಿವನು
ಗುರುಲಿಂಗಜಂಗಮ ಸಹಿತವಾಗಿ ಭೋಗಿಸುವ ಸದ್ಭಕ್ತಂಗೆ
ನಾನು ನಮೋ ನಮೋ ಎಂಬೆನು.
ಅದೆಂತೆಂದಡೆ:
ಅರ್ಥಪ್ರಾಣಾಭಿಮಾನಂ ಚ ಗುರೌ ಲಿಂಗೇ ಚ ಜಂಗಮೇ ।
ತಲ್ಲಿಂಗಜಂಗಮಪ್ರಾಣಂ ಭಕ್ತಸ್ಥಲಮುದಾಹೃತಮ್ ॥ ಎಂದುದಾಗಿ,
ಇದನರಿದು ಅರ್ಥವನೂ ಪ್ರಾಣವನೂ ಅಭಿಮಾನವನೂ
ಗುರುಲಿಂಗಜಂಗಮಕ್ಕೆ ಸಮರ್ಪಿಸಿ
ಆ ಗುರುಲಿಂಗಜಂಗಮವೆ ಪ್ರಾಣವಾಗಿಹ ಸದ್ಭಕ್ತಂಗೆಯೂ
ಆ ಗುರುಲಿಂಗಜಂಗಮಕ್ಕೆಯೂ ಏಕಭಾಜನವಲ್ಲದೆ ಏಕಭೋಜನವಲ್ಲದೆ,
ಭಿನ್ನಭಾಜನ ಭಿನ್ನಭೋಜನವುಂಟೆ?–ಇಲ್ಲವಾಗಿ,
ಅದೇನು ಕಾರಣವೆಂದಡೆ:
ಆ ಸದ್ಭಕ್ತನ ಅಂಗವೆಂಬ ಗೃಹದಲ್ಲಿ ಜಂಗಮವಿಪ್ಪನಾಗಿ
ಇದನರಿದು ಬೇರೆಮಾಡಿ ನುಡಿಯಲಾಗದು.
ಚೆನ್ನಯ್ಯನೊಡನುಂಬುದು ಆವ ಶಾಸ್ತ್ರ?
ಕಣ್ಣಪ್ಪ ಸವಿದುದ ಸವಿವುದಾವ ಶಾಸ್ತ್ರ?
ಭಕ್ತದೇಹಿಕ ದೇವನಾದ ಕಾರಣ.
ಅದೆಂತೆಂದಡೆ:
ಭಕ್ತಜಿಹ್ವಾಗ್ರತೋ ಲಿಂಗಂ ಲಿಂಗಜಿಹ್ವಾಗ್ರತೋ ರುಚಿಃ ।
ರುಚ್ಯಗ್ರೇತು ಪ್ರಸಾದೋಽಸ್ತು ಪ್ರಸಾದಃ ಪರಮಂ ಪದಂ ॥
ಇಂತೆಂಬ ಪುರಾಣವಾಕ್ಯವನರಿದು
ಸದ್ಭಕ್ತನೂ ಗುರುಲಿಂಗಜಂಗಮವೂ ಈ ನಾಲ್ವರೂ
ಒಂದೆ ಭಾಜನದಲ್ಲಿ ಸಹಭೋಜನಮಾಡುವರಿಂಗೆ
ಇನ್ನೆಲ್ಲಿಯ ಸಂಕಲ್ಪವೊ, ಇನ್ನೆಲ್ಲಿಯ ಸೂತಕವೊ,
ಇನ್ನೆಲ್ಲಿಯ ಪಾತಕವೊ ಕೂಡಲಸಂಗಮದೇವಾ. ॥ ೪೨೯ ॥

೧೩೯೦

ಸದ್ಗುರುಮಾರ್ಗಾಚಾರದ ನೆಲೆಕಲೆಯನರಿಯದೆ,
ಸದಾಚಾರಸದ್ಭಕ್ತನಲ್ಲಿ ಆಡಂಬರಲಾಂಛನದ ವೇಷವ ಧರಿಸಿ,
ಗ್ರಾಸವ ಹೊರೆದು, ಗುಹ್ಯಲಂಪಟ ಹೆಚ್ಚಿ,
ಆ ಭಕ್ತನ ಕ್ರಿಯಾಶಕ್ತಿಗೆ ಭ್ರಮಿಸುವನೊಬ್ಬ ಚರಪ್ರಾಣಿಯು
ಜಡಜಂತುವೆಂಬೆನಯ್ಯಾ.
ಅಂಥ ಕಾಮವಿಕಾರಭ್ರಾಂತನ ಕಾಮವ ಪರಿಹರಿಸಿ,
ಲಿಂಗಾಂಗನಿಷ್ಠಾ ಪರತ್ವವ ಹೇಳದೆ,
ತಾ ಭೋಗಿಸುವ ಸ್ತ್ರೀಯಳ ಕೊಡುವನೊಬ್ಬ ಸ್ಥಾವರಪ್ರಾಣಿಯು
ಕ್ರಿಮಿಕೀಟಕಪ್ರಾಣಿಯೆಂಬೆನಯ್ಯಾ.
ಇಂತು ತನುಮನಧನಂಗಳ ಕೊಟ್ಟುಕೊಂಬ ವಿಚಾರವನರಿಯದೆ
ಬಿಂದುವೆ ನಿಜಶೇಷವೆಂದು ತಿಳಿಯದ
ಮೂಳನಿಗೆಲ್ಲಿಯದೊ ತ್ರಿವಿಧಪ್ರಸಾದ?
ಸ್ಥಲದಿಂದ ಸ್ಥಲವನರ್ಪಿಸುವುದು ಒಡಲ ಗುಣ,
ನಿಃಸ್ಥಲದಿಂದ ನಿಃಸ್ಥಲವನರ್ಪಿಸುವುದು ಪ್ರಾಣನ ಗುಣ,
ನೋಡಿ ಆರೈವುದೆ ಅರ್ಪಿತ ಗುಣ,
ಇಂಥ ಮಹಾಂತರ ತೋರಿ ಬದುಕಿಸಯ್ಯಾ,
ಕೂಡಲಸಂಗಮದೇವಾ. || ೪೩೦ |

೧೩೯೧

ಸಬಳದ ತುದಿಯಲ್ಲಿ ಕಟ್ಟಿದ ಗಂಟೆಯಂತೆ,
ಮಾತು ಲಿಂಗಾ ಲಿಂಗಾ ಎನುತ್ತ
ಮೊನೆ ಇರಿವಂತೆ ಬೇಡವಯ್ಯಾ, ಹುಸಿ.
ಮಾತಿನಲ್ಲಿ ದಿಟ, ಮನದಲ್ಲಿ ಸಟೆ
ಬೇಡವಯ್ಯಾ.
ಮನ ವಚನ ಕಾಯ ಒಂದಾಗದಿದ್ದರೆ
ಕೂಡಲಸಂಗಯ್ಯನೆಂತೊಲಿವನಯ್ಯಾ? || ೪೩೧

೧೩೯೨

ಸಮತೆ ಸನ್ಮತದಿಂದ ನಿಜಗುಣಕಾರಣದಿಂದ
ಸತ್ವರಜಸ್ತಮದ ಕ್ರೋಧ ಉಳಿಯದನ್ನಕ್ಕರ
ಅನುಭಾವವೆಲ್ಲಿಯದೊ?

ಆತ್ಮಸ್ತುತಿ, ಪರನಿಂದೆ, ಅಸಹ್ಯ, ಅನೃತ, [ಕು]ತರ್ಕ ಉಡುಗದನ್ನಕ್ಕರ
ಅನುಭಾವವೆಲ್ಲಿಯದೊ?
ಅರಿಷಡ್ವರ್ಗ ದಶವಾಯುಗಳ ವಿಕಳ ಅಪಾನ ಬಿಡದನ್ನಕ್ಕರ
ಅನುಭಾವವೆಲ್ಲಿಯದೊ?
ಮದ ಮತ್ಸರ ವೈತಾಳ ಸಂವಾದವಲ್ಲದೆ
ಅನುಭಾವವೆಲ್ಲಿಯದೊ?
ಸಮತೆ, ಸಜ್ಜನಿಕೆ, ಸಮಯಾಚಾರದ ನಿಜಪದವು
ದುರಾಚಾರಿಗಳಿಗಳವಡುವುದೆ?
ನಮ್ಮ ಕೂಡಲಸಂಗನ ಶರಣರಿಗಲ್ಲದೆ
ಅನುಭಾವವೆಲ್ಲರಿಗೆಲ್ಲಿಯದೊ? ॥ ೪೩೨ ॥

೧೩೯೩

ಸಮಯವಿರುದ್ಧ ಕಂಜಿ ವಿನಯವ ನುಡಿವೆ,
ಕೊಂದಡೆ ಕೊಲ್ಲು, ಕಾಯ್ದಡೆ ಕಾಯಿ.
ಎನ್ನವರೆಂದು ಮನ ಹಿಡಿಯದು, ಕೂಡಲಸಂಗಮದೇವಾ. ॥ ೪೩೩ ॥

೧೩೯೪

ಸಮರತಿ ಸಮಸಂಧಾನದ ಸಂಗಸುಖವು
ನಿಮ್ಮಿಂದಲೆನಗೆ ಸಾಧ್ಯವಾಯಿತ್ತಲ್ಲದೆ,
ಎನಗೆ ತೋರಿದಪರಾರು ಹೇಳಾ ಲಿಂಗೈಕ್ಯದ ಹೊಲಬ?
ಕೂಡಲಸಂಗಮದೇವರ ಶರಣ ಪ್ರಭುದೇವರಲ್ಲಿ
ನೀನೆನ್ನನಿರಿಸದನ್ನಕ್ಕರ, ನಾನು ಬಲ್ಲೆನೆ ಹೇಳಾ . ॥ ೪೩೪ ॥

೧೩೯೫

ಸಮುದ್ರಕ್ಕೆ ಚಂದ್ರಮನ ಬರವೆ ಜೀವಾಳವಯ್ಯಾ,
ಬತ್ತಿದ ಕೆರೆಯ ಕಮಲಕ್ಕೆ ಉದಕವೆ ಜೀವಾಳವಯ್ಯಾ,
ಚಕೋರಂಗೆ ಚಂದ್ರಮನ ಬರವೆ ಜೀವಾಳವಯ್ಯಾ.
ಕೂಡಲಸಂಗಮದೇವಾ,
ಎನಗೆ ನಿಮ್ಮ ಶರಣರ ಬರವೆ ಜೀವಾಳವಯ್ಯಾ. ॥ ೪೩೫ ॥

೧೩೯೬

ಸಯದಾನ ಸವೆಯಿತ್ತೆಂದು ಬೆದರಿದೆನಾದಡೆ
ನಿಮ್ಮಾಣೆ, ನಿಮ್ಮ ಪ್ರಮಥರಾಣೆ.

ಪಡಿಪದಾರ್ಥಂಗಳು ಅವಸರಕ್ಕೆ ಒದಗದೆ ಇಪ್ಪಲ್ಲಿ
ಮನವಂಚಕ ಬಿವರಿವೆನಾದಡೆ ನಿಮ್ಮ ಭಕ್ತರಿಗೆ ಸಲ್ಲೆನು,
ಒಡವೆ ಸನಿದಡೆ ಒಡಲನೆ ಸಲಿಸುವೆನು.
ಕಡೆಮುಟ್ಟ ಪೂರೈಸದಿದ್ದೆನಾದಡೆ
ಮಡಿವಾಳ ಮಾಚಿತಂದೆಯ ಪಾದಸಾಕ್ಷಿಯಾಗಿ
ಕೂಡಲಸಂಗಮದೇವರಿಗೆ ದೂರವಹೆನು. || ೫೩೬ ||

೧೩೯೭

ಸರ್ವಾವಧಾನಿ ಸಮಯಪ್ರಸಾದಿ ನೋಡಯ್ಯಾ,
ಲಿಂಗಾರ್ಪಿತದಲ್ಲಿ ಸರ್ವಾವಧಾನಿ ನೋಡಯ್ಯಾ,
ಅಯ್ಯಾ, ಅನಾಹತಂಗಳ ಮುನ್ನವೆ ಇರಲೀಯ,
ಕೂಡಲಸಂಗಮದೇವರಲ್ಲಿ
ಚೆನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು. || ೫[illegible] ||

೧೩೯೮

ಸಾಕಾರ ನಿರಾಕಾರದೊಳಗೆ ನಿರವಯಾಂಗನಾಗಿ ಸುಳಿದು,
ಭಕ್ತರ ಭವವ ಹರಿಯಲೆಂದು ಬಂದ ಜಂಗಮದ ಪರಿಯ ನೋಡಾ.
ಉಣಲುಡಲು ಬಂದವನಲ್ಲ ಪ್ರಭುದೇವರು,
ತ್ರಿವಿಧದಾಸೆ ಮುನ್ನವೆಯಿಲ್ಲ, ಪ್ರಭುದೇವರಿಗೆ.
ಭಕ್ತನೆಂಬ ತನ್ನಂಗವ ತನ್ನೊಳೈಕ್ಯವ ಮಾಡಿಕೊಂಡು,
ನಿರವಯವಾಗ ಬಂದ ನಿರವಯನಯ್ಯಾ,
ಕೂಡಲಸಂಗಮದೇವರಲ್ಲಿ ಪ್ರಭುದೇವರು. || ೫೩೮ ||

೧೩೯೯

ಸಾಕಾರ ಸಂಗನಲ್ಲಿ ನಿರಾಕಾರವಿಲ್ಲೆಂದು
ನಿರಾಕಾರ ಸಂಗವನರಸಿ ತೊಳಲಿ ಬಳಲಿದೆನಯ್ಯಾ.
ನಿಶ್ಚಿಂತ ನಿಜಭಜನೆ ನೆಲೆಗೊಳ್ಳದೆನಗೆ,
ಭ್ರಾಂತು ಭ್ರಮೆಯಿಲ್ಲದಂತೆ ಎಂದಪ್ಪುದೋ ಎನಗೆ
ಕೂಡಲಸಂಗಮದೇವಾ, ಕೇಳಯ್ಯಾ. || ೫೩೯ ||

೧೪೦೦

ಸೂತ್ರಧಾರಿ ಮನದ ಮೈಲಿಗೆಯ ಕಳೆಯಬಂದನಯ್ಯಾ ಮಡಿವಾಳನು.
ಎನ್ನ ಕಾಯದ ಮೈಲಿಗೆಯ ತಂದು ತನ್ನ ಮುಂದೆ ಇರಿಸಿದಡೆ

ಸಮತೆಯೆಂಬ ಕೂಪತೋಹಿನಲ್ಲಿ ಅದ್ದಿ, ಕಟ್ಟಿ ಹಿಳಿದನಯ್ಯಾ.
ಪಂಚೇಂದ್ರಿಯುವರ್ಗಂಗಳ ಜ್ಞಾನವೆಂಬ ನಿರ್ಮಲಜಲದಲ್ಲಿ
ಅಲುಬಿ ಸೆಳೆದನಯ್ಯಾ.
ರವಿಶಶಿಶಿಖಿಯ ತೇಜದಲ್ಲಿ ಆರಿಸಿದನು,
ಚತುರ್ದಶ ಷೋಡಶವೆಂಬ ಘಳಿಗೆಯ ಮಾಡಿದನು.
ಸಮಾಧಾನವೆಂಬ ಅಡ್ಡೆಯ ಮೇಲಿರಿಸಿ ಸಮಗುಣವೆಂಬ
ಕೊಡತಿಯಲ್ಲಿ ಘಟ್ಟಿಸಿದನು.
ಹರಿಯಿತ್ತಯ್ಯಾ ಸೆರಗು ಮೂರಾಗಿ.
ಆ ಮೂರರಿವೆಯ ಕೊಟ್ಟನಯ್ಯಾ, ಎನ್ನ ಕೈಯಲ್ಲಿ.
ಆ ಅರಿವೆಯ ಗುರುವಿಂಗೊಂದ ಕೊಟ್ಟೆನು,
ಲಿಂಗಕ್ಕೊಂದ ಕೊಟ್ಟೆನು, ಜಂಗಮಕ್ಕೊಂದ ಕೊಟ್ಟೆನು.
ಎನಗೆ ಕೊಟ್ಟ ಮೂರರಿವೆಯನೂ
ಒಂದುಮಾಡಿ ಹೊದೆದುಕೊಂಡು ನಿಶ್ಚಿಂತನಾಗಿ,
ಮಡಿವಾಳನ ಕೃಪೆಯಿಂದಲಾನು ಬದುಕಿದೆನು
ಕಾಣಾ, ಕೂಡಲಸಂಗಮದೇವಾ. ॥ ೩೬೦ ॥

೧೪೦೧

ಸ್ಥೂಲತನುವೆಂಬ ಭಾಂಡದಲ್ಲಿ ಸದಾಚಾರವೆಂಬ ಸಮುದಾಸವ ತುಂಬಿದೆ,
ತುಂಬಲೊಡನೆ ಅಗ್ನಿಯಿಲ್ಲದ ಮುನ್ನ ಪಾಕವಾಯಿತ್ತು,
ಮೇಲು ಸಾಧನವಿಲ್ಲದ ಮುನ್ನ ರುಚಿ ಪಕ್ವವಾಯಿತ್ತು.
ಅದನು ಸೂಕ್ಷ್ಮತನುವೆಂಬ ಭಾಂಡದಲ್ಲಿ ಬರಿಕೆಯಿಟ್ಟು,
ಕಾರಣತನುವಿನಲ್ಲಿ ಕುಳ್ಳಿರ್ದು ಊಡೆಹೆನೆಂದನುಮಾಡಲು,
ಪ್ರಕೃತಿಯಳಿದು ಒಂದೆ ಭಾಂಡವಾದುದ ಕಂಡು
ಉಣಲೊಲ್ಲದೆ ಅನ್ಯರಿಗಿಕ್ಕದೆ,
ಎನ್ನದೆನ್ನದೆ, ಸಂಬಂಧಾಂಗಗಳ ತೆಗೆದುಕೊಳ್ಳದೆ,
ಬೇಸರವ್ಯೋಗದೆ, ಒಂದರೊಳಗೊಂದಿತ್ತೆನ್ನದೆ
ಉಂಡು ಸುಖಿಯಾದೆನಯ್ಯಾ, ಕೂಡಲಸಂಗಮದೇವಾ. ೪೩೧

೧೪೦೨

ಸ್ಥೂಲಪಂಚಮಹಾಭೂತಂಗಳಲ್ಲಿ ಇಷ್ಟಲಿಂಗಪ್ರತಿಷ್ಠೆ,
ಸೂಕ್ಷ್ಮಪಂಚಮಹಾಭೂತಂಗಳಲ್ಲಿ ಪ್ರಾಣಲಿಂಗಪ್ರತಿಷ್ಠೆ,
ಕಾರಣಪಂಚಮಹಾಭೂತಂಗಳಲ್ಲಿ ತೃಪ್ತಿಲಿಂಗಪ್ರತಿಷ್ಠೆ.
ಇಂತೀ ಸ್ಥೂಲ, ಸೂಕ್ಷ್ಮ, ಕಾರಣವು,

ಮಹಾಕಾರಣ ಮಹದ ಹೃದಯದಲ್ಲಿ ಕೊನೆದೋರಿದ ಮಹಾಜ್ಯೋತಿಯು
ನಿಮ್ಮ ಶರಣಾನುಭಾವದಲ್ಲಿದ್ದು ಕಾಣಬಹುದು,
ಕೂಡಲಸಂಗಮದೇವಾ. || ೪೪೨ ||

೧೪೦೩

ಹಗಲಾಯಿತ್ತು ಹೋಗದು, ಇರುಳಾಯಿತ್ತು ನಿದ್ರೆಬಾರದು,
ಉಳಿದವರ ಮಾತು ಸಾಗದು, ಉಳಿದವರ ಮಾತು ಸಾಗದು.
ಕೂಡಲಸಂಗಯ್ಯನಲ್ಲವೆ ಒಲ್ಲದು ಮನ. || ೪೪೩ ||

೧೪೦೪

ಹದಿನಾರಿದ್ದಡೆ ಎಂಟುಮಾಡುವ ಸಂಗಯ್ಯದೇವರು,
ಎಂಟಿದ್ದಡೆ ನಾಲ್ಕುಮಾಡುವ ಸಂಗಯ್ಯದೇವರು,
ನಾಲ್ಕಿದ್ದಡೆ ಎರಡುಮಾಡುವ ಸಂಗಯ್ಯದೇವರು,
ಎರಡಿದ್ದಡೆ ಒಂದುಮಾಡುವ ಸಂಗಯ್ಯದೇವರು,
ಆ ಒಂದ ಇಲ್ಲವೆಯು ಮಾಡುವ ಸಂಗಯ್ಯದೇವರು,
ತಿರಿಕನ ಶೋಭಿತನ ಮಾಡುವ ಸಂಗಯ್ಯದೇವರು,
ತಿರಿ[ತ]ನಹೋದಡೆ ಹುಟ್ಟದೆನಿಸುವ ಸಂಗಯ್ಯದೇವರು.
ಇವಾವುವಕ್ಕೂ ಸೆಡೆಯದಿದ್ದಡೆ
ಕೂಡಲಸಂಗಮದೇವರು ತನ್ನಂತೆ ಮಾಡುವ. || ೪೪೪ ||

೧೪೦೫

ಹಮ್ಮು ಹನ್ನೆರಡು ಸಂವತ್ಸರ ಹಿಂದಾಯಿತ್ತು,
ಏನ ಮಾಡಿದಡೇನಯ್ಯಾ, ಎನ್ನಲ್ಲಿ ದಿಟವಿಲ್ಲದನ್ನಕ್ಕರ?
ಏನ ಹಮ್ಮಿದಡೇನಯ್ಯಾ, ಎನ್ನಲ್ಲಿ ದಿಟವಿಲ್ಲದನ್ನಕ್ಕರ?
ಎನ್ನ ಪುಣ್ಯದ ಫಲ, ಕೂಡಲಸಂಗಮದೇವಾ,
ಬಾಯಿನದುಂಡೆಗೆ ತೋಯಿಸುಹಟ್ಟಂತಾಯಿತ್ತು. || ೪೪೫ ||

೧೪೦೬

ಹರನ ಭಜಿಸುವುದು,
ಮನಮುಟ್ಟಿ ಭಜಿಸಿದೆಯಾದಡೆ ತನ್ನ ಕಾರ್ಯ ಘಟ್ಟಿ.
ಅಲ್ಲವಿರ್ದಡೆ ತಾಪತ್ರಯ ಬೆನ್ನಟ್ಟಿ ಮುಟ್ಟಿ ಒತ್ತಿ ಮುರಿದೊಯ್ವುದು,
ಎಸ ಹೆಡಗಯ್ಯ ಕಟ್ಟಿ ಕುಟ್ಟುವುದು.
ಕೂಡಲಸಂಗನ ಶರಣರ ದೃಷ್ಟಿಯವನ ಮೇಲೆ ಬಿದ್ದವ ಜಗಜಟ್ಟಿ. || ೪೪೬ ||

೧೪೦೭

ಹರಶಕ್ತಿಗಳಲ್ಲಿ ಹುಟ್ಟಿದ ಬೆನಕ ಭೈರವ ಷಣ್ಮುಖರ
ಮಹಾಹರನ ಮಕ್ಕಳೆಂಬ ಪಾತಕ ನೀ ಕೇಳೊ.
ಹರಿಹರನು ಒಂದೆಂಬ ಶಿವದ್ರೋಹಿ ನೀ ಕೇಳೊ.
ಹರಿ ಸಹಿತಾರರಿಂದತ್ತ ಅಜಾತನಚರಿತ್ರ ಅಪ್ರತಿಮಮಹಿಮ
ಕೂಡಲಸಂಗಮದೇವನೊಬ್ಬನೆ ಕಾಣೆ ಭೋ. || ೪೪೭ ||

೧೪೦೮

ಹರಿಯ ಬೇಡುವಡೆ ಅವಗೆ ಬಲೀಂದ್ರ ದಾನವನಿಕ್ಕಿದನು,
ಬ್ರಹ್ಮನ ಬೇಡುವಡೆ ಅವಗೆ ಶಿರವಿಲ್ಲ,
ಬೌದ್ಧನ ಬೇಡುವಡೆ ಅವಗೆ ಬುದ್ಧಿ ಸಮನಿಸದು,
ಜಿನನ ಬೇಡುವಡೆ ಅವಗೆ ಉಡಲಿಲ್ಲ,
ಬೆನಕನ ಬೇಡುವಡೆ ಅವಗೆ ಕೋಡು ಮುರಿಯಿತ್ತು,
ಭೈರವನ ಬೇಡುವಡೆ ಅವ ಉಟ್ಟುದನಿಕ್ಕಿ ಆಡುತ್ತಿರ್ದನು.
ಅಭಯಂಕರ ಜಗಕ್ಕೆಲ್ಲ! ಜಗದಾನಿಯ ಬೇಡುವೆನು
ಕೂಡಲಸಂಗಯ್ಯನ. || ೪೪೮ ||

೧೪೦೯

ಹಸಿದಳುವ ಶಿಶುವಿಂಗೆ ತಾಯಿ ಮೊಲೆಯ ಕೊಟ್ಟಡೆ,
ಆ ಶಿಶು ಜೀವಿಸದಿಪ್ಪುದೆ ಹೇಳಾ, ಅಯ್ಯಾ?
ಪ್ರಾಣವಲ್ಲಭನ ಅಗಲಿಕೆಯಿಂದ ಪ್ರಾಣವಿಯೋಗವಾಗಿಹ
ಹೆಂಗೂಸಿಂಗೆ ಆ ಪ್ರಾಣವಲ್ಲಭ ಬಂದಡೆ
ವಿರಹ ಸಂತವಿಸದಿಪ್ಪುದೆ ಹೇಳಾ, ಅಯ್ಯಾ?
ಕೂಡಲಸಂಗಮದೇವರು ಸಾಕ್ಷಿಯಾಗಿ
ಪ್ರಭುವೆನ್ನ ಮನೆಗೆ ಬಂದಡೆ ಎನ್ನ ಬಯಕೆ ಕೈಸಾರಿ
ಚೆನ್ನಬಸವಣ್ಣನ ಕರುಣದ ಕಂದನಾಗಿ
ಉಳಿದೆನು ಕಾಣಾ, ಮಡಿವಾಳಯ್ಯಾ. || ೪೪೯ ||

೧೪೧೦

ಹಸುವ ಕೊಂದಾತನು ನಮ್ಮ ಮಾದಾರ ಚೆನ್ನಯ್ಯ.
ಶಿಶುವೇಧೆಗಾರನು ನಮ್ಮ ಡೋಹರ ಕಕ್ಕಯ್ಯ.
ಪಾಪಕರ್ಮಿ ನಮ್ಮ ಮಡಿವಾಳ ಮಾಚಯ್ಯ.

ಇವರಿಬ್ಬರ ಮೂವರ ಕೂಡಿಕೊಂಡಿಪ್ಪ,
ಕೊಟ್ಟುದ ಬೇಡನು ನಮ್ಮ ಕೂಡಲಸಂಗಯ್ಯ. || ೪೫೦ ||

೧೪೧೧

ಹಸ್ತಕಡಗ ಕೈಗಧಿಕ ನೋಡಾ: ಕೊಡಲಹುದು ಕೊಳಲಾಗದು,
ಬಾಹುಬಳೆ ತೋಳಿಂಗಧಿಕ ನೋಡಾ: ಪರವಧುವನಪ್ಪಲಾಗದು,
ಕರ್ಣಕುಂಡಲ ಕಿವಿಗಧಿಕ ನೋಡಾ: ಶಿವನಿಂದೆಯ ಕೇಳಲಾಗದು,
ಕಂಠಮಾಲೆ ಕೊರಳಿಂಗಧಿಕ ನೋಡಾ: ಅನ್ಯದೈವಕ್ಕೆ ತಲೆವಾಗಲಾಗದು.
ಆಗಳೂ ನಿಮ್ಮುವ ನೆನೆದು, ಕೂಡಲಸಂಗಮದೇವಾ, ನಿಮ್ಮುವನೆ ಪೂಜಿಸಿ
ಸದಾ ಸನ್ನಿಹಿತನಾಗಿಪ್ಪನು ಲಿಂಗಶಿಖಾಮಣಿಯಯ್ಯಾ. || ೪೫೧ ||

೧೪೧೨

ಹಸ್ತ ತೋಳು ಉರ ಕಂಠ ಕರ್ಣ ಮಸ್ತಕವಲ್ಲಿ
ರುದ್ರಾಕ್ಷಿಯ ಧರಿಸಿಪ್ಪ ಸದ್ಭಕ್ತನೆ ರುದ್ರನು ನೋಡಾ.
ಅದೆಂತೆಂದಡೆ:
ಹಸ್ತೇ ಚೋರಸಿ ಕಂಠೇ ವಾ ಮಸ್ತಕೇ ವಾಪಿ ಧಾರಯೇತ್।
ಮುಚ್ಯತೇ ಸರ್ವಪಾಪೇಭ್ಯಃ ಸ ರುದ್ರೋ ನಾತ್ರ ಸಂಶಯಃ॥
ಇಂತೆಂದುದಾಗಿ,
ಸಮಸ್ತ ಪಾಪಂಗಳ ಕಳೆದು, ಕೂಡಲಸಂಗಯ್ಯ ತನ್ನಂತೆ ಮಾಡುವನು. || ೪೫೨ ||

೧೪೧೩

ಹಳಿವವರ ಲೆಂಕ, ಮತ್ಸರಿಸುವವರ ಡಿಂಗರಿಗ,
ಸಲೆಯಾಳಿಗೊಂಬವರ ತೊತ್ತಿನ ಮಗ.
ಜರಿದು [ಮತ್ಸರಿ]ಸಿ, ಹೊಯ್ದು ಬೈದು ಅದ್ದಲಿಸಿ
ಬುದ್ಧಿಯ ಹೇಳುವ ಹಿರಿಯರಾದ
ಡೋಹರ ಕಕ್ಕಯ್ಯಗಳ ಪಾದರಕ್ಷೆಯ ಕಿರುಕುಣಿಕೆಯಲ್ಲಿ
ಎ[ನ್ನನ್ನಿ]ಡು
ಕೂಡಲಸಂಗಮದೇವಾ! || ೪೫೩ ||

೧೪೧೪

ಹಾಡಿದಡೆನ್ನೊಡೆಯನ ಹಾಡುವೆ,
ಬೇಡಿದಡೆನ್ನೊಡೆಯನ ಬೇಡುವೆ,

ಒಡೆಯಂಗೊಡಲ ತೋರಿ ಎನ್ನ ಬಡತನವ ಬಿನ್ನೈಸುವೆ.
ಒಡೆಯ ಮಹಾದಾನಿ ಕೂಡಲಸಂಗಮದೇವಂಗೆ
ಸೆರಗೊಡ್ಡಿ ಬೇಡುವೆ. ॥ ೪೫೪ ॥

೧೪೧೫

ಹಾದರದ ಮಿಂಡನ ಹತ್ತಿರ ಮಡಗಿಕೊಂಡು,
ಮನೆಯ ಗಂಡನ ಒಲ್ಲೆನೆಂದಡೆ ಒಲಿವನೆ?
ತಾ ಶಿವಭಕ್ತನಾಗಿ, ತನ್ನಂಗದ ಮೇಲೆ ಲಿಂಗವಿದ್ದು
ಮತ್ತೆ ಭಿನ್ನಶೈವಕ್ಕೆರಗುವುದೆ ಹಾದರ,
ಕೂಡಲಸಂಗಯ್ಯನು ಅವರ ಮೂಗ ಕೊಯ್ಯದೆ ಮಾಣ್ಬನೆ? ॥ ೪೫೫ ॥

೧೪೧೬

ಹಾವು, ಕಿಚ್ಚ, ಮುಟ್ಟಿಹ ಶಿಶುವೆಂದು
ಹೆತ್ತತಾಯಿ ಮಗನ ಬೆಂಬತ್ತಿ ಬಪ್ಪಂತೆ ಇಪ್ಪ ನೋಡಾ,
ಎನ್ನೊಡನೊಡನೆ ಕೂಡಲಸಂಗಮದೇವ ಕಾಯ್ದುಕೊಂಡಿಪ್ಪನಾಗಿ. ॥ ೪೫೬ ॥

೧೪೧೭

ಹಾವು ಹದ್ದು ಕಾಗೆ ಗೂಗೆ ಅನಂತಕಾಲ ಬದುಕವೆ?
ಬೇಡವೋ ಮಾನವಾ, ಲೇಸೆನಿಸಿಕೊಂಡು ಬದುಕು,
ಓ ಮಾನವಾ ಶಿವಭಕ್ತನಾಗಿ.
ಅದೆಂತೆಂದಡೆ:
ಜೀವಿತಂ ಶಿವಭಕ್ತಾನಾಂ ವರಂ ಪಂಚದಿನಾನಿ ಚ।
ನಾಜಕಲ್ಪಸಹಸ್ರಂ ತು ಭಕ್ತಿಹೀನಂ ನ ಶಾಂಕರಿ॥
ಎಂದುದಾಗಿ,
ನಮ್ಮ ಕೂಡಲಸಂಗಮದೇವರ ಭಕ್ತಿವಿಡಿದು,
ಐದು ದಿವಸವಾದಡೂ ಬದುಕಿದಡೆ ಸಾಲದೆ? ॥ ೪೫೭ ॥

೧೪೧೮

ಹಿಂದೆ ಎನ್ನ ಗುರುವನುಮಿಷಂಗೆ ನೀನು ಲಿಂಗವ ಕೊಟ್ಟೆನೆಂಬ ಸೂತಕ ಬೇಡ,
ಅಂದು ಅನುಮಿಷ ನಿನ್ನ ಕೈಯಲ್ಲಿ ಕೊಂಡನೆಂಬ ಸಂಕಲ್ಪ ಬೇಡ,
ಹಿಂದು ಮುಂದೆಂಬ ಸಂದಳಿದು ನಿಂದಲ್ಲಿ ಭರಿತನಾದ ಬಳಿಕ
ಕೊಡಲುಂಟೆ, ಕೊಳಲುಂಟೆ ಹೇಳಾ?

ಹಿಡಿದಡೆ ಸಿಕ್ಕದು, ಕೊಡುವಡೆ ಹೋಗದು, ಎಡೆಯಾಟದ ಜೀವಪರಿಯೆಂತಯ್ಯಾ?
ಲಿಂಗವ ಹೋಗಾಡಿದನೆಂಬ ನಿಂದೆಯ ಪ್ರಮಥರು ನುಡಿವುತ್ತಿರಲು
ಲಿಂಗೈಕ್ಯವೆಂತಪ್ಪುದು ಹೇಳಾ?
ನಿಮ್ಮ ಪ್ರಮಥರು ಮೆಚ್ಚಿ ಅಹುದೆಂದು ಒಡಂಬಟ್ಟು,
ಎನ್ನ ಮನ ಮನ ತಾರ್ಕಣೆಯಪ್ಪಂತೆ
ನಿಮ್ಮಲ್ಲೈಕ್ಯವ ಮಾಡಾ, ಕೂಡಲಸಂಗಮದೇವಾ. || ೪೫೮ ||

೧೪೧೯

ಹಿಂದೆ ಸಂದ ಭಕ್ತರಂತಾನೊಂದೊಂದ ಬೇಡಿ ಕಾಡುವನಲ್ಲ,
ಹಿಂದೆ ಬೆನ್ನಲಿ ಬಂದು ಬಳಲಿದೆ.
ಇನ್ನೊಂದ ಬೇಡೆನಂಜದಿರಂಜದಿಯ್ಯಾ,
ಆಶಾಪಾಶ ಎನ್ನಲ್ಲುಳ್ಳಡೆ ಕೂಡಲಸಂಗಾ ನಿಮ್ಮಾಣೆ. || ೪೫೯ ||

೧೪೨೦

ಹುತ್ತವ ಕಂಡಲ್ಲಿ ಹಾವಾಗಿ, ನೀರ ಕಂಡಲ್ಲಿ ಹೊಳೆಯಾದವನ ಮೆಚ್ಚುವನೆ?
ಬಾರದ ಭವಂಗಳಲ್ಲಿ ಬರಿಸುವನಲ್ಲದೆ ಮೆಚ್ಚುವನೆ?
ಅಘೋರನರಕವನುಣಿಸುವನಲ್ಲದೆ, ಮೆಚ್ಚುವನೆ?
ಅಟಮಟದ ಭಕ್ತರ ಕಂಡಡೆ,
ಕೋಟಲೆಗೊಳಿಸುವ ಕೂಡಲಸಂಗಮದೇವ. || ೪೬೦ ||

೧೪೨೧

ಹೆಂಗೂಸಿನಂಗವ ನೋಡಿರೆ ಪುರಾತನರು,
ಬಾಲತನದಂಗವ ನೋಡಿರೆ ಪುರಾತನರು,
ಬ್ರಹ್ಮವನಾಚರಿಸಿ ತನ್ನ ಮರೆದಿಪ್ಪುವ ನೋಡಿರೆ ಲಿಂಗವಂತರು.
ತನ್ನಲ್ಲಿ ತಾನು ನಿಶ್ಚಯವಾಗಿ ಭಾಷೆ ಬೀಸರವೋಗದೆಯಿಪ್ಪ ಇರವು
ಕೂಡಲಸಂಗಮದೇವರಲ್ಲಿ ನಮ್ಮ ಮಹದೇವಿಯಕ್ಕಂಗಾಯಿತ್ತು. || ೪೬೧ ||

೧೪೨೨

[illegible] ಳಾದವನಲ್ಲ,
ಮಣ್ಣಿನ ಆಪ್ಯಾಯನಕ್ಕೆ ಬೋಳಾದವನಲ್ಲ,
ಹೆಣ್ಣಿನ ಆಪ್ಯಾಯನಕ್ಕೆ ಬೋಳಾದವನಲ್ಲ.
ಕೂಡಲಸಂಗಮದೇವರಲ್ಲಿ ಎನಗಾರು ಇಲ್ಲವೆಂದು
ಬೋಳಾದನೆನ್ನ ಪ್ರಭುದೇವರು. || ೪೬೨ ||

೧೪೨೩

ಹೊಯಿದವರೆನ್ನ ಹೊರೆದವರೆಂಬೆ, ಬಯಿದವರೆನ್ನ ಬಂಧುಗಳೆಂಬೆ,
ನಿಂದಿಸಿದವರೆನ್ನ ತಂದೆತಾಯಿಗಳೆಂಬೆ, ಆಳಿಗೊಂಡವರೆನ್ನ ಆಳ್ದವರೆಂಬೆ,
ಜರಿದವರೆನ್ನ ಜನ್ಮಬಂಧುಗಳೆಂಬೆ,
ಹೊಗಳಿದವರೆನ್ನ ಹೊನ್ನಶೂಲದಲಿಕ್ಕಿದರೆಂಬೆ
ಕೂಡಲಸಂಗಮದೇವಾ. || ೪೬೩ ||

## ಪರಿಶಿಷ್ಟ

೧೪೨೪

ಆಲಿ ನುಂಗಿದ ನೋಟದಂತೆ,
ಬಯಲು ನುಂಗಿದ ಬ್ರಹ್ಮಾಂಡದಂತೆ,
ಮುತ್ತು ನುಂಗಿದ ಉದಕದಂತೆ,
ಪುಷ್ಪ ನುಂಗಿದ ಪರಿಮಳದಂತೆ,
ಮಹಾನುಭಾವಿಗಳ ಸಂಗಕ್ಕೆನ್ನೊಡಲ ಗುರಿಮಾಡಿದೆನಾಗಿ
ಎನ್ನೊಡಲ ಪರಿಯಾಯ [ಕೆ]ಟ್ಟಿತಯ್ಯಾ,
ಕೂಡಲಸಂಗಮದೇವಾ,
ಪ್ರಭು ಮೊದಲಾದ ಶರಣರ ಸಂಭಾಷಣೆಯಿಂದ. || ೪೬೪ ||

೧೪೨೫

ಲೌಕಿಕದನುಸಂಧಾನ ಸಮನಿಸದೆ ಅನ್ಯವ ಸುಟ್ಟರು
ಎನ್ನ ಹೃದಯದ ಕಂಗಳು ಲಿಂಗದಲ್ಲಿ ನಟ್ಟು ಬಗೆಯಲಾರಳವು.
ಅಲ್ಲದೆ, ನಿಷ್ಠೆ ಬಲಿದು ಗಟ್ಟಿಗೊಂಡು ಲಿಂಗಶಂಕೆಯೆಂಬ ಭಂಗವಿನ್ನೆಲ್ಲಿಯದೋ?
ಹಾಲು ಬೆರಸಿದ ನೀರ ಹಂಸೆ[ಗಾ]ಗದಂತೆ
ಪಾಟಕನಾದನಯ್ಯಾ ಕೂಡಲಸಂಗಮದೇವಾ ನಿಮ್ಮ ಶರಣನು. || ೪೬೫ ||

೧೪೨೬

ಸುಖವಾದಡುಂಡು, ದುಃಖ ಬಂದಲ್ಲಿ ಬಳಲಿದಡಹುದೆ?
ತುಯ್ಯಲೆಂದಡುಂಡು, ಹುಯ್ಯಲೆಂದಡಹುದೆ?
ಕೇಳಯ್ಯಾ ಕೂಡಲಸಂಗಮದೇವಯ್ಯಾ
ನೀ ಮಾಡಿದ ಮಾಟಕ್ಕಾಡಿದಡಹುದೆ? || ೪೬೬ ||

■ ■

# ಕಠಿಣಪದಕೋಶ

ಅಂಕ–ಸೈನಿಕ, ಯೋಧ

ಅಂಕಕಾರ–ಹೆಸರಾಂತ ವೀರ

ಅಂಗಜಾಹವ–ಕಾಮಕೇಳಿ?

ಅಂಗತ–ಅಂಗಸ್ಥ, ಅಳವಟ್ಟ

ಅಂಗವಣೆ–ಧೈರ್ಯ

ಅಂಗವಿಸು–ಕೈಕೊಳ್ಳು

ಅಂಗಸೋಂಕು–ಶರೀರದ ಮೇಲೆ ಲಿಂಗ ಧರಿಸುವುದು

ಅಂಜನ–ದೋಷ, ಗುಪ್ತನಿಧಿಶೋಧಕ್ಕೆ ಬಳಸುವ ಕಾಡಿಗೆ

ಅಂಡಜ–ತತ್ತಿಯಿಂದ ಹುಟ್ಟುವ ಪ್ರಾಣಿ

ಅಂಡಲೆ–ಪೀಡಿಸು

ಅಂತಕ–ಯಮ

ಅಂತರಂಗಶುದ್ಧಿ–ವಿಚಾರಶುದ್ಧಿ

ಅಂತರಬೆಂತರ–ಅಂತರ ವ್ಯಂತರ, ಅಂತರ್ ಪಿಶಾಚಿ

ಅಂತು–ಅಂತ್ಯ, ಕೊನೆ

ಅಂತುಟು–ಅಷ್ಟು

ಅಂದಳ–ಆಂದೋಲಿಕಾ, ಪಲ್ಲಕ್ಕಿ

ಅಂಬರ–ಆಕಾಶ

ಅಕ್ಕವೆ–ಜೀರ್ಣ, ಪ್ರಯೋಜನ

ಅಕ್ಕಾಡು–ಅಲ್ಲಾಡು, ಕಂಪನಗೊಳ್ಳು

ಅಕ್ಕಿತ್ತೆ–ಕಂಪನಗೊಂಡಿತ್ತೆ

ಅಕ್ಕೆ–ದುಃಖ

ಅಗಮ್ಯ–ತಿಳಿಯಲುಬಾರದ

ಅಗ್ಘವಣಿ–ಪವಿತ್ರ ಜಲ

ಅಗೆ–ಸಸಿ

ಅಘ–ಪಾಪ

ಅಘಟಿತ ಘಟಿತ–ಉಂಟಾಗದುದನ್ನು ಉಂಟು ಮಾಡುವವ

ಅಚ್ಚಿಗ–ವ್ಯಥೆ, ಕಳವಳ

ಅಜಪೆ–ಉಸಿರಾಟದಲ್ಲಿಯೇ ಅಕ್ಷರರೂಪವಾಗಿ ಪರಿಣಮಿಸುವ 'ಹಂಸ' ಮಂತ್ರ

ಅಜಾಂಡ–ಲೋಕ

ಅಟಮಟ–ಮೋಸ

ಅಟ್ಟಟ್ಟಿಕೆ–ಜಂಬ

ಅಟ್ಟೆ–ಮುಂಡ

ಅಡಕು–ಸೇರಿಸು

ಅಡಕೆ–ಹಾಗಕ್ಕಿಂತ ಸಣ್ಣ ನಾಣ್ಯ

ಅಡ್ಡದೊಡ್ಡ–ಮಿತಿಮೀರಿ ಬೆಳೆದವನು

ಅಡ್ಡಾಯುಧ–ಒಂದು ಪ್ರಕಾರದ ಖಡ್ಗ

ಅಡ್ಡೆ–ಅಡಿಯ ಕಲ್ಲು

ಅಡೆ–ಆಶ್ರಯ, ಆಧಾರ

ಅಣಕ–ಸೋಗು, ಕುಚೋದ್ಯ

ಅಣಚಿ–ಮೈಮೇಲೆ ಬಿಡಿಸಿಕೊಳ್ಳುವ ಪಟ್ಟೆ?

ಅಣಲ–ದವಡೆ

ಅಣೆ–ಅಪ್ಪಳಿಸು, ಹೊಡೆ

ಅತ್ಯತಿಷ್ಠದ್ದಶಾಂಗುಲ–ಹತ್ತು ಬೆರಳಿನಷ್ಟು ಮಿಗಿಲು

ಅತಿಗಳೆ–ದೂರಮಾಡು, ನಿವಾರಿಸು

ಅದ್ವೈತ–ಶಿವ ಮತ್ತು ಜೀವ ಒಂದೇ ಎಂದು ಪ್ರತಿಪಾದಿಸುವ ತತ್ವ

ಅದ್ದಲಿಸು–ಬೆದರಿಸು

ಅಧರ–(ಕೆಳಗಿನ) ತುಟಿ

ಅಧಿಕ–ಶ್ರೇಷ್ಠ

ಅದ್ದು–ಮುಳುಗಿಸು

ಅನಂಗ–ಕಾಮ
ಅನವರತ–ನಿರಂತರ, ಯಾವಾಗಲೂ
ಅನಾಮಿಕ–ಶೂದ್ರ
ಅನಾಯತ–ಪ್ರಮಾದ, ತಪ್ಪು
ಅನಿಮಿಷ–ದೇವತೆ, ಒಬ್ಬ ಶರಣ
ಅನುಶ್ರುತ–ನಿರಂತರ, ಪ್ರಸಿದ್ಧ
ಅಪೇಯ–ಕುಡಿಯ (ತಿನ್ನ)ಬಾರದ
ಅಭವ–ಶಿವ
ಅಪ್ರಚ್ಛಾಯ–ನೋಡದ ನೆರಳು
ಅಭ್ಯಾಸ–ರೂಢಿ
ಅಮುಖೋಕ್ಯ–ಬಾಯಿಯಲ್ಲಿ ಲಿಂಗವನ್ನು ಧರಿಸುವುದು
ಅಮೃತಕರ–ಶೀತಲಕಿರಣ
ಅಮೃತಗಣ–ಜಗಣ ಹೊರತಾದ ನಾಲ್ಕು ಮಾತ್ರೆಯ ಗಣಗಳು
ಅಯ್ಯತನ–ಗುರುತ್ವ
ಅಯ್ದುದೆ–ಅದೆ, ಇವೆ
ಅರತ–ಅರ್ತಿ, ಮೋಹ
ಅರತಿ–ಅರ್ತಿ, ಪ್ರೀತಿ
ಅರಸಾಡು–ಅರಚು, ಕೂಗು
ಅರಳಂಬು–(ಕಾಮನ) ಹೂಬಾಣ
ಅರಳಿ–ಅರಳಿಯ ಮರ
ಅರ್ತಿ–ಆಸಕ್ತಿ, ಪ್ರೀತಿ
ಅರ್ಧಗಾಣಿ–ಕಾಣಿ ನಾಣ್ಯದ ಅರ್ಧಭಾಗ
ಅರೆಬಿರುದ–ಅಲ್ಪಕೀರ್ತಿ
ಅರೆಭಕ್ತ–ಭಕ್ತನಾಗಿಯೂ ಭವಿ ಆಚರಣೆ ಬಿಡದವ
ಅಲಗ–ಖಡ್ಗ
ಅಲಸು–ದಣಿ, ಆಲಸ್ಯಹೊಂದು
ಅಲುಬು–ಅಲುಗಾಡಿಸು
ಅವಧಾರು–ಚಿತ್ತಯಿಸು, ಲಕ್ಷ್ಯಕೊಡು
ಅವಲೋಹ–ಕೀಳುಲೋಹ
ಅವಸರ–ಪ್ರಸಂಗ, ತವಕ
ಅವಸ್ಥೆ–ಸಂಕಟ, ದುಃಖ
ಅವುಟು–ಮೂರುವರೆ
ಅವುಡು–ದವಡೆ
ಅಶನ–ಆಹಾರ
ಅಶ್ರುಜಲ–ಸುಖದ ಕಣ್ಣೀರು
ಅಷ್ಟತನು ಮೂರ್ತಿ–ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ ಈ ಎಂಟು ಅಂಶಗಳನ್ನು ಹೊಂದಿದ ಶಿವ
ಅಷ್ಟವಿಧಾರ್ಚನೆ–ಜಲ, ಗಂಧ, ಅಕ್ಷತೆ, ಪತ್ರ, ಪುಷ್ಪ, ಧೂಪ, ದೀಪ, ನೈವೇದ್ಯ. ಈ ಎಂಟು ವಿಧಗಳಿಂದಮಾಡುವ ಪೂಜೆ
ಅಷ್ಟೋತ್ತರಶತ–ಒಂದುನೂರಾ ಎಂಟು
ಅಸುಗತಿ–ದುರ್ಗತಿ
ಅಳಲು–ದುಃಖ, ಸಂಕಟ
ಅಳವು–ಸಾಮರ್ಥ್ಯ, ಶಕ್ತಿ
ಅಳಿಮನ–ಕ್ಷುದ್ರಮನಸ್ಸು
ಆಗಡಿ–ಅಗಡ, ಕೆಟ್ಟಕೆಲಸ
ಆಚಮನ–ಬಾಯಿ ತೊಳೆದುಕೊಳ್ಳುವುದು
ಆದ್ಯರು–ಪ್ರಾಚೀನ ಶರಣರು
ಆಧಿ–ಚಿಂತೆ
ಆಪ್ಯಾಯನ–ತೃಪ್ತಿ
ಆಪೋಶನ–(ಬೊಗಸೆಯಿಂದ)ಕುಡಿಯುವುದು
ಆಯ–ಉತ್ಪನ್ನ
ಆಯತ–ಯೋಗ್ಯ, ಇಷ್ಟಲಿಂಗದೀಕ್ಷೆ
ಆರತ–ಆಸೆ, ತೃಷ್ಣೆ
ಆರಂಬ–ಒಕ್ಕಲುತನ
ಆರಯ್–ಎಚ್ಚರದಿಂದಿರು
ಆರಾಧ್ಯ–ಪೂಜಾಯೋಗ್ಯ

ಆಲು–ಆರ್, ಕೂಗು
ಆವಗೆ–ಕುಂಬಾರನು ಮಡಿಕೆ ಸುಡುವ ಆವಗೆ
ಆಶ್ರಯದ–ಆಶ್ಲಿಷ್ಟ, ಕೂಡಿದ
ಆಸುರ–ತಾಮಸಭಾವ, ಸೊಕ್ಕು
ಆಹ್ವಾನ–ಬರಮಾಡಿಕೊಳ್ಳುವುದು
ಆಳವಾಡು–ಅವಹೇಳನ ಮಾಡು
ಆಳ್ದ–ಒಡೆಯ
ಆಳಿಕಾರ–ನಿಂದಕ
ಆಳಿಗೊಳ್ಳು–ಹೀಯಾಳು, ಧಿಕ್ಕರಿಸು
ಆಳು–ಮುಳುಗು
ಇಟ್ಟೆಯ ಹಣ್ಣು–ತಿಂದರೆ ತಲೆ ತಿರುಗುವಂತೆ ಮಾಡುವ ಒಂದು ಬಗೆಯ ಹಣ್ಣು
ಇದಿರ–ಪ್ರತಿ, ವಿರೋಧ
ಇಮ್ಮನ–ಎರಡು ಮನಸ್ಸು, ಎಂಟು ಸೊಲಿಗೆ
ಇಮ್ಮೈಗೊಳ್ಳು–ದೇಹದ ಎರಡೂ ಮೈಗಳಲ್ಲಿ ಪಾರಾಗು
ಇಲ್ಲವೆ–ಇಲ್ಲದಿರುವಿಕೆ, ಅಭಾವ
ಈಡಾಡು–ಒಗೆ, ಬೀಸಾಡು
ಉಂಡಲಿಗೆ–ಉಂಡಿ
ಉಂಡಿಗೆ–ಮುದ್ರೆ
ಉಚ್ಛಿಷ್ಟ–ಎಂಜಲು
ಉಡು–ಹಾವಿನ ವೈರಿಯಾದ ಒಂದು ಪ್ರಾಣಿ
ಉಡುಗು ಹುಡುಗು, ಗುಂಪುಗೊಳಿಸು
ಉಡುಹ–ಉಟ್ಟುತೊಟ್ಟುಕೊಳ್ಳುವಲ್ಲಿ ಆಸಕ್ತಿಯುಳ್ಳವ, ವೇಷಧಾರಿ
ಉತ್ತಮಾಂಗ–ತಲೆ
ಉತುಪತಿ–ಉತ್ಪತ್ತಿ, ಜನನ
ಉತ್ತು–ಊಳುವ ಕೆಲಸ ಮಾಡಿ
ಉದಮದ–ಉನ್ಮದ, ಅತಿಯಾದ ಸೊಕ್ಕು
ಉದ್ದರೆ–ಉದ್ದರಿ ವ್ಯಾಪಾರ
ಉದ್ಭಿಜ–ಭೂಮಿಯ ತಂಪಿನಲ್ಲಿ ಹುಟ್ಟಿದ ಜೀವಿ
ಉಪದೇಶಪರೀಕ್ಷೆ–ಮಂತ್ರೋಪದೇಶ ಪರೀಕ್ಷೆ?
ಉಪ್ಪರಗುಡಿ–ಎತ್ತಿ ಕಟ್ಟಿದ ಧ್ವಜ
ಉಪೇಂದ್ರ–ವಿಷ್ಣು
ಉಮ್ಮಹ–ಉನ್ಮಾದ>ಉಮ್ಮಾಹ>ಉಮ್ಮಹ, ಅತಿಹರ್ಷ
ಉಭಯಕುಳ–ಲಿಂಗಪೂಜೆ, ಜಂಗಮ ದಾಸೋಹ
ಉಭಯಭ್ರಷ್ಟ–ಇಹಪರಗಳಿಗೆ ಹೊರತಾದವ
ಉಭಯಲಿಂಗ–ಲಿಂಗ ಮತ್ತು ಜಂಗಮ
ಉರಸಜ್ಜೆ–ಎದೆಯ ಮೇಲಿನ ಲಿಂಗಕರಡಗೆ
ಉರುಗು–ಬಾಗು, ಓರೆಯಾಗು
ಉರೆ–ಚನ್ನಾಗಿ
ಉಲಿ–ಸದ್ದುಮಾಡು
ಉಳಿದ ಸೂಳೆ–ಬಿಟ್ಟ ಸೂಳೆ, ದೂರವುಳಿದ ಸೂಳೆ
ಊಡದ–(ಹಾಲು) ಉಣಿಸದ
ಎಚ್ಚಿಕೊಂಬುದು–ಹಚ್ಚಿಕೊಳ್ಳುವುದು
ಎಚ್ಚು–ಬಾಣವನ್ನು ಎಸೆದು
ಎಡಹುಗುಳಿ–ಎಡಹುವ ಸ್ಥಳ
ಎಡೆಯಾಟ–ಅತ್ತಿತ್ತ ಅಡ್ಡಾಡುವುದು
ಎರದೆಲೆ–ಬೋರೆ ಎಲೆ
ಎರೆ–ಸುರಿ, ನೀಡು
ಎಲವದ ಮರ–ಬೂರಲ ಮರ
ಎಸಕ–ಮಾಡುವಿಕೆ, ಕೆಲಸ
ಎಸಪೋದ–ಶಕ್ತಿಗುಂದಿದ
ಎಹಗೆ–ಹೇಗೆ ಬೇಕಾದ ಹಾಗೆ
ಎಳೆವಾವು–ಮಿಡಿನಾಗರ
ಏಗುವುದು?–ಏನು ಮಾಡುವುದು?

ಏಡಿಸು–ಅಣಕಿಸು, ನಿಂದಿಸು, ಹಂಗಿಸು
ಏರಂಡ–ಔಡಲ
ಏರಿ–(ಕೆರೆಯ) ಒಡ್ಡು
ಏರಿಸಿ ನುಡಿ–ಹೊಗಳು
ಏವನಾದಡೇನು–ಏನುಮಾಡಬೇಕಾದರೂ
ಏವುದಯ್ಯಾ–ಏನು ಮಾಡುವದಯ್ಯಾ
ಐದೆ–ಸುಮಂಗಲೆ, ತಾಳಿ?
ಒಕ್ಕತನ–ಒಂದುತನ, ನಂಟುತನ
ಒಕ್ಕುದು–(ಉಂಡು) ಒಗೆದುದು
ಒಟ್ಟಿಲ–ಗುಂಪು, ರಾಶಿ
ಒಡಲವಸರ–ಜೀವನದ ಅಗತ್ಯ
ಒಡ್ಡ–ಜೂಜಿನಲ್ಲಿ ಹಚ್ಚುವ ಹಣ
ಒತ್ತೆ–ಸೂಳೆ ವಿಟರಿಂದ ಸ್ವೀಕರಿಸುವ ಹಣ
ಒಪ್ಪಚ್ಚಿ–ಒಮ್ಮೆಯಾದರೂ
ಒಮ್ಮನ–ಒಂದು ಮನಸ್ಸು, ನಾಲ್ಕು ಸೊಲಿಗೆ
ಒರಳ–ಒರಳಕಲ್ಲು, ಹಗ್ಗದ ಉರಲು?
ಒರೆ–ಒರೆಗಲ್ಲಿಗೆ ಒಮ್ಮೆ ತಿಕ್ಕಿದರೆ ಬರುವಷ್ಟು ಚಿನ್ನ
ಒರೆ–ಖಡ್ಗದ ಹೊದಿಕೆ
ಒರೆಗಟ್ಟು–(ಒರೆಸಹಿತ) ಖಡ್ಗವನ್ನು ಕಟ್ಟು
ಒರೆಯಾವು–ದುಷ್ಟ ಆಕಳು? ಕರುವಿದ್ದ ಆಕಳು?
ಒಳ್ಳಿಹ–ಸುಂದರವಾಗಿ ಕಾಣುವ
ಒಳಬೊಳ್ಳೆ–ಒಳಗೆ ಪೊಳ್ಳಾಗಿರುವುದು
ಒಳಲೊಟ–ಮೋಸಗಾರಿಕೆ. ಪೊಳ್ಳುತನ
ಒಳ್ಳೆ–ನೀರಹಾವು
ಓಗರ–ಅನ್ನ, ಬೋನ
ಓಜುಗಟ್ಟಿಗೆ–ವಿದ್ಯಾರ್ಥಿಗಳನ್ನು ದಂಡಿಸಲು ಶಿಕ್ಷಕರು ಬಳಸುವ ಕೋಲು
ಓಡು–(ಹುರಿಯುವ) ಹಂಚು
ಓತ–ಪ್ರೀತಿಸಿದ, ಒಲಿದ
ಓತಿ–ಓತಿಕಾಟ
ಓಜ–(ತಾಳದ) ಕ್ರಮ
ಓಲೆಕಾರ–ಸಶಸ್ತ್ರ ಸೈನಿಕ
ಓವರಿ–ಕೋಣೆ
ಓಸರಿಸು–ದೂರಸರಿ
ಕಂಚು–ಕಂಚಿನಿಂದ ಮಾಡಿದ ಊಟದ ತಟ್ಟೆ
ಕಂಡೆ–ಖಂಡೆಯ, ಖಡ್ಗ
ಕಂತೆ–ಜೋಳಿಗೆ
ಕಂದಲು–ಹೈನಕ್ಕಾಗಿ ಬಳಸುವ ಪಾತ್ರೆ
ಕಂಪಣ–(ಹುಲ್ಲು) ಹೊರೆ
ಕಂಪಣಿಗ–ಹುಲ್ಲು ಹಾಕುವವ
ಕಂಬಿ–ಕಬ್ಬಿಣದ ಕಡ್ಡಿ
ಕಕ್ಷೆ–ಬಗಲು, ಕಕ್ಕೆ
ಕಗ್ಗಾಯಿ–ಅಪಕ್ವಹಣ್ಣು
ಕಜ್ಜಾಯ–ಅಡುಗೆ ವಿಶೇಷ
ಕಟ್ಟಣೆ–ಕಟ್ಟಳೆ, ನಿಯಮ
ಕಟ್ಟಾಳು–ನಿಷ್ಠೆಯ ಸೇವಕ
ಕಟ್ಟಿದಿರು–ಸಮ್ಮುಖ, ನೇರ ಎದುರು
ಕಟ್ಟುಗ್ರ–ಅಧಿಕ ಉಗ್ರ
ಕಡವರ–ಬಂಗಾರ
ಕಡಿಪಕ್ಕೆ–ಕಡಿತಕ್ಕೆ, ತುಂಡುಮಾಡುವಿಕೆಗೆ
ಕಡೆಗಳ–ಕಡೆಗಣ, ರಣಭೂಮಿಯ ಮೇರೆ
ಕಡೆಗೋಡಿವರಿ–ಹೊರ ಪ್ರವಹಿಸು
ಕಡೆಮುಟ್ಟ–ಕೊನೆಯ ವರೆಗೆ
ಕಡೆಯಾಣಿ–ಶುದ್ಧ ಬಂಗಾರ
ಕಣಕಾಲು–ಮೊಳಕಾಲಿನ ಕೆಳಭಾಗ
ಕಣ್ಬೇಟ–ಕಣ್ಣಿನ ಜೇಡುಪಿಕೆ, ನೋಟಸುಖ
ಕರ್ದಮ–ಕೆಸರು
ಕನ್ನಡ–ಕನ್ನಡಿಯ ಗೋಡೆ
ಕನ್ನಗಳಿ–ಗೋಡೆ ಕೊರೆಯಲು ಕಳ್ಳರು ಬಳಸುವ ಉಪಕರಣ

ಕನ್ನೆಯ ಸ್ನೇಹ–ಕನ್ನೆಯೊಳಗಿನ ಕಾಮ
ಕಪ್ಪಡಿ–ಶೈವಸನ್ಯಾಸಿ
ಕಪಾಲ–(ಬ್ರಹ್ಮನ) ತಲೆಬುರುಡೆ
ಕಮ್ಮಟ–ಕರ್ಮಸ್ಥಾನ, ಟಂಕಸಾಲೆ
ಕಮ್ಮನೆ–ಸುವಾಸನೆ
ಕರಕಃ -ಅತಿಕೀಳು
ಕರಣವೃತ್ತಿ–ಪಂಚೇಂದ್ರಿಯಗಳ ವೃತ್ತಿ
ಕರತಳಾಮಳಕ–ಅಂಗೈಯಲ್ಲಿಯ ನೆಲ್ಲಿ ಕಾಯಿಯಷ್ಟು ಸ್ವಾಧೀನ
ಕರಲಭೂಮಿ–ಸವುಳು ನೆಲ
ಕರಿ–ಇದ್ದಿಲು
ಕರಿಗಟ್ಟು–ಕಪ್ಪಾಗು, ಗಟ್ಟಿಯಾಗು?
ಕರುಳಕಲೆ–ಕರುಳಿಗೆ ಆದ ಗುರುತು
ಕರೋಟಿ–ತಲೆಬುರುಡೆ
ಕಲಕೇತ–ಕಲ್ಲಿನಿಂದ ಎದೆಗೆ ಬಡಿದುಕೊಂಡು ಭಿಕ್ಷೆ ಕೇಳುವವ?
ಕಲ್ಮಷ–ದೋಷ, ಹೊಲಸು
ಕಲ್ಪಿತ–ಬ್ರಹ್ಮಲಿಖಿತ
ಕವಚ–(ಕರ್ಣನ) ಮೈಗೆ ಅಂಟಿಕೊಂಡಿದ್ದ ವಜ್ರದ ಅಂಗಿ
ಕವಳಿಗೆ–(ಕಪಾಲಿಕಾ) ಶಿವನ ಕೈಯಲ್ಲಿರುವ ತಲೆ ಬುರುಡೆ
ಕವಿಲೆ–ಕಪಿಲೆ, ಆಕಳು
ಕವುಳಗೋಲು–ಗರಡಿಯ ಮನೆಯಲ್ಲಿ ಆಯುಧದಂತೆ ಬಳಸುವ ಪರ್ಯಾಯ ಕೋಲು
ಕಳ–ಕಣ, ರಣರಂಗ
ಕಳ್ಳದಮ್ಮ–ಖೋಟಾನಾಣ್ಯ
ಕಳಿದ–ಬಾಡಿದ
ಕಳೆದುಕೊಳ್ಳು–(ಒರೆಯಿಂದ) ಸೆಳೆದುಕೊಳ್ಳು
ಕಾಟುಗ–ಕಾಟಕೊಡುವವ, ಪೀಡಿಸುವವ

ಕಾಣಿ–ಒಂದು ಸಣ್ಣನಾಣ್ಯ
ಕಾಲ–ಯಮ
ಕಾಲವಳ್ಳ–ಸಣ್ಣಹಳ್ಳ
ಕಾಹ–ರಕ್ಷಣೆ
ಕಾಳ–ಕತ್ತಲೆ
ಕಾಳಿಕೆ–ಕಪ್ಪು, ದೋಷ
ಕಾಳಿಯಕಂಕಾಳ–ಕಾಳಿಕಾ ಖಂಡದಲ್ಲಿಯ ಕಂಕಾಳ(=ಬೆನ್ನೆಲುಬು)ದ ಘಟನೆ
ಕಾಳೆಗಮುಖ–ಯುದ್ಧದ ಪ್ರಾಥಮಿಕ ತಿಳಿವಳಿಕೆ
ಕಿಂಕರ–ಸೇವಕ
ಕಿಂಕಲ–ದಾಸ, ಸೇವಕ
ಕಿಂಚಿತು–ಕಿಂಚಿತ್, ಸ್ವಲ್ಪ
ಕಿಂಪುರುಷ–ದೇವಲೋಕದಲ್ಲಿರುವ ಮೃಗ ಮುಖದ ವ್ಯಕ್ತಿ
ಕಿಗ್ಗಡಲ(ಕೆಗ್ಗಡಲ? = ಕೆಂಪು ಸಮುದ್ರ) ಕಿರಿದು+ಕಡಲ, ಸಣ್ಣಸಮುದ್ರ
ಕಿಚ್ಚಡಿ–ಜೋಳದ ಹುಗ್ಗಿ
ಕಿನ್ನರ–ದೇವತೆಗಳಲ್ಲಿಯ ಒಂದು ಭೇದ
ಕಿಲ್ಬಿಷ–ಕಿಲುಬು, ದೋಷ
ಕಿರುಕುಣಿಕೆ–ಕಿರುಬೆರಳು
ಕಿರುಕುಳ–ಸಣ್ಣ, ಕ್ಷುದ್ರ
ಕೀಟಕ–ಜೇಡಹುಳು?
ಕೀಡೆ–ಕೀಟ, ಹುಳು
ಕೀರ್ತಿವಾರ್ತೆ–ಕೀರ್ತಿಪ್ರಚಾರ
ಕೀಸು–ಗೀಚು, ಕೆತ್ತು
ಕೀಳ್–ಹೀನ, ಕರು, ಕೀಲು
ಕೀಳಾಳು–ಸಣ್ಣ ಆಳು
ಕುಂಡಲಿಗ–ಮುಟ್ಟಿದಾಕ್ಷಣ ವರ್ತುಲವಾಗುವ ಹುಳು?
ಕುಂಭಿಪಾತಕ–ಕುಂಭೀ ಹೆಸರಿನ ನರಕ

ಕುಕ್ಷಿ–ಹೊಟ್ಟೆ
ಕುಕ್ಕುಟಜ್ಞಾನ–ಕೋಳಿಯ ಜ್ಞಾನದಂಥ ಜ್ಞಾನ?
ಕುಚಿತ–ಕುತ್ಸಿತ, ಕ್ಷುದ್ರ
ಕುಚಿತ್ತಾಚಾರ–ಕ್ಷುದ್ರ ನಡತೆ
ಕುಟುಕ–ಗುಟುಕು, ತುತ್ತು
ಕುತ್ತರಿ–ಮೇಟಿಯ ಸುತ್ತ ಒಟ್ಟಿದ ಬೆಳಸು
ಕುತ್ತು–ಬಗ್ಗಿಸು
ಕುನ್ನಿ–ಗಂಡು ಮಗು?
ಕುಪ್ಪಳಿಸು–ಹೊರಚೆಲ್ಲು
ಕುಲಿಶ–ಸಿಡಿಲು
ಕುರುಕು–ಕುರುಕುರು ಸದ್ದಿನೊಂದಿಗೆ ತಿನ್ನು
ಕುದುರ–ಗೋಡೆ
ಕುಳಿ–ಕುಣಿ, ತಗ್ಗು
ಕೂಪ–ಬಾವಿ, ಪ್ರಿಯ
ಕೂಪರು–ಕೂರ್ಪವರು, ಪ್ರೀತಿಯವರು
ಕೂರಂಬು–ಹರಿತವಾದ ಬಾಣ
ಕೂರಲಗ–ಹರಿತವಾದ ಖಡ್ಗ
ಕೂರ್ತು–ಪ್ರೀತಿಸಿ
ಕೂರ್ಮ–ಆಮೆ
ಕೃತಕ–ಮೋಸ
ಕೆಚ್ಚನೆ–ಕೆಂಪಗೆ
ಕೆಟ್ಟನಂಗೆ–ಹಾಳಾದವನಿಗೆ
ಕೆಡೆ–ಬೀಳು
ಕೆಡೆಮೆಟ್ಟು–ಕೆಡವಿ ತುಳಿ
ಕೆನ್ನೆ–ಗಲ್ಲದ ಮೇಲ್ಭಾಗ
ಕೆನ್ನೆವಾರ–ಕೆನ್ನೆಯ ವರೆಗೆ
ಕೆಮ್ಮನೆ–ವ್ಯರ್ಥ
ಕೆಯ್–ಹೊಲ
ಕೆರಹ–ಚಪ್ಪಲಿ
[illegible]ಷ್ಣ, ಸರಿಹೊರೆ

ಕೆಲೆ–ಹೂಂಕರಿಸು, ಮನಬಂದಂತೆ ಮಾತನಾಡು
ಕೆಳಯಿಂಕೆ–ಕೆಳಗೆ
ಕೇಚರಗಾವಿಲ–ಗ್ರಾಮೀಣ ದೇವತೆ
ಕೇತುಗ (ಧೂಮ)ಕೇತುವಿನಂತೆ ಅನಿಷ್ಟ ಕಾರಕ
ಕೈದು-ಆಯುಧ
ಕೈದುಡುಕು-ಕೈಹಾಕು
ಕೈಮರೆ-ಕೈಯೊಳಗಿನ ಆಯುಧದ ಉಪಯೋಗವನ್ನು ಮರೆಯುವುದು
ಕೈವಾರ–ಸ್ತುತಿ, ಸೇವೆ
ಕೊಂಡಮಾರು-ಕೊಂಡಬೆಲೆಗೆ ಮಾರುವುದು
ಕೊಂಡಲಿಗ–ಮುಟ್ಟಿದರೆ ವರ್ತುಲವಾಗುವ ಹುಳು
ಕೊಂತ–ಭರ್ಚಿ
ಕೊಂಬಮೆಟ್ಟಿಕೂಗು–ಅಹಂಕಾರದ ಕೋಡನ್ನು ತುಳಿದು ಕೂಗು?
ಕೊಡಗೂಸು–ಮದುವೆ ವಯಸ್ಸಿನ ಹೆಣ್ಣು
ಕೊಯಿಲು–ಕೊಯ್ದ ಬೆಳೆಯ ಕೆಳಭಾಗ
ಕೊಲ್ಲೆ-ರೆಂಬೆ
ಕೊಳಗ (ಧಾನ್ಯ)ಅಳೆಯುವ ಸಾಧನ
ಕೊಳುಗಳ-ರಣಭೂಮಿ
ಕೋಟಲೆ–ತೊಂದರೆ
ಕೋಡಂಗಿಯಾಟ–ಎಡಗೈಯಿಂದ ಬಲಗಿವಿ ಬಲಗೈಯಿಂದ ಎಡಗಿವಿ ಹಿಡಿದುಕೊಂಡು ಕುಣಿಯುವುದು
ಕೋಡೇರಿ–ಕೊಡುಗೆಯೊಂದಿಗೆ
ಕೋಶಪಾನ–ನ್ಯಾಯ ಸಂದರ್ಭದಲ್ಲಿ ವಾದಿ ಇಲ್ಲವೆ ಪ್ರತಿವಾದಿ ತನ್ನ ಪ್ರಾಮಾಣಿಕತೆಯ ಪ್ರಕಟನೆಗಾಗಿ ದೇವರ ವಿಗ್ರಹ ತೊಳೆದ ನೀರನ್ನು ಕುಡಿಯುವುದು

ಕೋಳ–ಬೇಡಿ
ಕೋಳಾಟ–ಬಲಾತ್ಕಾರ
ಕೋಳುಹೋದ–ಸೆರೆಹೋದ
ಕೌಪೀನ–ಲಂಗೋಟ
ಖಂಡ–ಮಾಂಸ
ಖಂಡೆ–ಖಡ್ಗ
ಖಚರನ ಅಸ್ಥಿ–ಖಚರನೆಂಬ ಸಿದ್ಧ(?)ನ ಎಲುಬು
ಖಟ್ವಾಂಗ–ಶಿವನ ಕೈಯೊಳಗಿರುವ ಎಲುಬಿನ ಆಯುಧ
ಕ್ಷಪಣ–ಸನ್ಯಾಸಿ
ಗಂಗೆವಾಳುಕ–ಗಂಗಾನದಿಯ ಉಸುಬು
ಗಂಜಳ–ಹೊಲಸು ನಾತ
ಗಂಡುಗೆದರಿ–ಆರ್ಭಟಿಸಿ
ಗಜಜ್ಞಾನ–ಆನೆಯ ಜ್ಞಾನದಂಥ ಜ್ಞಾನ?
ಗಜವೈದ್ಯ–ಗಹನವಾದ ವೈದ್ಯ?
ಗಡಹ–ಬಲೆ, ಹೊಸತಿಲು (ಗಡಪ)
ಗಣಮೇಳಾಪ–ಗಣಂಗಳನ್ನು ಕೂಡಿಕೊಂಡಿರುವುದು
ಗಣಾಂಡಂಬರ–ಗಣಗಳ ಸಮೂಹ
ಗದ್ಗದ–ಕಂಪನ, ನಡುಕ
ಗಮ್ಯ–ಪ್ರಕಟವಾದ
ಗರ–ಗ್ರಹ, ಪಿಶಾಚಿ
ಗರಳ–ವಿಷ
ಗರ್ಭಾವಾಸ–ಗರ್ಭಗುಡಿ
ಗರಿ–ಬಾಣದ ಕೊನೆಯ ಗರಿ
ಗರುವ–ಮಾನ್ಯ, ದೊಡ್ಡ
ಗಳಗರ್ಜನೆ–ಕಂಠದಿಂದ ಬರುವ ದೊಡ್ಡ ಧ್ವನಿ
ಗಳುಹು–ಮನಬಂದಂತೆ ಮಾತನಾಡು
ಗಳೆ–ಗಳ, ಬಾಣ
ಗಾಡಿಗ–ಮನೆಯ ಜಗುಲಿಯ ಮೇಲೆ ಪೂಜಿಸಲ್ಪಡುವ ಬೂತ
ಗಾಯತ್ರಿ–ವೇದಮಂತ್ರ
ಗ್ರಾಸ–ತುತ್ತು
ಗಿಡುವು–ಗದ್ದೆ?
ಗಿಣ್ಣಿಲು–ಗಿಂಡಿ
ಗಿಳಿಯೋದು–ಗಿಳಿಯು ಭವಿಷ್ಯ ಹೇಳುವುದು
ಗುಡಿಗಟ್ಟು–ಸಂತೋಷ ಸೂಚಿಸು
ಗುಡಿಲ–ಗುಡಿಸಲು
ಗುಮ್ಮಡಿ–ಮೊಲೆ ಮೂಗು ಕೊಯ್ಸಿಕೊಂಡ ಜೋಗಿವೆಣ್ಣು
ಗುರುಗುಂಜಿ–ಗುಲಗಂಜಿ
ಗುರುಲಘು–ಶ್ರೇಷ್ಠ ಕನಿಷ್ಠ
ಗುಹ್ಯ–ಜನನೇಂದ್ರಿಯ
ಗುಳ್ಳೆ–ಗುಡ್ಡೆ, ರಾಶಿ
ಗೂಡು–ಕೊಯ್ದ ಪೈರಿನ ಬಣವೆ
ಗೂಡುವೋಗು–ಅಸ್ಥಿಪಂಜರ ಕಾಣುವಂತಾಗು
ಗೆರೆಯಿಲ್ಲದ ಕೋಲು–ಅಳತೆ ಸೂಚಿಸುವ ಗೆರೆಗಳಿಲ್ಲದ ಕೋಲು
ಗೂಡಾರ–ಗೂಢಾಗಾರ, ಡೇರೆ
ಗೊತ್ತು–ಗುರಿ
ಗೊರಜೆ–ಗಿಡುಗಂಟೆ
ಗೊರವ–ಗುರವ, ಯತಿ, ಅರ್ಚಕ?
ಗೋಟು–ಮೂಲೆ
ಗೋಣ–ಕುತ್ತಿಗೆ
ಗೋತ್ರ–ವಂಶ
ಗೋರಿಗೊಳಗಾಗು–ಬಲೆಯಲ್ಲಿ ಬೀಳು
ಗೋವ–ದನಗಾಹಿ

ಗೋಸುಂಬೆ–ಊಸರವಳ್ಳಿ
ಘಟಸರ್ಪ–ಕೊಡದಲ್ಲಿ ದಿವ್ಯಕ್ಕೋಸುಗ ಮಡಗಿದ ಹಾವು
ಘ್ರಾಣ–ಮೂಗು
ಚತುರ್ವೇದಿ–ನಾಲ್ಕು ವೇದಗಳನ್ನು ಬಲ್ಲವ
ಚಮ್ಮಾವುಗೆ–ಚರ್ಮದ ಪಾದರಕ್ಷೆ
ಚಲ್ಲಣ–ಚಣ್ಣ
ಚೆಲ್ಲವಾಡು–ಸರಸವಾಡು
ಚಾಗುಬೊಲ್ಲ–(ಹಣೆಚುಕ್ಕೆ ಹೂಬಾಲದ) ಕುದುರೆ
ಚಾಗೆ–ಚೇಗೆ, ವ್ಯರ್ಥ, ಹಾಳು
ಚಿಕ್ಕು–ಹಲಚಿಗಡಬು
ಚಿತ್ತರಟ್ಟೆಯ ಕಾಯಿ–ಒಳಗೆ ಪೊಳ್ಳಾಗಿರುವ ಕಾಯಿ
ಚಿನಿಖಂಡ–ಸಣ್ಣ ತುಂಡು
ಚಿನ್ನಗೆಯ್ಕು–ಚಿನ್ನದ ಆಭರಣ ಮಾಡುವವ
ಚಿಪ್ಪಿನ ಹಲ್ಲು–ಚಿಪ್ಪುಗಳಿಂದ ಮಾಡಿದ ಹಲ್ಲು
ಚಿಪ್ಪು–ಸಿಂಪೆ
ಚುಳುಕು–ಚುಲಕ, ಅರ್ಧಬೊಗಸೆ
ಚೇಗು–ಹಾನಿ
ಚೋಹ–ವೇಷ
ಚೌಡೇಶ್ವರಿ–ಕ್ರೂರ ಹೆಣ್ಣು ದೇವತೆ
ಚೌರಾಸಿ–ಎಂಬತ್ತುನಾಲ್ಕು
ಚೌಷಷ್ಟಿವಿದ್ಯೆ–ಅರವತ್ತುನಾಲ್ಕು ವಿದ್ಯೆ
ಛಲಬಾಳಿ–ಛಲಗಾರ
ಜಂಗಮ–ಚಲನಶೀಲ ವ್ಯವಸ್ಥೆ
ಜಂಗುಳಿ–ಹಿಂಡು, ಗುಂಪು
ಜಂಘೆ–ಎರಡು ಮಾರು ಪ್ರಮಾಣ, ಮೊಳಕಾಲ ಕೆಳಭಾಗ
ಜಂಬೂದ್ವೀಪ–ಭಾರತವನ್ನೊಳಗೊಂಡ ವಿಶಾಲ ಖಂಡ
ಜಜ್ಜನೆ–ಬೇಗ, ತೀವ್ರ
ಜನ್ನ–ಯಜ್ಞ
ಜನ್ನಿಗೆಯರು–ಯಜ್ಞದವರು, ಬ್ರಾಹ್ಮಣರು
ಜವೆ–(ಬಾಲದ) ಕೂದಲು?
ಜೀಯಾ–ಒಡೆಯಾ
ಜುಗ–ನಾಲ್ಕು ಯುಗಗಳು ೧೪ ಸಲ ಮರಳಿ ಬರುವ ಕಾಲಪ್ರಮಾಣ
ಜೂಬು–ಯೂಪ, (ಯಜ್ಞ) ವಧಸ್ತಂಭ
ಜೋಗೈಸುವ–ಮೆಟ್ಟುವ
ಜೋಡೆ–ವ್ಯಭಿಚಾರಸ್ತ್ರೀ
ಜೋಳವಾಳಿ–ಯೋಧ, ಸೈನಿಕ
ಝುಂಕೆ–ಬೆದರಿಕೆ
ಝುಲ್ಲರಿ–ತೋರಣರೂಪದ ಜಾಲರಿ
ಟೆಂಬನನಾಡಿಸು–ದೀರ್ಘ ಶ್ವಾಸ-ಉಚ್ಛ್ವಾಸಕ್ಕೆ ಗುರಿಮಾಡು?
ಟೀವಕ ಟೆಂಬನನಾಡಿಸು–ತಂತಿ ವಾದ್ಯಕ್ಕೆ ತಕ್ಕಂತೆ ಕುಣಿಸು
ಟೊಣೆ–ಹೊಡೆ, ಹಾರಿ ಹೊಡೆ
ಡಂಬ–ಡಂಬಾಚಾರಿ
ಡಂಬು–ಬಹಿರಂಗದ ಬೂಟಕತ್ವ
ಡಳುಹು–ಅಂತರಂಗದ ಕಾಪಟ್ಯ
ಡಿಂಗರಿಗ–ಸೇವಕ, ಆಳು
ಡಿಂಬುಗ–ದನದ ಹಕ್ಕೆಯಲ್ಲಿ ಪೂಜೆಗೊಳ್ಳುವ ಬೂತ
ಡುಂಡುಟೆ–ಡುಂಡುಭ(ದುಂಡೀ)ಗಣಪತಿ?
ಡೊವಿಗೆ–ತಲೆಬುರುಡೆ
ತಂಬುಲ–ತಾಂಬೂಲ
ತಕ್ಕೈಸು–ಅಪ್ಪಿಕೊಳ್ಳು
ತಗರ–ತರಗ, ಎಣ್ಣೆಯಲ್ಲಿ ಮಾಡಿದ ಒಂದು ಬಗೆಯ ಖಾದ್ಯ
ತಡಗೆಡಹು–ತಡೆದು ಕೆಡಹು

ತತ್ವಮಸಿ–ತತ್+ತ್ವಂ+ಅಸಿ
ತದ್ಗತ–ಕೂಡಿಕೊಂಡ, ತಲ್ಲೀನ
ತದ್ದಿನ–ಶ್ರಾದ್ಧ
ತನುಸಾರಾಯ–ತನುವಿನಲ್ಲಿ ಗುರುಸಂಬಂಧ ಮಾಡಿಕೊಳ್ಳುವುದು
ತರಕಟ–ಒಂದೇ ಸವನೆ
ತರಿ–ಕತ್ತರಿಸು
ತರಹರ–ವಿಶ್ರಾಂತಿ
ತರಳ–ಹುಡುಗ, ಬಾಲಕ
ತರಿಯ–ಕದಿರುಮರ
ತರುವಲಿ–ತಬ್ಬಲಿ, ಪರದೇಶಿ
ತಲಹಿಲ್ಲದ ಕೋಲು–ಗರಿಯಿಲ್ಲದ ಬಾಣ
ತವನಿಧಿ–ಸವೆಯಲಾರದ ಸಂಪತ್ತು
ತವರಾಜ–ಒಂದು ಬಗೆಯ ಸಕ್ಕರಿ
ತಳಿಗೆ–ಊಟದ ತಟ್ಟೆ
ತಾರಕೆ–ನಕ್ಷತ್ರ
ತಾಳಮಾನ–ತಾಳದ ಪ್ರಮಾಣ
ತಾಳಸಂಪುಟ–ಮಾತನ್ನು ಉತ್ಪಾದಿಸುವ ತಾಳುಗೆಯ ಪೆಟ್ಟಿಗೆ
ತಿಂದುದು–ತಿಂಡಿಕೊಟ್ಟುದು, ತುರಿಕೆವುಂಟಾದುದು
ತಿಂಬ–ತೀನ್ಟ್, ತಿಂಡಿಕೊಡುವ
ತಿಗುರು–ಮೈಗೆ ಲೇಪಿಸಿಕೊಳ್ಳುವ ಹಳದಿ ಪುಡಿ
ತಿಟ್ಟನೆ–ತಿರ್ರನೆ
ತಿಂದವರ–ಕಚ್ಚಿದವರ
ತಿಮಿರ–ಕತ್ತಲೆ
ತುಯ್ಯಲ–ಬಿಳಿಯ ವರ್ಣದ ಅಡುಗೆ
ತುಷ–ಮುಸುಕು, ಹೊದಿಕೆ
ತುಂಬು–(ಕೆರೆಯ) ತೂಬು
ತೆತ್ತಿಗ–ಒಡೆಯ
ತೆತ್ತೀಸ–ಮೂವತ್ತುಮೂರು
ತೆರಹಾರ–ತೆರವಿಲ್ಲದೆ
ತೆರಹು–ಅವಕಾಶ, ಬಿಡುವು
ತೊಂಡಿಲ–ದಂಡೆ
ತೊಡಹ–ಆಭರಣ
ತೊಡರು–ಬಿರುದು ಬಾವಲಿ
ತೊನೆ–ತೂಗು
ತೋಯ–ನೀರು
ತ್ರಿಪುಂಡ್ರ–ವಿಭೂತಿಯ ಮೂರು ಬೆರಳಿನ ಅಡ್ಡರೇಖೆಗಳು
ತ್ರಾಸು–ಬಂಗಾರ ತೂಗುವ ತಕ್ಕಡಿ
ತ್ರಾಹಿ–ರಕ್ಷಿಸು
ದಂಡಿಗೆ–ವೀಣೆಯ ಕೋಲು
ದಂಡೆ–ಮೊಳಕಾಲೂರಿ ಬಿಲ್ಲು ಬಿಡುವ ಭಂಗಿ
ದಂಡಣದತ್ತಣ–ದಂದಣ ದತ್ತಣಯೆಂಬ ಮುಗ್ಧ ಮಾತು
ದಂದುಗ ದುಃಖ, ಕಷ್ಟ
ದಕ್ಕ–ಕಬ್ಬಿಣದ ಕದಿರು
ದಡಿ–ಬಡಿಗೆ
ದಡಿಗೆ–ಅಡ್ಡ ತೊಲೆ
ದಮ್ಮಯ್ಯ–ಧರ್ಮವಯ್ಯಾ
ದರ್ಭೆ–ಕರಿಕೆಹುಲ್ಲು
ದಷ್ಟ–ಕಚ್ಚಿದ
ದಸಿ–ಗೂಟ
ದಾತಾರ–ಒಡೆಯ
ದಾವತಿ–ಶ್ರಮ
ದಾಸೋಹಂ–ದಾಸಃ+ಅಹಂ, ನಾನು ದಾಸನು ಎಂಬ ಭಾವನೆ
ದಿಬ್ಯ–ದಿವ್ಯ, ಆಣೆ ಪ್ರಮಾಣ
ದಿಮ್ಮಿತ್ತೆ?–ಭಾರವೆ?
ದಿಷ್ಟ ದೀವಿಗೆ–ತೋರುದೀಪ

ದೀಪ್ತಿ–ಪ್ರಕಾಶ
ದುಂಡೆ–ಸ್ವೇಚ್ಛಾಚಾರಿಣಿ
ದುರಿತ–ಪಾಪ
ದೃಷ್ಟ–ಪ್ರತ್ಯಕ್ಷ
ದೃಷ್ಟಿವಾರಿ–ಎವೆಯಿಕ್ಕದೆ ಶಿವಲಿಂಗವನ್ನು ನೋಡುವ ವ್ರತ
ದೆಸೆ–ನೆಲೆ
ದೇವಗಣ–ನಗಣ ಅಥವಾ ಮಗಣ
ದೇಶಿಗ–ಪರದೇಶಿ
ದೇಸೆ–ಉತ್ತಮ
ದೇಹಾರ–ದೇವಪೂಜೆ
ದ್ವಾದಶಾದಿತ್ಯ–೧೨ಜನ ಸೂರ್ಯರು
ಧರಣೇಂದ್ರ–ಆದಿಶೇಷ
ಧರಧುರ-ಶ್ರೇಷ್ಠ
ಧರ್ಮದ ಕವಿಲೆ–ದೇವರಿಗೆ ಬಿಟ್ಟ ಆಕಳು
ಧಾ(ರಾ)ವಟ್ಟಲು–ಲಿಂಗದ ಮೇಲೆ ಕಟ್ಟಿದ ಜಲಧಾರಾಪಾತ್ರೆ
ಧವಳಿತ-ಬಿಳಿಯ, ಶುಭ್ರ
ಧಾತುಗೆಡು–ಶಕ್ತಿಗುಂದು
ಧೃತಿ-ಧೈರ್ಯ
ನಡೆವೆಣ-ನಡೆದಾಡುತ್ತಿದ್ದರೂ ಹೆಣದಂತೆ ಇರುವವ
ನನೆ-ಮೊಗ್ಗು
ನರವಿಂಧ್ಯ–ಜನವಸತಿಯೆಂಬ ಕಾಡು
ನರೆ–ಬಿಳಿಕೂದಲು
ನವಖಂಡ–ಒಂಬತ್ತು ತುಂಡು
ನಾಣು–ನಾಚಿಕೆ
ನಾಣುಗೆಡಿಸು–ಯೋನಿಯಾಗಿಸಿ ಹಾಳು ಮಾಡು
ನಾಣುನುಡಿ–ಲೋಕನಿಂದೆ?
ನಾಭಿ–ಹೊಕ್ಕಳು
ನಾರಗೋಣಿ–ನಾರಿನಿಂದ ಮಾಡಿದ ಚೀಲ
ನಾರಿ–ಬಿಲ್ಲಿನ ದಾರ
ನಾರಿವಾಣ ತೆಂಗು
ನಾರುಳಿ–ತೆಂಗು?
ನಾಸ್ತಿಕವಾಡು–ದೇವರ ಅಸ್ತಿತ್ವವನ್ನು ಅಲ್ಲಗಳೆ
ನಿಃಕರಿಸು–ಇಲ್ಲದಂತೆ ಮಾಡು, ಹೋಗಲಾಡಿಸು
ನಿಕ್ಷೇತ್ರ–ಕ್ಷೇತ್ರವಲ್ಲದಂತಾಗುವುದು, ನಾಶ?
ನಿಕ್ಷೇಪಿಸು–ಹುದುಗಿಸು, ಹೂಳಿಡು
ನಿಗಳ–ಬೇಡಿ, ಬಂಧನ
ನಿಟ್ಟೈದೆ–ಆಜೀವ ಮುತ್ತೈದೆ
ನಿಧಾನ–ಹೂಳಿಟ್ಟ ದ್ರವ್ಯ
ನಿಯತನಾಗು–ವ್ರತಸ್ಥನಾಗು
ನಿ[ಮ್ಮೃ]ಸಿರಿ–ನಿಮ್ಮ ಐಶ್ವರ್ಯ
ನಿರಿಯನಿಕ್ಕಿ ದಾಂಟು-ಪ್ರಾಮಾಣಿಕತೆಯನ್ನು ಸಾರುವುದಕ್ಕಾಗಿ ಗಿರಿಯನ್ನು ಚೆಲ್ಲಿ ದಾಟುವುದು?
ನಿರ್ಮಾಲ್ಯ–ಉಪಯೋಗಿಸಿದ ವಸ್ತು
ನಿವಾಟ–ನಿರ್ಮೂಲನ?
ನಿಷ್ಪತ್ತಿ–ಪರಿಪಾಕ, ಮುಕ್ತಿ
ನೀರಾಜನ–ಆರತಿ
ನುಡಿವೆಣ–ಮಾತನಾಡುತ್ತಿದ್ದರೂ ಹೆಣದಂತೆ ಇರುವವ
ನುಸಿ–ನುಚ್ಚು, ಪುಡಿ
ನುಸುಳು–ಮೋಸ, ಜಾರಿಕೊಳ್ಳುವಿಕೆ
ನೆರವಿ–ಸಂಭೋಗ, ಕೂಟ
ನೆರಹು–ಒಗ್ಗೂಡಿಸು, ಸಂಗ್ರಹಿಸು
ನೆಲನಾಳ್ವ–ಅರಸು
ನೆಲೆವಣ್ಣ ಮಾಡು–ವಾಸಸ್ಥಾನವನ್ನು ಮಣ್ಣು ಮಾಡು

ನೇಣು–ಹಗ್ಗ, ಜನ್ನಿವಾರ
ನೇಣಗಾರ–ಕುತ್ತಿಗೆ ಕೊಯ್ಯುವವ, ಜನಿವಾರ ಧರಿಸಿದ ಬ್ರಾಹ್ಮಣ
ನೋನು–ವ್ರತಮಾಡು
ನೋಂತು–ವ್ರತಮಾಡಿ
ನೋಂಪಿ–ವ್ರತ
ಪಂಗುಳ–ಹೆಳವ, ಸೇವಕ
ಪಂಚಗವ್ಯ–ಗೋವಿನಿಂದ ಪ್ರಾಪ್ತವಾಗುವ ೫ ಬಗೆಯ ವಸ್ತು
ಪಂಚಮಹಾವಾದ್ಯ–ರಾಜರ ಮುಂದೆ ನುಡಿಸುವ ೫ ಬಗೆಯ ವಾದ್ಯಗಳು
ಪಂಚೈವರ[ಂ]–ಐದು ಇಂದ್ರಿಯಗಳನ್ನು
ಪಚಾರಿಸಿ–ಪ್ರಚಾರಿಸಿ, ಪ್ರಕಟಮಾಡಿ
ಪಟ್ಟಪರಿ–ತುಂಡು ತುಂಡು
ಪಟ್ಟಿಯ–ಖಡ್ಗ
ಪಡಿದೊತ್ತು–ಪ್ರತಿತೊತ್ತು, ತೊತ್ತಿನ ಕೈಕೆಳಗಿನ ತೊತ್ತು
ಪಡಿಪದಾರ್ಥ–ಪ್ರತಿಯೊಂದು ಪದಾರ್ಥ
ಪಡುಗ–ಉಗುಳು ಪಾತ್ರೆ
ಪನ್ನಗಭೂಷಣ–ಹಾವಿನಿಂದ ಅಲಂಕೃತನಾದ ಶಿವ
ಪರದ್ವಾರ–ಪರದಾರತ್ವ, ಜಾರತನ
ಪರಿಗ್ರಾಹಕ–ಸ್ವೀಕರಿಸಿದವ
ಪರಿಚಾರಕ–ಸೇವಕ
ಪರಿಣಾಮ–ತೃಪ್ತಿ
ಪರಿಣಾಮಿಸು–ತೃಪ್ತಿಹೊಂದು
ಪರಿಭವ–ಅಪಮಾನ
ಪರಿಯಾಣ–ಊಟದ ತಟ್ಟೆ
ಪರುಷವೇಧಿ–ಪರುಷವನ್ನು ಸ್ಪರ್ಶಿಸಿದುದು
ಪರ್ವತ–ಶ್ರೀಶೈಲ ಪರ್ವತ
ಪಸರ–ಸಂಗ್ರಹ
ಪಾದಚ್ಛಯ–೧೫ಅಂ ಮಾರು ಪ್ರಮಾಣ
ಪಾಪಿಯ ಕೂಸು–ಎತ್ತಿಕೊಂಡವರನ್ನು ತಿನ್ನುವ ಶ್ರೀಶೈಲದಲ್ಲಿಯ ಕೂಸು
ಪಾರ–ದಂಡೆ, ತೀರ
ಪಾಷಂಡಿ–ನಾಸ್ತಿಕ, ಹೀನ
ಪಿಂಬೇರ ಮೈ[ಲುಗ]–ಪಿಂಬೇರ ಗ್ರಾಮದ ಮೈಲಾರ ದೇವತೆ
ಪಿಸಿತ–ಮಾಂಸ
ಪುರಾತವಳಿ–ಪುರಾತ ಬಳಿ, ಪುರಾತನರ ಸಂತಾನ
ಪುರುಷ ನಿರ್ವಾಣ–ಪತಿಯ ಮೋಕ್ಷ
ಪುರುಷಬ್ರತಿ–ಪತಿವ್ರತೆ
ಪುಳಕ–ರೋಮಾಂಚನ
ಪೂರಾಯ–ಪೂರ್ಣ
ಪೇಯ–ಕರು
ಪೋಲುಗ–ಪೊಲ್ಲುಗ, ಕೆಡಕು ಮಾಡುವವ
ಪ್ರಣವ–ಓಂಕಾರಮಂತ್ರ
ಪ್ರತಿಗ್ರಾಹಕ–ಸ್ವೀಕರಿಸಿದವ
ಪ್ರತಿಪಾದಿಸು–ದೂಷಣೆಮಾಡು
ಪ್ರತಿಷ್ಠೆ–ಸ್ಥಾವರಲಿಂಗ
ಪ್ರಮಥರು–ಶಿವನ ಗಣಂಗಳು
ಪ್ರಮಾಣು–ಸಾಕ್ಷಿ
ಪ್ರಾಜ್ಞ–ಚೆನ್ನಾಗಿ ತಿಳಿದವ
ಪ್ರಾರಬ್ಧ ಕರ್ಮ–ಮುಂದುವರಿದ ಕರ್ಮ
ಫಣಾಮಣಿ–ಹಾವಿನ ಹೆಡೆಯ ರತ್ನ
ಬಂಟ–ಸೇವಕ
ಬಂದಿ–ಸೆರೆ
ಬೊಂತೆ–ಕೌದಿ
ಬಗಿ–ತೋಡು
ಬಚ್ಚಣೆ–ಬಚ್ಚಣೆ, ಸುಂದರ
ಬಜಾವಣೆ–ಬಾರಿಸುವಿಕೆ

ಬಟ್ಟೆ–ದಾರಿ
ಬಡಿಹ–ಬಡಿತ, (ಸುತ್ತಿಗೆಯಿಂದ) ಬಡಿಯುವುದು
ಬಣಗು–ಕ್ಷುದ್ರ
ಬಣಬೆ–ಬಣವೆ, ಗುಂಪು
ಬತ್ತೀಸ–ಮೂವತ್ತೆರಡು
ಬಯ್ಕೆಯ–ಬಯ್ತಿಟ್ಟ, ಮುಚ್ಚಿಟ್ಟ
ಬಯ್ಕೆಯ ಕಿಚ್ಚು–ವಡಬಾನಲ
ಬರಬರ–ಬರುಬರುತ್ತ
ಬರುದೊರೆ–ವ್ಯರ್ಥ
ಬರುಕಾಯ–ಭವಿ, ಲಿಂಗಕಾಯವಲ್ಲದವ
ಬಲ್ಲಹ–ಒಡೆಯ
ಬಲ್ಲಿತ್ತು–ಗಟ್ಟಿಮುಟ್ಟು
ಬಲ್ಲಿದ–ಬಲಶಾಲಿ
ಬಲುಹು–ಬಲಿಷ್ಠ
ಬವರ–ಯುದ್ಧ
ಬಸಕುತ್ತ–ಅಣಕಿಸುತ್ತ?
ಬಹಿರಂಗಶುದ್ಧಿ–ಆಚಾರಶುದ್ಧಿ
ಬಳಿಬಳಿ–ಬೆನ್ನು ಹಿಂದೆ, ಬೆಂಬಳಿ
ಬಳಿನೀರು–ಮಂತ್ರಜಲ
ಬಳ್ಳು–ನರಿ
ಬಳ್ಳ–ಅಳೆಯುವ ಪ್ರಮಾಣ
ಬಳಿದಪ್ಪು–ಕ್ರಮ ತಪ್ಪು, ದಾರಿ ತಪ್ಪು
ಬ್ರಹ್ಮೇತಿ–ಬ್ರಾಹ್ಮಣ ಹತ್ಯೆ
ಬ್ರಹ್ಮವಿತ್ತು–ಬ್ರಹ್ಮವನ್ನು ತಿಳಿದವ
ಬ್ರಹ್ಮಹತ್ಯ–ಬ್ರಾಹ್ಮಣ ಹತ್ಯೆ
ಬಾಣಸ–ಅಡಿಗೆ, ಊಟ
ಬಾತೆ–ಪ್ರಯೋಜನ
ಬಾದುಮ–ಗಂಡೂ ಹೆಣ್ಣೂ ಅಲ್ಲದ ಒಂದು ಗ್ರಾಮದೇವತೆ? ಜೋಕುಮಾರ?
ಬಾಯಿನ–ಬಾಗಿನ, ಕಾಣಿಕೆ
ಬಾರನೆತ್ತು–ಚರ್ಮಸುಲಿ
ಬಾರಿ–ಕ್ರಮ, ಸರತಿ
ಬಾಲವ ಕೊಯ್ದು–ಪುನರ್ಜನ್ಮ ನಿವೃತ್ತಿ ಮಾಡಿ
ಬಾವುಲ–ತೊಗಲ ಬಾವುಲ
ಬಾವನ್ನ–ಶ್ರೀಗಂಧ
ಬಾಸುಳ–ಹೊಡೆತದಿಂದ ಮೈಮೇಲೆ ಮೂಡುವ ಗೆರೆ
ಬಾಳ–ಖಡ್ಗ
ಬಾಳಿಲ್ಲದವಳು–ವಿಧವೆ
ಬಾಳುವೆಣ–ಬದುಕಿದ್ದರೂ ಸತ್ತಂತೆ ಇರುವವ
ಬಿಟ್ಟಿ–ವಿಷ್ಟಿ, ಸಂಬಳವಿಲ್ಲದ ಸೇವೆ
ಬಿಡಲು–ಬೀಡು ಬಿಡಲು
ಬಿತ್ತು–ಬೀಜ
ಬಿದಿರು–ಬಾಗು, ವಿನಯಿಯಾಗು
ಬಿನ್ನಾಣ–ವಿಜ್ಞಾನ, ನೈಪುಣ್ಯ
ಬಿನ್ನಾಣಿ–ವಿಜ್ಞಾನಿ, ತಿಳಿದವ
ಬಿರಿದ–ಬಿರುದು
ಬಿಲಿ–ಬೆಲೆಕೊಟ್ಟು ತೆಗೆದುಕೊಳ್ಳು
ಬಿಲಿತು–ಬೆಲೆಕೊಟ್ಟು
ಬೀಗು–ಕೊಬ್ಬು
ಬೀದಿಯ ಗುಂಡ–ಬೀದಿಯಲ್ಲಿ ಬಡಿವಾರದಿಂದ ತಿರುಗಾಡುವವ
ಬೀಯ–ವ್ಯಯ
ಬೀಸರ–ವ್ಯರ್ಥ
ಬೀಸಿ–ಬೀಸಿ ಬೀಸಿ ಬಟ್ಟೆ ಒಗೆಯುವ ಕೆಲಸ ಮಾಡಿ
ಬೀಳುಡೆ–ಉಟ್ಟು ಕಳೆದ ಬಟ್ಟೆ
ಬೀಳುವೆಣ–ಉಂಡು ಮಲಗುವ ವ್ಯರ್ಥ ಮನುಷ್ಯ
ಬೂರ–ಟೊಳ್ಳು

ಬೆಂತರ–ವ್ಯಂತರ, ಪಿಶಾಚಿ
ಬೆಂಬೀಳು–ಬೆನ್ನ ಹತ್ತು
ಬೆಟ್ಟು–ಪೆಟ್ಟು, ಹೊಡೆಯುವಿಕೆ
ಬೆದರಟ್ಟು–ಬೆದರಿಸಿ ಬೆನ್ನು ಹತ್ತು
ಬೆನಕ–ವಿನಾಯಕ, ಗಣಪತಿ
ಬೆನಕ–ತೂಕಕ್ಕೆ ಬಳಸುವ (ಬೆಣಚು) ಕಲ್ಲು
ಬೆನ್ನ ಬಾರನೆತ್ತು–ಬೆನ್ನ ಚರ್ಮವನ್ನು ಸುಲಿ
ಬೆರಣಿ–(ಸಗಣಿಯ) ಕುರುಳು
ಬೆರೆ–ಅಹಂಕಾರದಿಂದ ವರ್ತಿಸು
ಬೆವಹಾರ–ವ್ಯವಹಾರ
ಬೆಸನ–ವ್ಯಸನ, ಬೆಸಗೊಳ್ಳುವಿಕೆ
ಬೆಳಸು–ಪೈರು
ಬೆಳ್ಕಾರ–ಮೃಗಗಳನ್ನು ಹಿಡಿಯುವ ಬಲೆ
ಬೆಳ್ಳಿಗೆಯಾವು–ಬಿಳಿಯ ಜಾತಿಯ ಆಕಳು
ಬೆಳ್ಳುಕ–ಬೆಳ್ಳಗಿರುವುದು
ಬೆಳುಗಾರ–ಬೆಸುಗೆಗಾಗಿ ಬಳಸುವ ಪದಾರ್ಥ
ಬೆಳ್ಳೆ ಎತ್ತು–ಬಿಳಿಯ ಜಾತಿಯ ಎತ್ತು
ಬೇಟ–(ಪ್ರೇಮ) ಬೇಡುವುದು
ಬೇಹು–ಗೌಪ್ಯ
ಬೇಳ್–(ಯಜ್ಞದಲ್ಲಿ) ಆಹುತಿಕೊಡು
ಬೊಜಗ–ವಿಟ
ಬೊಪ್ಪ–ದೊಡ್ಡಪ್ಪ
ಬೊಬ್ಬುಲಿ–ಜಾಲಿ
ಬೊಬ್ಬುಳಿಕೆ–ನೀರಗುಳ್ಳೆ
ಬೊಮ್ಮ–ಬ್ರಹ್ಮ
ಬೊಳ್ಳೆಗ–ಮೋಸಗಾರ
ಬೋಡಾಗು–ಊನವಾಗು
ಬೋಹರಿಗೆ–ಕಸಬರಿಗೆ
ಬೋಳ–ಬೋಳು ತಲೆಯವ
ಬೋವಿತಿ–ಮೀನುಗಾರಿತಿ
ಬೋಳಾಗು–ಬೋಳೈಸು, ಪ್ರೀತಿಸು
ಬೋಳೈಸು–ಸಮಾಧಾನ ಪಡಿಸು
ಭಂಗಗಾರ–ಅವಮಾನಿತ
ಭಂಡ–ನಾಚಿಕೆಯಿಲ್ಲದವ
ಭಾಂಡ–ಅಡುಗೆ ಪಾತ್ರೆ
ಭಾಜನ–ಊಟದ ಪಾತ್ರೆ, ಗುರಿ
ಭಕ್ತಕಾಯ ಮಮಕಾಯ–ಭಕ್ತನ ಕಾಯವೇ ನನ್ನ ಕಾಯ
ಭರ–ಉತ್ಸಾಹ
ಭವ–ಜನನ ಮರಣ
ಭವಿತವ್ಯ–ಬದುಕುವ ವ್ಯವಸ್ಥೆ
ಭಾಷೆ–ಪ್ರತಿಜ್ಞೆ
ಭಿತ್ತಿ–ಗೋಡೆ
ಭೂತದೇಹಿ–ಪದಾರ್ಥವಾದಿ, ಭವಿ
ಭೂತಿಕ–ಭೂತ ಹಿಡಿದವ
ಭೂನಾಗ–ಸಾಮಾನ್ಯ ನಾಗರಹಾವು
ಮಂಜರ–ಬೆಕ್ಕು
ಮಂಡೂಕ–ಕಪ್ಪೆ
ಮಂಡೆ–ತಲೆ
ಮಂಡೆಯ ಮೇಲೆ ಸಿಂಬೆ–ಆಳುಗಳ ಮಾರಾಟ ಸಂದರ್ಭದಲ್ಲಿ ತಲೆಗೆ ಸುತ್ತುತ್ತಿದ್ದ ಬಳ್ಳಿ
ಮಂಡೆಯ ಬೋಳಿಸು–ಒಬ್ಬನಿಗೆ ಆಳಾದುದನ್ನು ಸೂಚಿಸಲು ತಲೆಬೋಳಿಸಿಕೊಳ್ಳುವ ಪದ್ಧತಿ
ಮಂತ್ರವೈದ್ಯ–ಮಂತ್ರದಿಂದ ರೋಗ ಗುಣಪಡಿಸುವ ವೈದ್ಯ ಪದ್ಧತಿ
ಮಚ್ಚಿಗ–ಮೊಚ್ಚೆ ಹೊಲಿಯುವವ
ಮಚ್ಚು–ಪ್ರೀತಿ, ಮೆಚ್ಚು
ಮಟ್ಟಿ–(ಹಣೆಯ ನಾಮಕ್ಕೆ ಬಳಸುವ) ಒಂದು ಬಗೆಯ ಮಣ್ಣು
ಮಡಗು–ಮುಚ್ಚಿಡು
ಮಡಿಲು–ಉಡಿ

ಮತ್ತರ–ಹೊಲ ಅಳೆಯುವ ಒಂದು ಅಳತೆ ಪ್ರಮಾಣ
ಮತ್ಸ್ಯ–ಮೀನು
ಮದವಳಿಗೆ–ಮದುವಣಗಿತ್ತಿ, ಮದವು ಅಳಿಯಲಿ
ಮನೆಯ ಮಗ–ವೇಳೆವಾಳಿ
ಮರಗಾಲ–ಕಟ್ಟಿಗೆಯ ಕಾಲು
ಮರುಜವಣಿ–ಸಂಜೀವಿನಿ ಕಡ್ಡಿ
ಮರೀಚಿ–ಮೃಗಜಲ
ಮರುಳ–ತಿಳಿಗೇಡಿ, ದೆವ್ವ
ಮಸಕು–ಉಲ್ಬಣತೆ, ಕಪ್ಪುಬಣ್ಣ
ಮಸಣಿ–ಸ್ಮಶಾನವಾಸಿ ದೇವತೆ
ಮಾಗಿ–ಚಳಿಗಾಲ
ಮಾಗುಡ–ಮಹಾಗುಂಡ, ತೀರ್ಥ
ಮಾಟ–ಮಾಟಮಂತ್ರ ಮಾಡುವಿಕೆ, ಕೆಲಸ
ಮಾಡದ ಕನಸು–ಮನಸ್ಸಿನಲ್ಲಿ ಮಂಡಗೆ?
ಮಾಣದೆ–ಬಿಡದೆ, ಒಂದೇ ಸವನೆ
ಮಾತಂಗಿ–ಶೂದ್ರ ಹೆಣ್ಣು
ಮಾತಿನ ಮಾತು–ಗತಾನುಗತಿಕ ಮಾತು, ವೇದ
ಮಾಬಳೆ–ಮಾಣ್ಬಳೆ? ಬಿಡುವಳೆ?
ಮಾರಂಕ–ಪ್ರತಿಯೋಧ
ಮಾರುಗೋಲ–ಪ್ರತಿಬಾಣ
ಮಾರುವೋಗು–ಮಾರಿಕೊಳ್ಳು
ಮಾಸಾಳು–ಯೋಧ
ಮಾಳ–ಶ್ರಾದ್ಧ, ಮಹಳಪಕ್ಷ
ಮಿಂಬುಲಿಗನ ಹಕ್ಕಿ–ಮೀನು ತಿನ್ನುವಹಕ್ಕಿ
ಮಿಟ್ಟೆ–ಮಣ್ಣು
ಮಿಡಿ–ಮಿಡಿನಾಗರಹಾವು
ಮಿಡುಕುರು–ಬೆಂಕಿಯ ಕಿಡಿ
ಮುಂಡಿಗೆ–ಆಹ್ವಾನ, ಸಮಸ್ಯೆ
ಮುಂಬಲ್ಲ–ಮುಂದಿನ ಹಲ್ಲು
ಮುಕ್ಕು–ಊನವಾದುದು
ಮುಖಲಿಂಗಿ–ಲಿಂಗದ ಮುಖಸ್ವರೂಪರು
ಮುಟ್ಟಗೆ–ಮುಷ್ಟಿಕೆ, ಮುಟಗೆ
ಮುಡುಹಿಕ್ಕು–ಭುಜ ಚಪ್ಪರಿಸಿಕೊಳ್ಳು
ಮುತ್ತಂತೆ–ಪಕ್ವವಾದಂತೆ
ಮುತ್ತಯ್ಯ–ತಂದೆಯ ತಂದೆ, ಅಜ್ಜ
ಮುಯ್ಯಾನು–ಸರಿಗಟ್ಟು, ಸಲುಗೆತೋರಿಸು
ಮೂಕೊರತಿ–ಮೂಗಿಲ್ಲದವಳು
ಮೂಗುವಡು–ಮೂಕನಾಗು
ಮೂಚುಟಾಗಿ–ಮೊದಲೇ
ಮೂಲಸ್ಥಾನ–ಕೇಂದ್ರದೇವಸ್ಥಾನ
ಮೂಲಿಗ–(ಮನೆತನದ) ಮೂಲಪುರುಷ
ಮೂವಿಧಿ–ಸೃಷ್ಟಿ, ಸ್ಥಿತಿ, ಲಯ
ಮೇಳವಾಡು–ಸ್ನೇಹಿತನಾಗು
ಮೇಳಾಪ–ಸಹವಾಸ, ಸಭೆ
ಮೊಗೆ–ಬೊಗಸೆಯಲ್ಲಿ ತುಂಬಿಕೊಳ್ಳು
ಮೊನೆ–ತುದಿ
ಮೊರಡಿ–ಕಲ್ಲು ಮಣ್ಣಿನ ಭೂಮಿ
ಮೋಟ–ಕೈಯಿಲ್ಲದವ
ಮೋಹಿಸು–ತಾಗು
ಮೌಳಿ–ಕಿರೀಟ
ಯಾಗ ನಟ್ಟುವಿಗ ಪಾಣರು–ಯಜ್ಞದಲ್ಲಿ ಕುಣಿಯುವವರು, ಹಾಡುವವಗು
ಯೋಜನ–ನಾಲ್ಕು ಹರಿದಾರಿ
ರಂಜಕ–ಬಣ್ಣದ ಮಾತುಗಾರ
ರಜ್ಜು–ಹಗ್ಗ
ರವಣ–ಔಡಲ
ರಾಟಳ–ಚಕ್ರ
ರಾಣಿವಾಸ–ಅಂತಃಪುರ
ರೂಹು–ರೂಪ, ಆಕಾರ, ಮೂರ್ತಿ

ಲಂಘಿಸು–ಜಿಗಿ
ಲಂದಣಗಿತ್ತಿ–(ರಂಧನಿಕಾ) ಅಡಿಗೆಯವಳು
ಲಂಪಟ–ಆಸಕ್ತ
ಲಗ್ಗ–ಲಗ್ನ, ಕೂಡುವಿಕೆ
ಲಲನೆ–ಸ್ತ್ರೀ
ಲಾಂಛನ–ಜಂಗಮ, ಚಿಹ್ನೆ
ಲಾಯ–ಕುದುರೆಕಟ್ಟುವ ಸ್ಥಳ
ಲಕ್ಕಗಾವುದ-ಲಕ್ಷಗಾವುದ
ಲಗ್ನ–ಮುಹೂರ್ತ
ಲಲಾಟಲಿಖಿತ–ಹಣೆಯ ಬರಹ
ಲೀಯ–ಲೀನ
ಲೆಂಕ-ವೇಳೆವಾಳಿ
ಲೆಂಗಿ–ಲೆಂಕಿ, ವೇಳೆವಾಳಿ ಸ್ತ್ರೀ
ಲೊಟ್ಟೆಯತನ-ಟೊಳ್ಳುತನ
ಲೋಗರ–ಸಾಮಾನ್ಯರ
ವಜ್ರ–ಸಿಡಿಲು
ವರದ–ವರವನ್ನು ಕರುಣಿಸುವವ
ವರ್ತಮಾನ–ಕ್ರಿಯೆ, ಘಟನೆ
ವರ್ಮ–ಮರ್ಮ, ರಹಸ್ಯ
ವಶ್ಯ–ವಶೀಕರಣ ವಿದ್ಯೆ
ವಸ್ತು–ಮೂಲವಸ್ತು (Basic goods)
ವಳಿ–ಬಳಿ, ವಂಶಾವಳಿ
ವಾಮಕ್ಷೇಮ–ಹಾನಿವೃದ್ಧಿ
ವಾಯ–ಮಾಯ? ಮೋಸ, ವ್ಯರ್ಥ
ವಾರಣಾಸಿ–ಕಾಶಿಕ್ಷೇತ್ರ
ವಾರಿಕಲ್ಲು–ಆಣೆಕಲ್ಲು
ವಾಸಿ–ನೆಲೆನಿಲ್ಲುವಂಥದು
ವಿಗರ್ಭಣೆ–ಬೆದರಿಕೆ
ವಿದಾರಿಸಿ–ಕತ್ತರಿಸಿ
ವಿಧಿ–ರೀತಿ
ವಿಭಾವ–ಭಿನ್ನಭಾವ
ವಿರಿಂಚಿ–ಬ್ರಹ್ಮ
ವಿರೂಪಾಕ್ಷ-ಹಂಪೆ
ವಿಲಗ್ಗ–ವಿಲಗ್ನ, ಅಗಲಿಕೆ
ವಿಶ್ರಾಮ–ಕೊನೆ, ನೆಲೆ
ವಿಸ್ಟ್ರಿಸು-ಮಲವಿಸರ್ಜನೆ ಮಾಡು
ವಿಸರ್ಜನ-ಬಿಟ್ಟುಕೊಡುವುದು
ವೀಚಿ–ತೆರೆ
ವೀರಪಟ್ಟ–ಸೇನಾಪತಿಯ ಹಣೆಗೆ ಕಟ್ಟುವ ಪಟ್ಟ
ವೃಷ್ಟಿ–ಮಳೆ
ವೆಗ್ಗಳ–ಅಧಿಕ
ವೇದ್ಯ–ತಿಳಿದವ
ವೇದ್ಯವಾಗು–ತಿಳಿ, ಗೊತ್ತಾಗು
ವೇಧಿಸು–ಅಪ್ಪಳಿಸು, ಸ್ಪರ್ಶಿಸು
ವೇಸರ–ಹೇಸರಗತ್ತೆ
ವೇಳೆ–ವೇಳೆವಾಳಿ?
ವೇಳೆವಾಳಿ–ಒಡೆಯನಿಗಾಗಿ ಆತ್ಮಬಲಿ ಯಾಗುವ ವ್ಯಕ್ತಿ
ವೈತರಣಿ–ನರಕದಲ್ಲಿಯ ಒಂದು ನದಿ
ವೈಶಿಕ–ಸಮ್ಮೋಹನಶಕ್ತಿ–
ವೈಶಿಕಶಾಸ್ತ್ರ–ವಶೀಕರಣಶಾಸ್ತ್ರ
ವೈಶೇಷಿಕ–ಸಿದ್ಧಾಂತ ವಿಶೇಷ
ವ್ಯತೀಪಾತ–ಸೂರ್ಯಚಂದ್ರರ ದುಷ್ಟಯೋಗ
ವ್ಯಾಧ–ಬೇಡ, ಕಿರಾತ
ವ್ಯಾಧಿ–ರೋಗ
ವ್ಯಾಪ್ತಿ–ವ್ಯಾಪತ್ತಿ, ಉದ್ಯೋಗ
ವ್ಯಾಳೇಶ–ಆದಿಶೇಷ
ಶಿಖೆ–ಜುಟ್ಟ
ಶಿವದಾನ–ಮಜ್ಜಿಗೆ

ಶುಕ್ಲ–ಪುರುಷನ ವೀರ್ಯ
ಶೋಣಿತ–ಸ್ತ್ರೀಯ ರಜಸ್ಸು
ಶೌಚ–ಶುಚಿಯುಳ್ಳ
ಶ್ರಪಣ–ಕಟ್ಟಿಗೆ
ಶ್ವಪಚ–ಶ್ವಾನಮಾಂಸಾಹಾರಿ, ಶೂದ್ರ
ಶ್ವಾನಜ್ಞಾನ–ಶ್ವಾನಜ್ಞಾನದಂಥ ಜ್ಞಾನ?
ಶ್ರವ–(ಶ್ರಮ), ವ್ಯಾಯಾಮ
ಶ್ರುತಿ–ವೇದ
ಶ್ರೋತ್ರ–ಕಿವಿ
ಷಡ್ಭಾಗ–ಆರರಲ್ಲಿ ಒಂದು ಭಾಗ
ಷಡುಸಮ್ಮಾರ್ಜನೆ–ಆರು ಬಗೆಯ ಸಾರಣೆ
ಷೋಡಶೋಪಚಾರ–ದೇವರನ್ನು ೧೬ ಬಗೆಯಾಗಿ ಉಪಚರಿಸುವುದು
ಸಂಕಲೆ–ಸಂಕೋಲೆ, ಬೇಡಿ
ಸಂಚಲ–ಚಂಚಲ
ಸಂಚಿತ–ಸಂಗ್ರಹಿಸಲ್ಪಟ್ಟ
ಸಂಚಿತಕರ್ಮ–ಹಿಂದಿನ ಜನ್ಮದಲ್ಲಿ ಕೂಡಿದ ಕರ್ಮ
ಸಂಬೋಳಿ–ಶೂದ್ರರು ಗ್ರಾಮಪ್ರವೇಶ ಪ್ರಸಂಗದಲ್ಲಿ ವ್ಯಕ್ತಪಡಿಸುವ ಶಬ್ದ
ಸಕೃತ್–ಒಮ್ಮೆ
ಸಜ್ಜನ–ಹೆಂಡತಿ
ಸಟ್ಟುಕ–ಅಡಿಗೆಗಾಗಿ ಬಳಸುವ ಸವುಟು
ಸತ್ತಿಗೆ–ಛತ್ರಿಕಾ, ಛತ್ರಿ
ಸದಗ–ಮಂದ
ಸದಮದ–ಅಧಿಕಮದ?
ಸದೆ–ಹೊಡೆ
ಸನ್ನಿ–ಸರಿಯಿರಿ, ತೊಲಗಿರಿ
ಸನ್ನಿಹಿತ–ತೀರಹತ್ತಿರದಲ್ಲಿರುವಂಥ‌ವು
ಸಬಳ–ಕೋಲು
ಸಮನಿಸು–ಪ್ರಾಪ್ತವಾಗು, ಸರಿಕಾಣು
ಸಮವೇದಿಸು–ಸರಿಯಾಗಿ ತಿಳಿ
ಸಮಯಾಚಾರ–ಧರ್ಮದ ಆಚರಣೆ
ಸಯದಾನ–ಅಡುಗೆ ಪದಾರ್ಥ
ಸಯವಪ್ಪ–ಸ್ವಯಂವಾಗಿರುವ, ತನ್ನದಾಗಿರುವ
ಸರಕುಮಾಡು–ಗಮನಕೊಡು
ಸರವಿ–ಹಗ್ಗ
ಸರಿಸವ–ಸರಿಸಮಾನ
ಸಲಗೆ–ಅಳತೆ ಪ್ರಮಾಣ
ಸಲ್ಲದ ಹೊನ್ನು–ಖೊಟ್ಟಿನಾಣ್ಯ
ಸಲಾಕೆ–ಕಿರಣ
ಸಲೆ–ಚನ್ನಾಗಿ
ಸಲುಗೆ–ಚಲಾವಣೆ
ಸಲುವ–ಚಲಾವಣೆಯಲ್ಲಿರುವ
ಸವಣ–ಜೈನಸನ್ಯಾಸಿ
ಸವಸು–ಸಮೆಯಿಸು, ಸಿದ್ಧಪಡಿಸು, ಸವೆಯಿಸು, ವ್ಯಯಿಸು, ನೀಡು
ಸಸಿನೆ–ನೇರ
ಸಾರಾಯ–ನಿಜತತ್ವ, ತಿರುಳು
ಸಾರು–ಸಮೀಪಬರು, ಹೊಂದು
ಸಾಲಿಗ–ಜೇಡ (ಜೇಲ > ಜೇಲಿಗ)
ಸಿಂಗಿ–ಭಯಂಕರ ವಿಷ
ಸಿಂಬಕ–ಸೇವಕ, ತೊತ್ತು
ಸಿತಗ–ಕೆಡುಕ, ನಿಷ್ಠುರ
ಸಿದ್ದಿಗೆ–ಶವವನ್ನು ಒಯ್ಯುವ ಸಿದಿಗೆ
ಸಿನೆ–ಶೂನ್ಯ? ಹಾಳಾದ
ಸೀರೆ–ಚೀರ, ಬಟ್ಟೆ
ಸುಮ್ಮಾನ–ಸುಮ್ಮನಿರುವಿಕೆ
ಸುಯಿಧಾನ–ಎಚ್ಚರಿಕೆ
ಸುರಗಿ–ಖಡ್ಗ

ಸುಲಿ–ಸೆಳೆದುಕೊಳ್ಳು
ಸೂತಕ–ಮೈಲಿಗೆ
ಸೂನೆಗಾರ–ಕಟುಕ
ಸೂರೆ–ವಿಪುಲ
ಸೊಡರು–ದೀಪ
ಸೊಣಗ–ಶುನಕ, ನಾಯಿ
ಸೊಲ್ಲು–ಮಾತು
ಸೊಮ್ಮು–ಸ್ವತ್ತು, ಆಸ್ತಿ
ಸೋಂಕು–(ಸ್ತ್ರೀ)ಸ್ಪರ್ಶನ
ಸೋರೆ–ಕುಂಬಳಕಾಯಿ
ಸೋರೆ–ವೀಣೆಯ ಕುಂಬಳ ಬುರುಡೆ
ಸೋಹಂ–ನಾನೇ(ಆತನು=) ದೇವರು ಎಂಬ ಭಾವ
ಸೋಹೆ–ಗುರುತು, ಸುಳುಹು
ಸ್ವಂಯಲಿಂಗ–ಸ್ವಯಂಲಿಂಗ
ಸ್ಥಾವರ–ಸ್ಥಗಿತವ್ಯವಸ್ಥೆ, ಸ್ಥಾಪಿತಲಿಂಗ
ಸ್ವಾತಿ–ಸ್ವಾತಿನಕ್ಷತ್ರ
ಸ್ವಾಮಿಭೃತ್ಯ ಸಂಬಂಧ–ಒಡೆಯ ಸೇವಕ ಸಂಬಂಧ
ಸ್ವೇದಜ–ಬೆವರಿನಲ್ಲಿ ಹುಟ್ಟುವ ಜೀವಿ
ಹಂಗುಹರಿ–ಋಣ
ಹಂಜರ–ಪಂಜರ
ಹಂದೆ– ಹೇಡಿ
ಹಗರಣ–ವೇಷ, ಸೋಗು
ಹಗಹ–ಧಾನ್ಯ ಸಂಗ್ರಹಿಸುವ ತಗ್ಗು
ಹಡಿಕೆ–ದುರ್ವಾಸನೆ, ಮಲ
ಹಡೆದ ಕಾಯ–ಪಡೆದ ಶರೀರ
ಹಣಿದ–ಜೂಜಾಟ
ಹಡೆದೊಡವೆ–ಗಳಿಸಿದ ಸಂಪತ್ತು
ಹದುಳ–ಕ್ಷೇಮ
ಹನ್ನಿಬ್ಬರು–ಹನ್ನೆರಡು ಜನ
ಹಯನು–ಹೈನು
ಹರಕೆಯ ಕೇಡು–ಹರಹುವಿಕೆಯ ಕೇಡು?
ಹರದ–ಪರದ, ವ್ಯಾಪಾರಿ
ಹರಬೀಜ–ಶಿವಸಂತಾನ
ಹರ(ಹಿ)–ಹರವಿಕೊಂಡು
ಹರಿತಿನಿಸು–ಹರಿದು ತಿನ್ನಿಸು
ಹರಿಬ–ಕ್ರಮ
ಹರಿವ–ಹಲ್ಲಿನಿಂದ ಕೊರೆಯುವ
ಹರೆ ಪರೆ, ಹಲಗೆ
ಹಲ್ಲಣಿಸು–ಸಿದ್ಧಪಡಿಸು
ಹಲುದೋರೆ–ಹಲ್ಲುಕಾಣುವ ಹಾಗೆ
ಹವಣಿಸು–ಎಣಿಕೆಹಾಕು
ಹವಿ–(ಯಜ್ಞಕ್ಕೆ ಅರ್ಪಿಸುವ) ತುಪ್ಪ
ಹಸರ–ಪ್ರಸಾರ
ಹಸ್ತಬಾಯನೆ ಮುಚ್ಚಿ–ಕೈಮುಗಿದು
ಹಸುರಂಬಲಿ–ಸೊಪ್ಪಿನಿಂದ ಮಾಡಿದ ಅಂಬಲಿ
ಹಾಗ– ಒಂದು ಸಣ್ಣ ನಾಣ್ಯ
ಹಾರು–ಪಾರ್, ನಿರೀಕ್ಷಿಸು
ಹಾವುಗೆ–ಪಾದುಕೆ
ಹಾಸ–ನಗ್ಗೆ
ಹಿಡಿವಡೆ–ಸೆರೆಸಿಗು,
ಹಿದಿರೆ–ಬಣವೆ
ಹಿಳಿ–ಹಿಂಡು
ಹುಂಡ–ಗ್ರಾಮ್ಯ
ಹುದುವಾಳಿಗೆ–ಕೂಡಿಕೊಂಡು ಬಾಳುವುದು
ಹುಯ್ಯಲು–ದುಃಖಧ್ವನಿ, ದಾಳಿ
ಹುರಿಬುತ್ತಿ ಹುರಿದ ವಸ್ತುವಿನ ಅಡಿಗೆ
ಹುಲುಗಿಳಿ–ಕ್ಷುದ್ರಗಿಳಿ
ಹುಳ್ಳಿ–ಕಟ್ಟಿಗೆ
ಹುಳುಗುಪ್ಪೆ–ಹುಳದ ಗುಂಪು
ಹುಳುಗೊಂಡ–ಹುಳುಗಳಿಂದ ತುಂಬಿದ ನರಕ

ಹೂತು-ಹೂವು ಬಿಟ್ಟು
ಹೂವಿನ ಬೊಟ್ಟು-ಹಣೆಯ ಕುಂಕುಮ?
ಹೂಸು-ಪೂಸು, ಲೇಪಿಸು
ಹೆಂಪು-ಪೆಂಪು, ಹಿರಿಮೆ
ಹಗ್ಗುರಿ-ದೊಡ್ಡಕುರಿ, ಮೂರ್ಖ
ಹೆಡಗೈ-ಹಿಂದು ಎಳೆದ ಕೈ
ಹೆಡಗುಡಿ-ಹೆಡಮುರಿಗೆ
ಹೆಣಮೂಳ-ಹೆಣದಂಥವ
ಹೆರತೊಲಗು-ಹಿಂದೆ ಸರಿ
ಹೇಗತನ-ಹೆಗ್ಗತನ, ದಡ್ಡತನ
ಹೇಯ-ತಿರಸ್ಕಾರ
ಹೇಳಿಗೆ-(ಹಾವಿನ) ಬುಟ್ಟಿ
ಹೊಂದಿಗೆ-ಹೊದ್ದಿಗೆ, ಕೂಡುವಿಕೆ
ಹೊಂದು-ಸಾಯು
ಹೊಂಬಿತ್ತಾಳೆ-ಬಂಗಾರದ ಗಿಲೀಟು ಮಾಡಿದ ಹಿತ್ತಾಳೆ
ಹೊಟ್ಟೆ-ಬಾವು
ಹೊತ್ತಾರೆ-ಮುಂಜಾವು
ಹೊದಕುಳಿ-ಹುದುಗುವಿಕೆ
ಹೊನಲು-ಪ್ರವಾಹ
ಹೊಯ್ಲು-ಹುಯ್ಯಲು, ದುಃಖ
ಹೊರಸು-ಕಾಡುಪಾರಿವಾಳ, ಬೆಳವ
ಹೊರಹಂಚೆ-ಹೊರವೇಷ
ಹೊರೆ-ಹೊದಿಕೆ, ಪೋಷಿಸು, ಸಾಮಿಪ್ಯ
ಹೊಲಬು-ದಾರಿ
ಹೊಲಬಿಗ-ಸರಿಯಾದ ದಾರಿಯಲ್ಲಿರುವವನು
ಹೊಲಬುಗೆಡು-ದಾರಿತಪ್ಪು
ಹೊಲ್ಲ-ಕೆಟ್ಟ, ಅಯೋಗ್ಯ
ಹೊಲೆ-ಸ್ತ್ರೀಯರ ಮುಟ್ಟು
ಹೊಸತ-ಮೀಸಲು ಪದಾರ್ಥ
ಹೊಳ್ಳು-ಪೊಳ್ಳು
ಹೋಕು-ಹೋಗುವಿಕೆ

■ ■



# ಷಟ್ಸ್ಥಲ ವಚನಗಳ ಅಕಾರಾದಿ

ಆ

ಇ



ಈ



ಉ

**ಪ**

## ಆಕರ ಗ್ರಂಥಗಳು


ಅದ್ವೈತಾನಂದದ ವಚನಗಳು
ಸಂ: ಡಾ|| ಬಿ.ಆರ್. ಹಿರೇಮಠ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೩.

ಅನುಭಾವಜ್ಞಾನಸಾರಾಮೃತ ಸಂಪಾದನಾಸ್ತೋತ್ರ
ಸಂ: ಶ್ರೀ ಬಿ. ಆರ್. ಹೂಗಾರ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೯.

ಅಷ್ಟಾವರಣದ ವಚನಗಳು– ಎಳಮಲೆಯ ಗುರುಶಾಂತದೇವ
ಸಂ: ಡಾ|| ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೩.

ಆಚರಣೆಯ ಸಂಬಂಧದ ವಚನಗಳು– ಸಂಪಾದನೆಯ ಹರತಾಳ
ಚೆನ್ನನಂಜಯ ದೇವರು
ಸಂ: ಶ್ರೀ ಪಿ. ಎಂ. ಗಿರಿರಾಜು
ಶರಣ ಸಂತಾನ ಸಂಪಾದನ, ಶರಣ ಸಂತಾನ(ತ್ರೈಮಾಸಿಕ) ೪೪೭–
ಸಂತೆಪೇಟೆ, ಮೈಸೂರು–೧, ೧೯೮೨

ಆಚರಣೆಯ ಸಂಬಂಧದ ವಚನಗಳು–
ಸಂಪಾದನೆಯ ಸಿದ್ಧವೀರೇಶ್ವರ ದೇವರು
ಸಂ: ಶ್ರೀ ಪಿ. ಎಂ. ಗಿರಿರಾಜು
ಶರಣ ಸಂತಾನ ಸಂಪಾದನ, ಶರಣ ಸಂತಾನ(ತ್ರೈಮಾಸಿಕ) ೪೪೭–
ಸಂತೆಪೇಟೆ, ಮೈಸೂರು-೧, ೧೯೮೦

ಏಕೋತ್ತರ ಶತಸ್ಥಲ–ಮಹಾಲಿಂಗದೇವ
ಸಂ: ಪ್ರೊ. ಎಸ್. ಎಸ್. ಭೂಸನೂರಮಠ
ಶ್ರೀ ನಿ. ಪ್ರ. ಸ್ವ. ಶಿವಬಸವಮಹಾಸ್ವಾಮಿಗಳು, ನಾಗನೂರು,
ಹನುಮನ ಬೀದಿ, ಬೆಳಗಾವಿ. ೧೯೭೪.

ಏಕೋತ್ತರ ಶತಸ್ಥಲ –ಸಿದ್ಧಲಿಂಗ
ಸಂ: ಫ. ಗು. ಹಳಕಟ್ಟಿ
ಶಿವಾನುಭವ ಗ್ರಂಥಮಾಲೆ, ವಿಜಾಪುರ.

ಏಕೋತ್ತರ ಶತಸ್ಥಲಬೋಲ್ಲಿ
(ಅಪ್ರಕಟಿತ ಕ. ಅ. ಪೀ. ಹಸ್ತಪ್ರತಿ ಭಾಂಡಾರ)

ಏಕೋತ್ತರ ಶತಸ್ಥಲಸಾರಾಮೃತ– ಕಟ್ಟಿಗೆಹಳ್ಳಿ ಸಿದ್ಧಲಿಂಗಸ್ವಾಮಿ
(ಅಪ್ರಕಟಿತ ಕ. ಅ. ಪೀ. ಹಸ್ತಪ್ರತಿ ಭಾಂಡಾರ)

ಗಣಭಾಷಿತ ರತ್ನಮಾಲೆ– ಗುಬ್ಬಿ ಮಲ್ಲಣ್ಣ
ಸಂ: ಶ್ರೀ ಪ್ರಭುಸ್ವಾಮಿಗಳು
ಬಾಲಲೀಲಾಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ,
ಮುರುಘಾಮಠ, ಧಾರವಾಡ. ೧೯೪೮

ಗುರುಕಾರುಣ್ಯ
(ಜಿ. ಎ. ಶಿವಲಿಂಗಯ್ಯ, ಮೈಸೂರು. ಅವರ ಪ್ರತಿ)

ಚಿತ್ಕ್ರಿಯಾಸಂಗ್ರಹ– ಜಿಗುನಿ ಮರುಳದೇವರು
ಸಂ: ಡಾ|| ಎಸ್. ವಿದ್ಯಾಶಂಕರ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೩

ಚಿದ್ಭಸ್ಮಮಣಿಮಂತ್ರ ಮಹಾತ್ಮೆಯ ಸ್ಥಲದ ವಚನ– ಜಟಾಶಂಕರದೇವರು
ಸಂ: ಡಾ|| ಬಿ. ಆರ್. ಹಿರೇಮಠ, (ವಚನ ಸಂಕಲನ ಸಂಪುಟ–೧)
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೯೦

ಚಿದೈಶ್ವರ್ಯಚಿದಾಭರಣ –ಗರುಸಿದ್ಧದೇವ
ಸಂ: ಶ್ರೀ ಪಿ. ಎಂ. ಗಿರಿರಾಜು
ಶರಣ ಸಂತಾನ ಸಂಪಾದನ. ಶರಣ ಸಂತಾನ (ತ್ರೈಮಾಸಿಕ) ೪೪೭–
ಸಂತೆಪೇಟೆ, ಮೈಸೂರು. ೧೯೮೫

ಚೆನ್ನಬಸವೇಶ್ವರದೇವರ ಸ್ತೋತ್ರದ ವಚನಗಳು–
ಸಂ: ಜಿ. ಎ. ಶಿವಲಿಂಗಯ್ಯ
ಪ್ರ: ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೯೧

ಜಂಗಮಸ್ಥಲದ ಆಚರಣೆಯ ನಿರ್ಣಯದ ವಚನಗಳು
ಸಂ: ಡಾ|| ಬಿ. ಆರ್. ಹಿರೇಮಠ, (ವಚನ ಸಂಕಲನ ಸಂಪುಟ-೧)
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೯೦

ಜ್ಞಾನಷಟ್‌ಸ್ಥಲಸಾರ- ಗುರುಶಂಕರಸ್ವಾಮಿ
(ಅಪ್ರಕಟಿತ, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ)

ನಿರಸನದ ವಚನಗಳು
ಸಂ: ಡಾ|| ಬಿ. ಆರ್. ಹಿರೇಮಠ, (ವಚನ ಸಂಕಲನ ಸಂಪುಟ-೧)
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೯೦

ನಿಷ್ಕಲಲಿಂಗ ಚಿದಾನಂದಲೀಲೆ
(ಅಪ್ರಕಟಿತ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.)

ಪರಮಮೂಲಜ್ಞಾನಷಟ್‌ಸ್ಥಲ- ಚಿಕ್ಕವೀರಣ್ಣೊಡೆಯ
ಸಂ: ಡಾ|| ಎಂ. ಎಸ್. ಸುಂಕಾಪುರ
ಕನ್ನಡ ಅಧ್ಯಯನ ಪೀಠ, ಕ. ವಿ. ವಿ. ಧಾರವಾಡ. ೧೯೭೭

ಪ್ರಭುಲಿಂಗಲೀಲೆ- ಚಾಮರಸ
ಸಂ: ಶಿ. ಶಿ. ಬಸವನಾಳ
ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ. ೧೯೭೧

ಪ್ರಭುದೇವರ ಸ್ತೋತ್ರದ ವಚನಗಳು
-ಸಂಪಾದನೆಯ ಸಿದ್ಧವೀರಣ್ಣೊಡೆಯ
ಸಂ: ಶ್ರೀ ಎಸ್. ಶಿವಣ್ಣ, (ವಚನ ಸಂಕಲನ ಸಂಪುಟ-೩)
ಪ್ರ: ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೯೧

ಪ್ರಸಾದಿಸ್ಥಲದ ವಚನಗಳು
ಸಂ: ಡಾ|| ಎಂ. ಎಸ್. ಸುಂಕಾಪುರ
ಕನ್ನಡ ಅಧ್ಯಯನ ಪೀಠ, ಕ.ವಿ.ವಿ. ಧಾರವಾಡ. ೧೯೭೭

ಬಸವಣ್ಣನವರ ಷಟ್‌ಸ್ಥಲದ ವಚನಗಳು
ಸಂ: ಡಾ|| ಆರ್. ಸಿ. ಹಿರೇಮಠ
ಕರ್ನಾಟಕ ವಿಶ್ವವಿದ್ಯಾಲಯ. ಧಾರವಾಡ. ೧೯೬೮

ಬ್ರಹ್ಮಾದ್ವೈತ ಸಿದ್ಧಾಂತಷಟ್‌ಸ್ಥಲಾಭರಣ– ಕರಸ್ಥಲದ ಮಲ್ಲಿನಾಥ ಒಡೆಯ
ಸಂ: ಡಾ|| ಆರ್. ಸಿ. ಹಿರೇಮಠ
ಕನ್ನಡ ಅಧ್ಯಯನ ಪೀಠ, ಕ.ವಿ.ವಿ. ಧಾರವಾಡ. ೧೯೭೩

ಭಕ್ತ್ಯಾನಂದಸುಧಾರ್ಣವ
ಸಂ: ಡಾ|| ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೫

ಮಿಶ್ರಸ್ತೋತ್ರದ ವಚನಗಳು– ಸಂಪಾದನೆಯ ಚೆನ್ನಂಜೆದೇವರು
ಸಂ: ಪ್ರಭುಸ್ವಾಮಿಗಳು, ಹೊಸಹಳ್ಳಿ
ಬೂದಿಸ್ವಾಮಿ ಸಂಸ್ಥಾನಮಠ, ಹೊಸಹಳ್ಳಿ.

ಮಿಶ್ರಸ್ತೋತ್ರದ ವಚನಗಳು– ಎಳಮಲೆಯ ಗುರುಶಾಂತದೇವ
ಸಂ: ಡಾ|| ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೩

ಮೋಕ್ಷದರ್ಶನಸಂಗ್ರಹ
(ಅಪ್ರಕಟಿತ, ಮೈಸೂರು ವಿಶ್ವವಿದ್ಯಾಲಯ, ಮೈಸೂರು)

ಲಿಂಗಚಿದಮೃತಬೋಧೆ –ಶಾಂತಬಸವೇಶ್ವರ
ಸಂ: ಡಾ|| ಎಂ. ಎಸ್. ಸುಂಕಾಪುರ
ಕನ್ನಡ ಅಧ್ಯಯನ ಪೀಠ, ಕ. ವಿ. ವಿ. ಧಾರವಾಡ. ೧೯೭೫

ಲಿಂಗಲೀಲಾವಿಲಾಸಚಾರಿತ್ರ– ಕಲ್ಲುಮಠದ ಪ್ರಭುದೇವ
ಸಂ: ಸಂ. ಶಿ. ಭೂಸನೂರಮಠ
ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ,
ಮುರುಘಾಮಠ, ಧಾರವಾಡ. ೧೯೭೬

ಲಿಂಗವಿಕಳಾವಸ್ಥೆಯ ವಚನಗಳು– ಎಳಮಲೆಯ ಗುರುಶಾಂತದೇವ
ಸಂ: ಡಾ|| ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೩

ಲಿಂಗಸ್ತೋತ್ರದ ವಚನಗಳು– ಸಂಪಾದನೆಯ ಸಿದ್ಧವೀರಣ್ಣದೇವರು
ಸಂ: ಶ್ರೀ ವೀರಭದ್ರಪ್ಪ ಕೊಪ್ಪಳ.
ಶ್ರೀಗುರುಬಸವ ಮಂಟಪ. ಟ್ರಸ್ಟ ಕಮೀಟಿ. ಹುಬ್ಬಳ್ಳಿ. ೧೯೬೪

ವಚನಸಾರ
ಸಂ: ಡಾ|| ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೯

ವಚನಾಮೃತಸಾರ
ಸಂ: ಪ್ರೊ|| ಕಾಶಿಪ್ಪಸೋಮಾರಾಧ್ಯ, ಡಾ|| ವೀರಣ್ಣ ರಾಜೂರ.
ಮಂಗಳಪ್ರಕಾಶನ. ಕಲ್ಯಾಣನಗರ. ಧಾರವಾಡ. ೧೯೭೯

ವಚನೈಕೋತ್ತರಶತಸ್ಥಲ– ಚೆನ್ನಬಸವಣ್ಣ
ಸಂ: ಜಿ. ಎ. ಶಿವಲಿಂಗಯ್ಯ.
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೩

ವಿರತಾಚರಣೆಯು ಶರಣಸಂಬಂಧದ ವಚನಗಳು– ಶಂಕರದೇವರು
ಸಂ: ಪಿ. ಎಂ. ಗಿರಿರಾಜು
ಶರಣ ಸಂತಾನ ಸಂಪಾದನ. ಶರಣ ಸಂತಾನ (ತ್ರೈಮಾಸಿಕ) ೪೪೭–
ಸಂತೆಪೇಟೆ, ಮೈಸೂರು–೧. ೧೯೭೯

ವಿಶೇಷಾನುಭವಷಟ್‌ಸ್ಥಲ
ಸಂ: ಡಾ|| ಆರ್. ಸಿ. ಹಿರೇಮಠ
ಕನ್ನಡ ಅಧ್ಯಯನ ಪೀಠ, ಕ.ವಿ.ವಿ. ಧಾರವಾಡ. ೧೯೭೧

ವೀರಶೈವಶಿಖಾರತ್ನ
(ಅಪ್ರಕಟಿತ, ಕನ್ನಡ ಅಧ್ಯಯನ ಪೀಠ, ಧಾರವಾಡ)

ವೀರಶೈವಚಿಂತಾಮಣಿ– ಮಹದ್ದೇವಯೋಗಿ
ಸಂ: ಡಾ|| ಆರ್ ಸಿ. ಹಿರೇಮಠ
ಕನ್ನಡ ಅಧ್ಯಯನ ಪೀಠ, ಕ ವಿ.ವಿ. ಧಾರವಾಡ. ೧೯೭೧

ವೀರಶೈವಾಭರಣ– ಗೌರವಾಂಕ
(ಜಿ. ಎ. ಶಿವಲಿಂಗಯ್ಯ, ಮೈಸೂರು, ಅವರ ಪ್ರತಿ)

ಶರಣಚಾರಿತ್ರದ ವಚನಗಳು - ಸಂಪಾದನೆಯ ಸಣ್ಣಬರಹದ
ಗುರುಬಸವರಾಜ ದೇವರು
ಸಂ: ಡಾ|| ಬಿ. ವಿ. ಶಿರೂರ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೪

ಶರಣಮುಖಮಂಡನ
ಸಂ: ಡಾ|| ಬಿ. ವಿ. ಶಿರೂರ, ಶ್ರೀ ಬಿ. ಆರ್. ಹೊಗಾರ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೮

ಶರಣಸ್ತೋತ್ರದ ವಚನಗಳು- ಎಳಮಲೆಯ ಗುರುಶಾಂತದೇವ
ಸಂ: ಡಾ|| ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೩

ಶಿವತತ್ತ್ವ ಚಿಂತಾಮಣಿ
ಸಂ. ಎಚ್. ದೇವೀರಪ್ಪ
ಓರಿಯಂಟಲ್ ರೀಸರ್ಚ ಇನ್‌ಸ್ಟಿಟ್ಯೂಟ್. ಮೈಸೂರು. ೧೯೬೦

ಶಿವನ ಬಿರುದಾವಳಿ (ಸ್ತೋತ್ರದ ವಚನಗಳು)
ಸಂಪಾದನೆಯ ಸಿದ್ಧವೀರಣ್ಣೊಡೆಯ
ಸಂ: ಶ್ರೀ ಎಸ್. ಶಿವಣ್ಣ (ವಚನ ಸಂಕಲನ ಸಂಪುಟ-೩)
ಪ್ರ: ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೯೧

ಶಿವಮಹಿಮಾಸ್ತೋತ್ರದ ವಚನಗಳು- ವೀರಸಂಗಯ್ಯ
ಸಂ: ಡಾ|| ವೀರಣ್ಣ ರಾಜೂರ
ಕರ್ನಾಟಕ ಭಾರತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೧೯೮೬. ಸಂಪುಟ-೧೯ ಸಂಚಿಕೆ-೨

ಶಿವಯೋಗ ಚಿಂತಾಮಣಿ
ಸಂ: ಡಾ|| ಉಮಾದೇವಿ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೭

ಶಿವಾಧಿಕ್ಯಪುರಾಣ ಬಸವಲಿಂಗ
(ಅಪ್ರಕಟಿತ. ಕ.ಅ.ಸಂಸ್ಥೆಯ ಹಸ್ತಪ್ರತಿಭಾಂಡಾರ. ಮೈಸೂರು)

ಶೀಲಸಂಪಾದನೆ
ಸಂ: ಡಾ|| ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೪

ಶೂನ್ಯಸಂಪಾದನೆ- ಶಿವಗಣ ಪ್ರಸಾದಿ ಮಹದೇವಯ್ಯ
ಸಂ: ಡಾ|| ಆರ್. ಸಿ. ಹಿರೇಮಠ
ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ. ೧೯೭೧

ಶೂನ್ಯಸಂಪಾದನೆ- ಹಲಗೆದೇವ
(ಅಪ್ರಕಟಿತ. ಕ. ಅ. ಸಂಸ್ಥೆಯ ಹಸ್ತಪ್ರತಿಭಾಂಡಾರ. ಮೈಸೂರು)

ಶೂನ್ಯಸಂಪಾದನೆಯ-ಗುಮ್ಮಳಾಪುರದ ಸಿದ್ಧಲಿಂಗದೇವ
ಸಂ: ಡಾ|| ಆರ್. ಸಿ. ಹಿರೇಮಠ
ಕನ್ನಡ ಅಧ್ಯಯನ ಪೀಠ, ಕ.ವಿ.ವಿ. ಧಾರವಾಡ. ೧೯೭೨

ಶೂನ್ಯಸಂಪಾದನೆಯ- ಗೂಳೂರು ಸಿದ್ಧವೀರಣ್ಣೊಡೆಯ
ಸಂ: ಪ್ರೊ. ಸಂ. ಶಿ. ಭೂಸನೂರಮಠ
ರಾವೂರ ಶ್ರೀ ಸಿದ್ಧಲಿಂಗೇಶ್ವರ ಮಠ ಮತ್ತು
ಆದವಾನಿಯ ಕಲ್ಲುಮಠದ ಅಧಿಪತಿಗಳು- ೧೯೬೬

ಷಟ್‌ಸ್ಥಲದ ವಚನಗಳು(ಬಸವಣ್ಣ)
(ಹಸ್ತಪ್ರತಿ ೫೧, ಕನ್ನಡ ಅಧ್ಯಯನ ಪೀಠ, ಧಾರವಾಡ)

ಷಟಸ್ಥಲ ಬ್ರಹ್ಮಾನಂದವಿರಕ್ತ ಚಾರಿತ್ರಸಂಪಾದನೆಯ ವಚನಗಳು-
ಸಂಪಾದನೆಯ ಬೋಳಬಸವೇಶ್ವರ ದೇವರು.
ಸಂ: ಪ್ರೊ|| ಎಸ್. ಉಮಾಪತಿ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೪

ಷಟ್‌ಸ್ಥಲಸ್ತೋತ್ರದ ವಚನಗಳು- ಎಳಮಲೆಯ ಗುರುಶಾಂತದೇವ
ಸಂ: ಡಾ|| ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸುಸ್ಥೆ, ತೋಂಟದಾರ್ಯಮಠ, ಗದಗ. ೧೯೫೩

ಷಟ್‌ಪ್ರಕಾರಸಂಗ್ರಹ- ಶಾಂತವೇವರು
ಸಂ: ಜಿ. ಎ. ಶಿವಲಿಂಗಯ್ಯ
ವೀರಶೈವ ಅಧ್ಯಯನ ಸಂಸ್ಥೆ. ತೋಂಟದಾರ್ಯಮಠ, ಗವಗ. ೧೯೮೭

ಸಂಪಾದನೆಯ ಸಾರಾಮೃತ- ಕಟ್ಟಿಗೆಹಳ್ಳಿ ಸಿದ್ಧಲಿಂಗಸ್ವಾಮಿ
ಸಂ: ಡಾ|| ಬಿ. ಆರ್. ಹಿರೇಮಠ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೮

ಸಂಬಂಧಾಚರಣೆಯ ವಚನಗಳು
ಸಂ: ಶ್ರೀ ಪಿ. ಎ. ಗಿರಿರಾಜ
ಶರಣ ಸಂತಾನ ಸಂಪಾದನ, ಶರಣಸಂತಾನ (ತ್ರೈಮಾಸಿಕ) ೪೪೭-
ಸುತ್ತೆಪೇಟೆ ಮೈಸೂರು-೧. ೧೯೮೬

ಸಕಲಪುರಾತನರ ವಚನಗಳು-೧
ಸಂ: ಡಾ|| ಆರ್. ಸಿ. ಹಿರೇಮಠ
ಕನ್ನಡ ಅಧ್ಯಯನ ಪೀಠ, ಕ.ವಿ.ವಿ. ಧಾರವಾಡ. ೧೯೭೨

ಸಕಲಪುರಾತನರ ವಚನಗಳು-೨
ಸಂ: ಡಾ|| ಎಂ. ಎಸ್. ಸುಂಕಾಪುರ
ಕನ್ನಡ ಅಧ್ಯಯನ ಪೀಠ, ಕ.ವಿ.ವಿ. ಧಾರವಾಡ. ೧೯೭೬

ಸಿಂಗಿರಾಜ ಪುರಾಣ- ಸಿಂಗಿರಾಜ
ಸಂ: ಎಚ್. ದೇವೀರಪ್ಪ
ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್, ಮೈಸೂರ. ೧೯೬೦

ಸುಖಸಂಪಾದನೆಯ ವಚನಗಳು
ಸಂ: ಡಾ|| ಬಿ. ಆರ್. ಹಿರೇಮಠ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೭

ಸೂಕ್ಷ್ಮಮಿಶ್ರಷಟ್‌ಸ್ಥಲ-ಮಹಾಲಿಂಗದೇವ
ಸಂ: ಡಾ|| ವೀರಣ್ಣ ರಾಜೂರ
ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ. ೧೯೮೭



# ಒಪ್ಪೋಲೆ

| ವಚನ ಸಂಖ್ಯೆ | ತಪ್ಪು | ಒಪ್ಪು |
|---|---|---|
| ೧೦೭ | ಲಂಗ | ಲಿಂಗ |
| ೧೦೮ | ಪಂದಿ | ಹಂದೆ |
| ೧೭೧ | ೨೭೧ | ೧೭೧ |
| ೧೯೬ | ಬಕ್ತಿ | ಭಕ್ತಿ |
| ೨೦೬ | ಲಂಗ | ಲಿಂಗ |
| ೨೨೪ | ಶಿಬೆಯು | ಶಿಬಿಯು |
| ೨೫೪ | ಆಳ | ಆಳ್ದ |
| ೨೭೯ | ಬೇಡಿದವರಿಗಿಲ್ಕೆನ್ನದಿರು | ಬೇಡಿದವರಿಗಿಲ್ಲೆನ್ನದಿರು |
| ೨೮೦ | ಚಿಲೀಂ | ಚಿಲ್ಲೀಂ |
| ೩೦೪ | ಕೂಡಲಸಂಗಮಪೇ[ವಾ] | ಕೂಡಲಸಂಗಮದೇ[ವಾ] |
| ೩೦೫ | ಅನು | ಆನು |
| ೫೮೨ | ದಕ್ಷಯಾಗ | ದಕ್ಷ ಯಾಗ |
| ೭೧೯ | ೭೧೪ | ೭೧೯ |
| ೭೭೬ | ನುಡಿಬಿರಯ್ಯಾ | ನುಡಿವಿರಯ್ಯಾ |
| ೭೮೨ | ೭೮ | ೭೮೨ |
| ೮೦೧ | ಪರುಷವೇದಿ | ಪರುಷವೇಧಿ |
| ೮೧೫ | ನೆಟ್ಟಿಲುವ | ನಿಟ್ಟೆಲುವ |
| ೮೫೨ | ಶ್ರವಣ | ಶ್ರಪಣ |
| ೮೯೯ | ಅವರಸಯ್ಯಾ | ಆವರಸಯ್ಯಾ |
| ೯೧೪ | ಅನೀನೆಂಬೊಂದು | ಆನೀನೆಂಬೊಂದು |
| ೯೫೭ | ಅಷ್ಟ ತನು | ಅಷ್ಟತನು |
| ೯೭೫ | ೬೭೫ | ೯೭೫ |
| ೧೧೪೬ | ನಮ್ಮಿಂದ | ನಿಮ್ಮಿಂದ |
| ೧೧೫೫ | ಪೂರೆಯು | ಹೊರೆಯು |
| ೧೨೨೬ | ಮುನ್ನೂರರ್ರವತ್ತು | ಮುನ್ನೂರರುವತ್ತು |
| ೧೩೫೧ | ಂಗವಿರದೆ | ಲಿಂಗವಿರದೆ |
| ೧೩೫೯ | ದಾಸೋವ | ದಾಸೋಹ |
| ೧೩೭೫ | ಸ್ವಾನ | ಶ್ವಾನ |

# ಸಮಗ್ರ ವಚನಸಾಹಿತ್ಯ ಪ್ರಕಟನ ಯೋಜನೆ

'ಸಮಗ್ರ ವಚನಸಾಹಿತ್ಯದ ಪ್ರಕಟನ ಯೋಜನೆ' ಕರ್ನಾಟಕ ಸರ್ಕಾರದ ಈ ವರೆಗಿನ ಸಾಹಿತ್ಯಕ ಸಾಧನೆಗಳಲ್ಲಿ ಒಂದು ಮಹತ್ವದ ದಾಖಲೆಯಾಗಿದೆ. ಇದು ಒಂದು ಸಾಹಿತ್ಯಕೃತಿಯ ಪ್ರಕಟನೆಯಲ್ಲ; ಒಂದು ಸಾಹಿತ್ಯಪ್ರಕಾರದ ಪ್ರಕಟನೆ.

ತತ್ವಕ್ಕೆ ತತ್ವ, ಸಾಹಿತ್ಯಕ್ಕೆ ಸಾಹಿತ್ಯವಾಗಿರುವ 'ವಚನ ವಾಙ್ಮಯ' ಏಕಕಾಲಕ್ಕೆ ಆತ್ಮಕಲ್ಯಾಣವನ್ನೂ ಸಮಾಜಕಲ್ಯಾಣವನ್ನೂ ಪ್ರತಿಪಾದಿಸುವ ಮೂಲಕ ಜಾಗತಿಕ ಮಹತ್ವ ಗಳಿಸಿದೆ. ಈ ಮೌಲಿಕ ಸಾಹಿತ್ಯವನ್ನು ಸುಲಭ ಬೆಲೆಯಲ್ಲಿ ಜನತೆಗೆ ಒದಗಿಸುವುದು ಈ ಯೋಜನೆಯ ಉದ್ದೇಶವಾಗಿದೆ.

ಇವತ್ತಿನ ಮಿತಿಗೆ ಸಿಗುವ ಬಸವಯುಗ ಮತ್ತು ಬಸವೋತ್ತರ ಯುಗಗಳ ಎಲ್ಲ ಶರಣರ ಎಲ್ಲ ವಚನಗಳನ್ನು ಸಂಗ್ರಹಿಸಿ, ಸಂಸ್ಕರಿಸಿ, ಪ್ರಕಟಿಸಿದ ಪ್ರಯತ್ನವಿದು. ಈ ಮೂಲಕ ಬಸವಯುಗದ ಹಲವು ಹೊಸ ವಚನಗಳು ಬೆಳಕಿಗೆ ಬರುವುದರೊಂದಿಗೆ ಬಸವೋತ್ತರ ಯುಗದ ಸಮಗ್ರ ವಚನ ಸಂಪತ್ತು ಪ್ರಥಮಸಲ ಹೊರಬರುತ್ತಿರುವುದು ಈ ಯೋಜನೆಯ ವಿಶೇಷ ಸಾಧನೆಯಾಗಿದೆ.

೮೦೦ ವರ್ಷಗಳುದ್ದಕ್ಕೂ ಬೆಳೆದುಬಂದ ಈ ಸಾಹಿತ್ಯದ ವ್ಯಾಪ್ತಿಯನ್ನು ಪ್ರಥಮಬಾರಿ ಗುರುತಿಸಿಕೊಡುತ್ತಿರುವ ಈ ಸಾಹಸದ ಫಲವಾಗಿ, ೨೦ ಸಾವಿರ ವಚನಗಳು ಸುಮಾರು ೧೦ ಸಾವಿರ ಪುಟ ವ್ಯಾಪ್ತಿಯ ೧೫ ಸಂಪುಟಗಳಲ್ಲಿ (ವಚನ ಪರಿಭಾಷಾಕೋಶ ಸೇರಿ) ಬೆಳಕು ಕಾಣುತ್ತಿವೆ.